




ಬಿ.ವಿ.ಕೆ.ಯವರ 'ಬರೆಯದ ದಿನಚರಿಯ ಮರೆಯದ ಪುಟಗಳು' ಕೃತಿಯನ್ನು ಬಿಡುಗಡೆ ಮಾಡುವುದರ ಮೂಲಕ ಕಾಂ. ಅಮರಜೀತ್ ಕೌರ್ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಪಕ್ಕದಲ್ಲಿ ಡಾ. ಬಿ. ಶ್ರೀನಿವಾಸ ಕಕ್ಕಿಲ್ಲಾಯ




'ರಾಷ್ಟ್ರೀಯ ಪ್ರಜಾಸತ್ತಾತ್ಮಕ ಕ್ರಾಂತಿ' ಕುರಿತು ಶ್ರೀ ಕಳಲೆ ಪಾರ್ಥಸಾರಥಿ ಮತ್ತು ಶ್ರೀ ದಿನೇಶ್ ಅಮೀನ್ ಮಟ್ಟು.



'ಕರ್ನಾಟಕದಲ್ಲಿ ಭೂಸುಧಾರಣೆ : ಎಲ್ಲಿಂದ ಎಲ್ಲಿಗೆ?' ಕುರಿತು ಕಾಂ. ಪಿ. ವಿ. ಲೋಕೇಶ್, ಡಾ. ಚಂದ್ರ ಪೂಜಾರಿ ಮತ್ತು ಶ್ರೀ ದಿನೇಶ್ ಅಮೀನ್ ಮಟ್ಟು



ಸಂಗೀತ ಕಛೇರಿ : ವಿದ್ವಾನ್ ಟಿ. ಎಂ. ಕೃಷ್ಣ, ವಯಲಿನ್: ವಿದುಷಿ ಅಕ್ಕರೈ ಶುಭಲಕ್ಷ್ಮಿ, ಮೃದಂಗ : ವಿದ್ವಾನ್ ಜಯಚಂದ್ರ ರಾವ್ ಕೆ. ಯು.



'ಕವಲುದಾರಿಯಲ್ಲಿ ಭಾರತದ ಯುವಜನರು' ಕುರಿತು ಕಾಂ. ಕನ್ಹಯ್ಯ ಕುಮಾರ್ ಮತ್ತು ಕಾಂ. ಅಮರಜೀತ್ ಕೌರ್ ಮಾತನಾಡಿದರು



'ಬಿ. ವಿ. ಕಕ್ಕಿಲ್ಲಾಯ : ಮಲಬಾರಿನಿಂದ ಕರ್ನಾಟಕ ವಿಧಾನಸಭೆಯವರೆಗೆ' ಕುರಿತು ಡಾ. ಸಿದ್ದನಗೌಡ ಪಾಟೀಲ




'ದಮನಿತರ ಹೋರಾಟಗಳು : ಸಿದ್ಧಾಂತ ಮತ್ತು ಕ್ರಿಯೆ' ಕುರಿತು ಪ್ರೊ. ಆನಂದ ತೇಲ್ತುಂಬ್ಡೆ ಮತ್ತು ಡಾ. ಕನ್ಹಯ್ಯ ಕುಮಾರ್



'ಕನ್ನಡದಲ್ಲಿ ತತ್ವಶಾಸ್ತ್ರ, ಇತಿಹಾಸ ಮತ್ತು ಅರ್ಥಶಾಸ್ತ್ರದ ಬರಹಗಳು' ಕುರಿತು ಡಾ. ಜಿ. ರಾಮಕೃಷ್ಣ, ಶ್ರೀ ಕಳಲೆ ಪಾರ್ಥಸಾರಥಿ, ಡಾ. ವಿಜಯ್ ಪೂಣಚ್ಚ ತಂಬಂಡ ಮತ್ತು ಡಾ. ಟಿ. ಎಸ್. ವೇಣುಗೋಪಾಲ್



'ಕಲೆಯ ಮರುನಿರೂಪಣೆ' ಕುರಿತು ಕಾಂ. ನೂರ್ ಜಹೀರ್ ಮತ್ತು ಟಿ. ಎಂ. ಕೃಷ್ಣ

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು

**ಮುಖಪುಟ :** ರಾಜ್ಯ ಹಾಗೂ ದೇಶದಲ್ಲಿ ಉಂಟಾದ ಪ್ರವಾಹದ ಚಿತ್ರಗಳು

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಕಾಂಗ್ರೆಸ್ಸಿಗೆ ಗಾಂಧಿ ಕುಟುಂಬವೇ ಗತಿ ಎಂದು ಕಾಣುತ್ತದೆ. ಸೋತು ಮಣ್ಣು ಮುಕ್ಕಿದರೂ ಪುನರುತ್ಥಾನಕ್ಕೆ ಅವರೇ ಆಗಬೇಕು. ಬೇಕಾದಷ್ಟು ತಿಣುಕಾಡಿ ತಿಂಗಳುಗಟ್ಟಲೆ ಕಾದು ಕೊನೆಗೆ ಸೋನಿಯಾ ಗಾಂಧಿಗೇ ಪಟ್ಟ ಕಟ್ಟಿದ್ದಾರೆ; ರಾಹುಲ್ ಗಾಂಧಿ ಪಟ್ಟುಹಿಡಿದು ಕೆಳಗಿಳಿದ ನಂತರ. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಯಾರೂ ಅಧಿಕಾರ ವಹಿಸಿಕೊಳ್ಳಲಿಲ್ಲ. ರಾಹುಲ್ ಗಾಂಧಿಗೆ ದುಂಬಾಲು ಬಿದ್ದು ಮುಂದುವರಿಯುವಂತೆ ಕೋರಿದ್ದಾಯಿತು. ಪ್ರಿಯಾಂಕ ಗಾಂಧಿಯನ್ನು ಗಾದಿ ಏರುವಂತೆ ಪುಸಲಾಯಿಸಲಾಯಿತು. ಎಲ್ಲ ಕಡೆ ಕಾಂಗ್ರೆಸ್ ಹಿಂಡುಹಿಂಡಾಗಿ ಭಾಜಪ ಸೇರತೊಡಗಿದ್ದಾರೆ. ಅಂದ ಹಾಗೆ ಭಾಜಪವನ್ನು ಬೆಳೆಸಿದ್ದೇ, ಅದಕ್ಕೆ ಅಧಿಕಾರದ ರುಚಿ ತೋರಿಸಿದ್ದೇ, ಕಾಂಗ್ರೆಸ್. ಇಬ್ಬರು ಪಾರ್ಲಿಮೆಂಟ್ ಸದಸ್ಯರಿದ್ದ ಭಾಜಪ ಇಂದು ೩೦೦ಕ್ಕೂ ಹೆಚ್ಚು ಸ್ಥಾನ ಗಳಿಸುವಂತೆ ಮಾಡಿದ್ದು ಇಂದಿರಾ ಗಾಂಧಿಯ ದುಸ್ಸಾಹಸವೆ. ದೇಶದ ಮೇಲೆ ತುರ್ತು ಪರಿಸ್ಥಿತಿ ಹೇರಿ ಚೆಲ್ಲಾಟವಾಡಿದ್ದಕ್ಕೆ ಕಾಂಗ್ರೆಸ್ಸಿಗೆ ತಕ್ಕ ಶಿಕ್ಷೆಯಾಗಿತ್ತು. ಕಾಂಗ್ರೆಸ್ ಇಬ್ಭಾಗವಾಗುವುದಕ್ಕೂ ಇಂದಿರಾ ಗಾಂಧಿಯೇ ಕಾರಣ. ಆದರೂ ಕಾಂಗ್ರೆಸ್ಸಿಗೆ ಗಾಂಧಿ ಕುಟುಂಬದ ವ್ಯಾಮೋಹ ಇನ್ನೂ ಹೋಗಿಲ್ಲ. ಕಾಂಗ್ರೆಸ್ಸಿನ ಇಂದಿನ ಸ್ಥಿತಿಗೆ ಕರ್ನಾಟಕದ ಕಾಂಗ್ರೆಸ್ ಪಕ್ಷವೇ ಸಾಕ್ಷಿ. ರಾಹುಲ್ ಗಾಂಧಿ ಆತುರಾತುರವಾಗಿ ಹೊಸೆದ ಮೈತ್ರಿ ಸರಕಾರ ಅಸ್ತಿತ್ವಕ್ಕೆ ಬಂದಾಗಲೇ ಅದು ಹೆಚ್ಚು ಕಾಲ ಬಾಳದು ಎಂದು ಗೊತ್ತಾಗಿತ್ತು. ಕಾಂಗ್ರೆಸ್ಸಿನಿಂದ ಹತ್ತಿಪ್ಪತ್ತು ಮಂದಿ, ಅಪ್ಪ ಮಗನ ಜೆಡಿಎಸ್‌ನಿಂದ ಕೆಲಮಂದಿ ಶಾಸಕರು ರಾಜೀನಾಮೆ ನೀಡಿದ ನಂತರ ಭಾಜಪ ಕಡೆಗೆ ವಾಲಿದರು. ಕಾದು ಕುಳಿತಿದ್ದ ಭಾಜಪ ಅಧಿಕಾರಕ್ಕೆ ಬಂತು. ಹಾಗೆಯೇ ಬಾಜಾಬಜಂತ್ರಿಯಿಂದ ರಚನೆಯಾದ ಮಹಾಮೈತ್ರಿ – ಮಹಾಘಟಬಂಧನ್ ಎಂಬುದಾಗಿ ಪ್ರಚಾರ ಪಡೆದ ಮೈತ್ರಿಕೂಟವೂ ಕೂಡ ಮುರಿದುಬಿತ್ತು. ಭಾಜಪಗೆ ಮತ್ತೆ ಅಧಿಕಾರ ಬಂತು ಅತಿಹೆಚ್ಚು ಬಹುಮತದಿಂದ. ಕಾಂಗ್ರೆಸ್ಸಿನ ಜೊತೆಗೇ ಎಡಪಕ್ಷಗಳೂ ಎಡವಿ ಮುಗ್ಗರಿಸಿದ್ದು ಈಗ ಇತಿಹಾಸ. ಇಷ್ಟಾದರೂ ಕಾಂಗ್ರೆಸ್ಸಿಗೆ ಗಾಂಧಿ ಕುಟುಂಬವನ್ನು ಬಿಟ್ಟು ಬೇರೊಬ್ಬ ಕಾಂಗ್ರೆಸ್ ನಾಯಕನನ್ನು ಪ್ರತಿಷ್ಠಾಪಿಸಲು ಸಾಧ್ಯವಾಗಲಿಲ್ಲ. ಇದು ಕಾಂಗ್ರೆಸ್ಸಿನ ದುರಂತ.

ಕರ್ನಾಟಕದ ಬಹುಭಾಗ ಪ್ರವಾಹ ಪೀಡಿತವಾಗಿದೆ. ಉತ್ತರದ ಹಲವು ಜಿಲ್ಲೆಗಳು ಜಲಾವೃತವಾಗಿವೆ. ಜನಜೀವನ ಅಸ್ತವ್ಯಸ್ತವಾಗಿದೆ. ಪ್ರಕೃತಿ ವಿಕೋಪದಿಂದ ಬಡಜನರ ಜೀವನ ದುಸ್ತರವಾಗಿದೆ. ಇದು ಒಂದು ಕಡೆಯಾದರೆ ರಾಜಕೀಯವಾಗಿಯೂ ಕರ್ನಾಟಕ ಅಧೋಗತಿಗೆ ಇಳಿದಿದೆ. ಭಾಜಪ ಅಧಿಕಾರ ಹಿಡಿದಿದೆ. ಯಡಿಯೂರಪ್ಪ ಮುಖ್ಯಮಂತ್ರಿಯಾಗಿ ವಿರಾಜಿಸಿದ್ದಾರೆ. ಅವರ ಕನಸು ನನಸಾಗಿದೆ. ಕಾಂಗ್ರೆಸ್ಸಿಗರ ತಳಮಳವೇ ಇದಕ್ಕೆ ಕಾರಣ. ಅಂತೂ ಭಾಜಪ ಕಡೆಗೆ ವಲಸೆಹೋಗುವ ಪ್ರವಾಹ ತಡೆಗಟ್ಟಲು ಸಿದ್ದರಾಮಯ್ಯ, ಗುಂಡೂರಾವ್, ಶಿವಕುಮಾರಗಳಿಗೆ ಸಾಧ್ಯವಾಗಲಿಲ್ಲ. ಕುಮಾರಣ್ಣನಿಗೂ ವಲಸೆ ತಡೆಯಲು ಆಗಲಿಲ್ಲ. ಸಮ್ಮಿಶ್ರ ಸರಕಾರ, 'ದೋಸ್ತಿ ಸರಕಾರ' ಎಂದು ಭಾಜಪ ನಾಮಕರಣ ಮಾಡಿದ್ದ ಸರಕಾರ ಪ್ರವಾಹದಲ್ಲಿ ಕೊಚ್ಚಿಹೋಯಿತು. ಈಗ ಈ ಎರಡು ಪಕ್ಷಗಳೂ ಚಿಂತಾಜನಕ ಸ್ಥಿತಿಯಲ್ಲಿ ಮುಳುಗಡೆಯಾಗಿವೆ. ರಾಜ್ಯದಲ್ಲಿ ಭಾಜಪ ಸ್ಥಿತಿಯೂ ಭಿನ್ನವಾಗಿಲ್ಲ. ವಾರಗಟ್ಟಳೆಯಾದರೂ ಸಂಪುಟ ರಚನೆಯ ಕಸರತ್ತು ಮುಗಿದಿರಲಿಲ್ಲ. ರಾಜಕೀಯ ಚಾಣಾಕ್ಷ ಅಮಿತ್ ಷಾ – ಮೋಡಿಯ – ಮೋದಿಗೂ ಕರ್ನಾಟಕ ಭಾಜಪದ ಮೇಲೆ ಹಿಡಿತ ಸಾಧಿಸಲಾಗಿಲ್ಲ. ಸಚಿವಾಕಾಂಕ್ಷಿಗಳ ದಂಡೇ ಇದೆ. ಕರ್ನಾಟಕ ಸಂಪುಟವೇ ಇಲ್ಲದೆ ಏಕಾಂಗಿ ಯಾಗಿ ಅಧಿಕಾರ ಚಲಾಯಿಸುತ್ತಿರುವ ಯಡಿಯೂರಪ್ಪನವರನ್ನು ಮಾತ್ರ ಕಾಣುತ್ತಿದೆ. ಅತೃಪ್ತರ ಸಮಸ್ಯೆಯನ್ನು ಕಾಂಗ್ರೆಸ್ಸಿನಂತೆಯೇ

*(೭ನೇ ಪುಟಕ್ಕೆ)*



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೧ ಸಂಚಿಕೆ-೨ ಸೆಪ್ಟೆಂಬರ್ ೨೦೧೯

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ರಮೇಶ ಉಡುಪ

**ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೧, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೯೧೧, ೨೨೧೬೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ಅಭಿವೃದ್ಧಿ ಹೆಸರಿನಲ್ಲಿ ಕಾಶ್ಮೀರ ಮಾರಾಟಕ್ಕಿದೆ

ಜಮ್ಮು - ಕಾಶ್ಮೀರ ರಾಜ್ಯಕ್ಕೆ ವಿಶೇಷ ಸ್ವಾಯತ್ತತೆ ಕಲ್ಪಿಸಿದ್ದ ಆರ್ಟಿಕಲ್ ೩೭೦ಅನ್ನು ರದ್ದುಗೊಳಿಸಿದ ಕೇಂದ್ರ ಸರಕಾರದ ಕ್ರಮ ವಿವಾದವನ್ನು ಹುಟ್ಟುಹಾಕಿದೆ. ಕೇಂದ್ರ ಸರಕಾರದ ಕ್ರಮದ ಪರವಾಗಿ, ವಿರೋಧವಾಗಿ ತೀವ್ರವಾದ ಚರ್ಚೆಗಳು ನಡೆಯುತ್ತಿವೆ. ಕೇಂದ್ರ ಸರಕಾರದ ನಡೆಯನ್ನು ಪ್ರಶ್ನಿಸಿ ಸುಪ್ರೀಂ ಕೋರ್ಟ್‌ನಲ್ಲಿ ವಿವಾದಗಳು ದಾಖಲಾಗುತ್ತಿವೆ. ಜಮ್ಮು - ಕಾಶ್ಮೀರಕ್ಕಿದ್ದ ರಾಜ್ಯ ಸ್ಥಾನವನ್ನು ರದ್ದು ಮಾಡಿ ಜಮ್ಮು - ಕಾಶ್ಮೀರ ಹಾಗೂ ಲಡಾಕ್ ಪ್ರದೇಶವನ್ನು ಕೇಂದ್ರಾಡಳಿತ ಪ್ರದೇಶವನ್ನಾಗಿ ಮಾಡಲಾಗಿದೆ. ಭಾರತೀಯ ಜನತಾ ಪಕ್ಷ ಮತ್ತು ಬಹುತೇಕ ಮಾಧ್ಯಮಗಳು ಇದೊಂದು ಕ್ರಾಂತಿಕಾರಿ ನಡೆ, ಭಾರತದ ವಿಲೀನ ಪೂರ್ಣಗೊಂಡಿತು, ಕಾಶ್ಮೀರ ಕಣಿವೆಯ ಭಯೋತ್ಪಾದನೆಗೆ ಮುಕ್ತಿ ಸಿಕ್ಕಿತು ಎಂದು ಹಾಡಿ ಹೊಗಳುತ್ತಿವೆ. ಈ ಕಾರ್ಯವನ್ನು ಪ್ರಧಾನಿ ನರೇಂದ್ರ ಮೋದಿ, ಗೃಹಸಚಿವ ಅಮಿತ್ ಷಾ ಅವರು ಗುಟ್ಟಾಗಿ ನೆರವೇರಿಸಿದರು. ಜಮ್ಮು - ಕಾಶ್ಮೀರ ರಾಜ್ಯಕ್ಕೆ ಅಸಂಖ್ಯ ಸೇನೆಯನ್ನು ನಿಯೋಜನೆ ಮಾಡಿ, ಅಲ್ಲಿನ ರಾಜಕೀಯ ಪಕ್ಷಗಳ ನಾಯಕರನ್ನು ಗೃಹಬಂಧನದಲ್ಲಿರಿಸಿ, ಮಾಧ್ಯಮ, ಸಾಮಾಜಿಕ ಜಾಲತಾಣ, ಟೆಲಿಫೋನ್, ಮೊಬೈಲ್ ಸಂಪರ್ಕ ಕಡಿತಗೊಳಿಸಿ, ಕರ್ಫ್ಯೂ ವಿಧಿಸಿ, ಸಂಸತ್ತಿಗೂ ತಿಳಿಸದೆ, ಪ್ರಜಾಸತ್ತಾತ್ಮಕವಾಗಿ ಚರ್ಚಿಸದೆ, ರಾಷ್ಟ್ರಪತಿಗಳ ಅಂಕಿತ ಪಡೆದು ಕ್ರಿಯಾ ವಿವರಗಳನ್ನು ಸಂಸತ್ತಿಗೂ, ದೇಶಕ್ಕೂ ತಿಳಿಸಲಾಗಿದೆ. ಕಾಶ್ಮೀರಿ ಜನರಿಗೆ ಅಲ್ಲಿ ಏನು ನಡೆಯುತ್ತಿದೆ ಎಂದು ತಿಳಿಯುವ ಮೊದಲೇ ಕಾಶ್ಮೀರದಲ್ಲಿ ಬಂಡವಾಳ ಹೂಡಿಕೆಗಾಗಿ ಹೂಡಿಕೆದಾರರ ಸಮಾವೇಶ ಯೋಜಿಸಲಾಗಿದೆ. ಈ ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ೨೦೦೦ ಉದ್ಯಮಿಗಳು ಭಾಗವಹಿಸುವರು, ೪೫ ಕಂಪನಿಗಳು ಹೂಡಿಕೆಗೆ ಮುಂದೆ ಬಂದಿವೆ, ೩೦೦೦ ಕೋಟಿ ರೂಪಾಯಿ ಬಂಡವಾಳ ಹೂಡಿಕೆ ಭರವಸೆ ಇದೆ ಎಂಬ ಮಾಹಿತಿಗಳು ಬಂದಿವೆ. ಈ ಎಲ್ಲ ವಿದ್ಯಮಾನಗಳೂ ಶರವೇಗದಲ್ಲಿ ನಡೆಯುತ್ತಿವೆ. ೧೯೫೩-೫೪ರಲ್ಲಿ ಪಾಕಿಸ್ತಾನದೊಂದಿಗೆ ಅಕ್ಷರಶಃ ಮಿಲಿಟರಿ ಒಪ್ಪಂದವನ್ನು ಮಾಡಿಕೊಂಡು ಪಾಕಿಸ್ತಾನಕ್ಕೆ ಸಹಾಯ ಮಾಡಿ, ಅದರ ಆಕ್ರಮಣಶೀಲತೆಗೆ ಕುಮ್ಮಕ್ಕು ಕೊಟ್ಟಿದ್ದ ಅಮೆರಿಕಾ ಇಂದು ಮೌನವಾಗಿದೆ. ಭಾರತ-ಪಾಕ್ ಮಧ್ಯಸ್ಥಿಕೆಗೆ ಸಿದ್ಧ ಎಂದು ಅಮೆರಿಕ ಅಧ್ಯಕ್ಷ ಟ್ರಂಪ್ ಹೇಳಿದ್ದಾರೆ. ಇದೇ ಸಂದರ್ಭದಲ್ಲಿ ಕಾಶ್ಮೀರದಲ್ಲಿ ಬಂಡವಾಳ ಹೂಡಿಕೆದಾರರ ಸಮಾವೇಶ ನಡೆಯುತ್ತಿದೆ. ಪಕ್ಕದ ಚೀನ ದೇಶದ ಆಡಳಿತ ವ್ಯಾಪ್ತಿಗೆ ಒಳಪಟ್ಟ ಹಾಂಗ್‌ಕಾಂಗ್‌ನಲ್ಲಿ ನಡೆಯುತ್ತಿರುವ ಸ್ವಾಯತ್ತತೆಯ ರಕ್ಷಣೆಯ ಹೋರಾಟಕ್ಕೆ ಗುಪ್ತವಾಗಿ ಬೆಂಬಲಿಸುವ ಅಮೆರಿಕ, ಭಾರತದ ಜಮ್ಮು - ಕಾಶ್ಮೀರದ ಸ್ವಾಯತ್ತತೆಯನ್ನು ಬೆಂಬಲಿಸುವುದಿಲ್ಲ. ಇದರರ್ಥ ಜಮ್ಮು - ಕಾಶ್ಮೀರದ ಅಭಿವೃದ್ಧಿಗಿಂತಲೂ ಅಭಿವೃದ್ಧಿಯ ಹೆಸರಿನಲ್ಲಿ ಆ ರಾಜ್ಯದ ನೈಸರ್ಗಿಕ ಸಂಪನ್ಮೂಲವನ್ನು ಲೂಟಿ ಮಾಡುವುದೇ ಖಾಸಗಿ ಬಂಡವಾಳಗಾರರ ಹುನ್ನಾರದಂತೆ ಕಾಣುತ್ತಿದೆ. ಅದಕ್ಕೆ ಪೂರಕವಾಗಿ ನಮ್ಮ ದೇಶದ ಕೇಂದ್ರ ಸರಕಾರ ಕ್ಷಿಪ್ರಗತಿಯಲ್ಲಿ ಕಾರ್ಯಾಚರಣೆ ನಡೆಸುತ್ತಿದೆ. ಕಾಶ್ಮೀರ ಈಗ ಪಾಕ್ ಬೆಂಬಲಿತ ಭಯೋತ್ಪಾದಕತೆಯ ಜೊತೆಗೇ ಅಮೆರಿಕ ಬೆಂಬಲಿತ ಆರ್ಥಿಕ ಭಯೋತ್ಪಾದಕತೆಗೆ ಬಲಿಯಾಗುತ್ತಿದೆ.

ಯಾವುದೇ ದೇಶದ, ರಾಜ್ಯದ ಒಗ್ಗೂಡುವಿಕೆ, ವಿಘಟನೆಗೆ ಕೇವಲ ರಾಜಕೀಯ, ಭೌಗೋಳಿಕ ಕಾರಣಗಳಿರುವುದಿಲ್ಲ. ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ಭಾವನಾತ್ಮಕ ಹಿನ್ನೆಲೆಗಳೂ ಇರುತ್ತವೆ. ಜಮ್ಮು - ಕಾಶ್ಮೀರ ಭಾರತದಲ್ಲಿ ವಿಲೀನಗೊಳ್ಳಲು ಅಂಥ ಸಾಕಷ್ಟು ಕಾರಣಗಳಿವೆ. ಅಂದಿನ ನಿರ್ದಿಷ್ಟ ರಾಜಕೀಯ ಸಂದರ್ಭದಲ್ಲಿ ಜಮ್ಮು - ಕಾಶ್ಮೀರ ಸ್ವತಂತ್ರ ರಾಜ್ಯವನ್ನು ಭಾರತದಲ್ಲಿ ಉಳಿಸಿಕೊಳ್ಳಲು ನೆಹರೂ ಸರಕಾರ ಹಲವಾರು ಯೋಜನೆಗಳನ್ನು ಕೈಗೊಂಡಿತು. ೧೯೪೭ರಿಂದ ೧೯೫೬ರವರೆಗೆ, ಅಂದರೆ, ಜಮ್ಮು - ಕಾಶ್ಮೀರ ರಾಜ್ಯದ ಸಂವಿಧಾನ ರಚನಾ ಸಭಾ ಆ ರಾಜ್ಯವನ್ನು ಭಾರತದಲ್ಲಿ ವಿಲೀನಗೊಳಿಸಲು ಅಧಿಕೃತವಾಗಿ ಅನುಮೋದಿಸುವವರೆಗೆ ನಡೆದ ವಿದ್ಯಮಾನಗಳು ಇಂದಿನ ಪೀಳಿಗೆಗೆ ಗೊತ್ತಿಲ್ಲ. ಜಮ್ಮು - ಕಾಶ್ಮೀರ ಭಾರತದ ಭಾಗವೆಂದೇ ಸಲೀಸಾಗಿ ಹೇಳಿಬಿಡುತ್ತಾರೆ. ಭಾರತದ ಇತರ ದೇಶೀ ಸಂಸ್ಥಾನಗಳಿಗಿದ್ದಂತಹ ಆಯ್ಕೆಯ ಸ್ವಾತಂತ್ರ್ಯ ಜಮ್ಮು - ಕಾಶ್ಮೀರ ರಾಜ್ಯಕ್ಕೂ ಇತ್ತು. ಅವರು ಭಾರತ ಅಥವಾ ಪಾಕಿಸ್ತಾನದಲ್ಲಿ ವಿಲೀನಗೊಳ್ಳುವ ಅಥವಾ ಸ್ವತಂತ್ರ ದೇಶವಾಗಿ ಉಳಿಯುವ ಹಕ್ಕನ್ನು ಹೊಂದಿದ್ದರು. ಭಾರತದಲ್ಲಿ ವಿಲೀನಗೊಳ್ಳುವ ಅಕ್ಟೋಬರ್ ೧೯೪೭ರ ಒಪ್ಪಂದದ ನಂತರವೂ ಅನಿಶ್ಚಿತತೆ ತಲೆದೋರಿತ್ತು. ಕಾಶ್ಮೀರ ಜನತೆಯ ಬೆಂಬಲ ಪಡೆದಿದ್ದ ಷೇಕ್ ಅಬ್ದುಲ್ಲಾ ಕಾಶ್ಮೀರ ಕಣಿವೆ ಪಾಕಿಸ್ತಾನಕ್ಕೂ ಸೇರದ, ಭಾರತದಲ್ಲೂ ವಿಲೀನಗೊಳ್ಳದ ಪ್ರತ್ಯೇಕ ದೇಶವಾಗಿಯೇ ಉಳಿಯುವ ತೀರ್ಮಾನ ಮಾಡಿ ೧೯೫೩ ಜುಲೈ ತಿಂಗಳಲ್ಲಿ ಆ ಕುರಿತ ಹೇಳಿಕೆಯನ್ನೂ ಕೊಟ್ಟಿದ್ದರು. ಈ ಹೇಳಿಕೆಯಿಂದ ಅವರು ಮೌಲ್ವಿ ಫರೂಕ್ ನೇತೃತ್ವದ ಪಾಕಿಸ್ತಾನ ಪರವಾದ ರಾಜ್ಯ ರಾಜಕಾರಣಿಗಳ ಹಾಗೂ ಅವಾಮಿ ಕ್ರಿಯಾ ಸಮಿತಿಯ

ವಿರೋಧ ಕಟ್ಟಿಕೊಂಡಿದ್ದರು. "ಕಾಶ್ಮೀರದ ಮುಸ್ಲಿಂ ಬಹುಸಂಖ್ಯಾತರೂ ಜಮ್ಮುವಿನ ಹಿಂದೂ ಬಹುಸಂಖ್ಯಾತರೂ ವಿಭಿನ್ನ ನಿಲುವು ತಳೆದ ಸಂದರ್ಭದಲ್ಲಿ ಅಮೆರಿಕ ಜೊತೆ ಮಿಲಿಟರಿ ಒಪ್ಪಂದ ಮಾಡಿಕೊಂಡ ಪಾಕಿಸ್ತಾನ ನಡೆಸುತ್ತಿದ್ದ ಆಕ್ರಮಣಕಾರಿ ಸನ್ನಿವೇಶದಲ್ಲಿ ಜಮ್ಮು – ಕಾಶ್ಮೀರದ ಜನರನ್ನು ಭಾರತದ ಭಾಗವಾಗಿರುವಂತೆ ಮಾಡಿದ್ದು ಇದೇ ೩೭೦ ಆರ್ಟಿಕಲ್ ಪ್ರಕಾರ ಆ ರಾಜ್ಯದ ಜನತೆ ಪಡೆದ ವಿಶೇಷ ಸ್ಥಾನಮಾನ. ನೆಹರೂ ನಂತರ ಇಂದಿರಾ ಗಾಂಧಿಯವರೊಂದಿಗೆ ರಾಜಿ ಮಾಡಿಕೊಂಡ ಶೇಕ್ ಅಬ್ದುಲ್ಲಾ ಆ ರಾಜ್ಯದ ಮುಖ್ಯಮಂತ್ರಿಯಾಗಿ ವಿಲೀನ ಪ್ರಕ್ರಿಯೆಯನ್ನು ಸಹಜಗೊಳಿಸಿದ್ದರು.

೧೯೭೧ರ ಬಾಂಗ್ಲಾದೇಶದ ಸ್ವಾತಂತ್ರ್ಯ, ಆ ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಭಾರತ ಸರಕಾರ, ಪ್ರಧಾನಿ ಇಂದಿರಾಗಾಂಧಿ ಮಾಡಿದ ಸಹಾಯ ಪಾಕಿಸ್ತಾನದ ಆಡಳಿತಗಾರರಿಗೆ ಆಘಾತವಾಗಿತ್ತು. ಬಾಂಗ್ಲಾದೇಶವನ್ನು ಪಾಕಿಸ್ತಾನದ ನಿಯಂತ್ರಣದಿಂದ ಬಿಡುಗಡೆಗೊಳಿಸಲು ಭಾರತ, ಸೋವಿಯತ್ ಯೂನಿಯನ್ ಪಾತ್ರ ಮಹತ್ವದ್ದಾಗಿತ್ತು. ಈ ವಿದ್ಯಮಾನದಿಂದ ಪಾಕಿಸ್ತಾನ ಮತ್ತು ಅಮೆರಿಕಾ ವ್ಯಗ್ರವಾದವು. ಆಗ ಮತ್ತೆ ಕಾಶ್ಮೀರ ಕಣಿವೆಯಲ್ಲಿ ಮತಾಂಧ ಶಕ್ತಿಗಳು ಪಾಕಿಸ್ತಾನದ ಸಹಾಯ ಪಡೆದು ಭಯೋತ್ಪಾದಕ ಚಟುವಟಿಕೆಯನ್ನು ಹೆಚ್ಚಿಸಿದವು. ೧೯೮೨ರಲ್ಲಿ ಶೇಕ್ ಅಬ್ದುಲ್ಲಾ ತೀರಿಕೊಂಡ ನಂತರ ಅವರ ಪುತ್ರ ಫಾರೂಖ್ ಅಬ್ದುಲ್ಲಾ ರಾಜ್ಯದ ಮುಖ್ಯಮಂತ್ರಿಯಾದರು. ೨೦೦೨ರ ಚುನಾವಣೆಯಲ್ಲಿ ಫಾರೂಖ್ ಅಬ್ದುಲ್ಲಾ ಸೋತು ನ್ಯಾಶನಲ್ ಕಾನ್ಫೆರೆನ್ಸ್ ಪಕ್ಷ ಅಧಿಕಾರ ಕಳೆದುಕೊಂಡಿತು. ಪೀಪಲ್ಸ್ ಡೆಮಾಕ್ರೆಟಿಕ್ ಪಕ್ಷದ ಮುಫ್ತಿ ಮುಹ್ಮದ್ ಸೈಯ್ಯದ್ ಅಧಿಕಾರಕ್ಕೆ ಬಂದರು. ಈ ಅವಧಿಯಲ್ಲಿ ಈ ಎರಡೂ ಪಕ್ಷಗಳ ಆಡಳಿತ ಕುಟುಂಬ ರಾಜಕಾರಣಕ್ಕೆ ಸೀಮಿತವಾಯಿತೇ ಹೊರತು ಆ ರಾಜ್ಯಕ್ಕೆ ಸಮರ್ಥ ಆಡಳಿತ ದೊರೆಯಲಿಲ್ಲ. ಭ್ರಷ್ಟಾಚಾರ ವ್ಯಾಪಕವಾಗಿತ್ತು. ಈ ಸಂದರ್ಭದಲ್ಲಿ ಹಿಜ್ಬುಲ್ ಮುಜಾಹಿದಿನ್ ಮತ್ತು ಜಮ್ಮು – ಕಾಶ್ಮೀರ ವಿಮೋಚನಾರಂಗ (ಜೆ.ಕೆ.ಎಲ್.ಎಫ್.) ಪಾಕಿಸ್ತಾನದ ಬೆಂಬಲದಿಂದ ಬಲವಾಗಿ ಬೆಳೆದವು. ನ್ಯಾಶನಲ್ ಕಾನ್ಫೆರೆನ್ಸ್, ಪಿಡಿಪಿ ಪಕ್ಷಗಳು ಅಧಿಕಾರದಲ್ಲಿದ್ದಾಗ ಕಾಂಗ್ರೆಸ್, ಬಿಜೆಪಿ ಜೊತೆ ಕ್ರಮವಾಗಿ ಮೈತ್ರಿ ಮಾಡಿಕೊಂಡ ಅವಧಿ, ರಾಷ್ಟ್ರಪತಿ ಆಡಳಿತದ ಅವಧಿ ಕಾಶ್ಮೀರದ ಅಭಿವೃದ್ಧಿಗೆ ಗಮನ ಕೊಡದೆ ಆ ರಾಜ್ಯವನ್ನು ನಿಯಂತ್ರಣ ಮಾಡುವುದರಲ್ಲಿಯೇ ಕಾಲ ಕಳೆದರು. ಕೇಂದ್ರದಲ್ಲಿ ಕಾಂಗ್ರೆಸ್ ಹಾಗೂ ಬಿಜೆಪಿ ನಾಯಕತ್ವದ ಸರಕಾರಗಳು ಅಧಿಕಾರಕ್ಕೆ ಬಂದಾಗ ಜಮ್ಮು – ಕಾಶ್ಮೀರದ ಎರಡು ಪಕ್ಷಗಳನ್ನು ಓಲೈಸಿ, ಗಡಿ ಕಾಯುವ ಕಾಯಕ ಮಾಡಿದರೇ ಹೊರತು ಭಯೋತ್ಪಾದಕ ಗುಂಪುಗಳ ಉಪಟಳದಿಂದ ಬೇಸತ್ತ ಜನತೆಗೆ ಶಾಂತ ಬದುಕಿನ ಭರವಸೆ ನೀಡಿ ಕಾಶ್ಮೀರದಂಥ ನೈಸರ್ಗಿಕ ಸೌಂದರ್ಯದ ಪ್ರದೇಶವನ್ನು ಅಭಿವೃದ್ಧಿಗೊಳಿಸಿ, ಉದ್ಯೋಗ ಸೃಷ್ಟಿಸಿ, ಸಹಜ ಸೌಹಾರ್ದ ವಾತಾವರಣ ನಿರ್ಮಿಸಿ ಜನತೆಯ ಮನಗೆಲ್ಲುವ ಕೆಲಸ ಮಾಡಲಿಲ್ಲ. ಆ ರಾಜ್ಯದ ನೆಲದ ಮೇಲೆ ಹಕ್ಕು ಸಾಧಿಸುವ ಕೈಗೊಂಬೆ ಸರಕಾರಗಳನ್ನು ನಿರ್ವಹಿಸುವ ಕೆಲಸಕ್ಕೆ ಸೀಮಿತವಾದವು.

ಜಮ್ಮು – ಕಾಶ್ಮೀರ ಹೊಂದಿದ್ದ ವಿಶೇಷ ಸ್ಥಾನಮಾನ ತಾತ್ಕಾಲಿಕ ಎಂದಿದ್ದರೂ ಸಹ ಆ ರಾಜ್ಯದಲ್ಲಿ ಸಹಜ ಶಾಂತಿಯುತ ವಾತಾವರಣ ಇಲ್ಲದೇ ಇರುವ ಕಾರಣಕ್ಕೆ ಮುಂದುವರೆದಿತ್ತು. ಆದರೆ ಆ ನೆಲದ ಜನರ ಮುಂದೆ ಸೇನೆಯನ್ನು ನಿಲ್ಲಿಸಿ, ಆ ರಾಜ್ಯದಲ್ಲಿ ಜನರಿಂದ ಆಯ್ಕೆಯಾದ ಶಾಸನಸಭೆ ಇಲ್ಲದೇ ಇರುವಾಗ ಅಸಂವಿಧಾನಿಕ ಮಾರ್ಗದಲ್ಲಿ ರಾಜ್ಯವನ್ನು ಇಬ್ಭಾಗ ಮಾಡಿ, ವಿಶೇಷ ಸ್ಥಾನಮಾನವನ್ನು ರದ್ದು ಮಾಡಿದ್ದು ಅಪಾಯಕಾರಿ ನಡೆ. ಜಮ್ಮು – ಕಾಶ್ಮೀರ ಜನತೆಗೆ ಕೊಟ್ಟ ಸೌಲಭ್ಯಗಳನ್ನು ಬೇರೆ ಬೇರೆ ರೂಪದಲ್ಲಿ ಇತರ ರಾಜ್ಯಗಳಿಗೂ ಕೊಡಲಾಗಿದೆ. ಸಂವಿಧಾನಕ್ಕೆ ತಿದ್ದುಪಡಿ ಮಾಡಿ ಆರ್ಟಿಕಲ್ ೩೭೧ರಡಿ ಉಪ ವಿಧಿಗಳನ್ನು ಸೇರಿಸಿ ನಾಗಾಲ್ಯಾಂಡ್, ಮಿಜೋರಾಮ್, ಮೇಘಾಲಯ, ಅರುಣಾಚಲ ಪ್ರದೇಶ, ಸಿಕ್ಕಿಂ ಹೀಗೆ ಹಲವಾರು ರಾಜ್ಯಗಳಿಗೆ ವಿಶೇಷ ಸವಲತ್ತು, ಸೌಲಭ್ಯ ಸೀಮಿತ ಸ್ವಾಯತ್ತತೆ ಕಲ್ಪಿಸಲಾಗಿದೆ. ಈ ಕಾನೂನುಗಳ ಪ್ರಕಾರ ಆ ರಾಜ್ಯಗಳ ಶಾಸನಸಭೆಯ ಒಪ್ಪಿಗೆ ಇಲ್ಲದೇ ಸಂಸತ್ತು ಕೆಲವು ವಿಷಯಗಳಲ್ಲಿ ಹಸ್ತಕ್ಷೇಪ ಮಾಡುವಂತಿಲ್ಲ. ಕಾಶ್ಮೀರ ಜನರಿಗೆ ಆಸ್ತಿಯ ರಕ್ಷಣಾ ಹಕ್ಕು ಇರುವಂತೆ ಹಲವಾರು ಬುಡಕಟ್ಟು ರಾಜ್ಯಗಳಲ್ಲಿ ಹೊರಗಿನವರಿಗೆ ಭೂಮಿ ಖರೀದಿಸುವ ಅವಕಾಶಗಳಿಲ್ಲ. ಅವರ ಧಾರ್ಮಿಕ, ಸಾಂಸ್ಕೃತಿಕ, ಆಡಳಿತಾತ್ಮಕ ವಿಷಯಗಳಲ್ಲಿ ಸ್ವಾಯತ್ತತೆಯನ್ನು ಹೊಂದಿದ್ದಾರೆ. ತೀರ ಇತ್ತೀಚೆಗೆ ೨೦೧೨ರಲ್ಲಿ ಆರ್ಟಿಕಲ್ ೩೭೧–ಜೆ ಮೂಲಕ ಹೈದರಾಬಾದ್ ಕರ್ನಾಟಕದ ಹಿಂದುಳಿದ ಆರು ಜಿಲ್ಲೆಗಳಲ್ಲಿ ಶಿಕ್ಷಣ, ಉದ್ಯೋಗಗಳಲ್ಲಿ ಸ್ಥಳೀಯರಿಗೆ ಮೀಸಲು ಸೌಲಭ್ಯ ಒದಗಿಸಲಾಗಿದೆ. ವಾಸ್ತವದಲ್ಲಿ ೧೯೧೮ರಲ್ಲಿ ತೆಲಂಗಾಣದ ನಿಜಾಂ ಸರಕಾರ ತನ್ನ ವ್ಯಾಪ್ತಿಯಲ್ಲಿ ಮುಲ್ಕಿ ಕಾನೂನು ತಂದಿರುವ ಇತಿಹಾಸವಿದೆ. ಅಂದರೆ ಸ್ಥಳೀಯರಿಗೆ ಮಾತ್ರ ಉದ್ಯೋಗ ಅವಕಾಶ. ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರದಂಥ ರಾಜ್ಯಗಳೂ ಇಂಥ ಸೌಲಭ್ಯಗಳನ್ನು ಪಡೆದಿವೆ. ಕಾಶ್ಮೀರದ ಭಯೋತ್ಪಾದನೆಗೂ ಅಲ್ಲಿನ ಜನತೆ ಪಡೆವ ಸೌಲಭ್ಯಗಳಿಗೂ ಸಂಬಂಧ ಕಲ್ಪಿಸುವುದು ತಪ್ಪು. ಆ ರಾಜ್ಯಕ್ಕೇ ಆರ್ಟಿಕಲ್ ೩೭೦ರ ಅಡಿ ವಿಶೇಷ ಸ್ಥಾನಮಾನ ಒದಗಿಸಿದ್ದಾಗ್ಯೂ ಇಲ್ಲಿಯವರೆಗೆ ಹಲವಾರು ಬದಲಾವಣೆಗಳನ್ನು ಮಾಡಲಾಗಿದೆ. ೧೯೫೪ರಲ್ಲಿಯೆ ಜಮ್ಮು – ಕಾಶ್ಮೀರದ ಸಂವಿಧಾನದಲ್ಲಿಯೇ ಭಾರತದ ಒಕ್ಕೂಟದಲ್ಲಿ ವಿಲೀನವಾಗಲು ಒಪ್ಪಲಾಗಿದೆ. ನಿಧಾನವಾಗಿ ಕಣಿವೆ ರಾಜ್ಯದ ಜನತೆಯ ಬದುಕನ್ನು ಉತ್ತಮೀಕರಿಸಿ ಆ ಜನತೆ ಭಾವನಾತ್ಮಕವಾಗಿ ಒಂದಾಗುವ ಪ್ರಕ್ರಿಯೆಯನ್ನು ಇಂದಿನ ಕೇಂದ್ರ ಸರಕಾರ ತಪ್ಪಿಸಿದೆ. ಇನ್ನೊಂದೆಡೆ ಚಾರಿತ್ರಿಕ ಕಾರಣಗಳಿಂದ ವಿಶೇಷ ಸೌಲಭ್ಯ ಪಡೆದಿರುವ ಇತರ ರಾಜ್ಯಗಳ ಜನತೆಯ ಮನಸ್ಸಿನಲ್ಲಿ





■ ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಅನಸೂಯ ಕಾಂಬಳೆ
ಎಂ. ಡಿ. ಒಕ್ಕುಂದ
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬಿ. ಪೀರ ಬಾಷಾ
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ಎಸ್. ಮಂಜುನಾಥ
ಎಸ್. ಎಸ್. ರೇಣುಕಾರಾಧ್ಯ
ವಿಜಯಾ
ಶಿವಗಂಗ ರುಮ್ಮ
ಬಿ. ಶ್ರೀನಿವಾಸ ಕಕ್ಕಿಲ್ಲಾಯ
ಎಲ್. ಹನುಮಂತಯ್ಯ

■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೫/- |
| ವಾರ್ಷಿಕ ಚಂದಾ | ₹ ೩೦೦/- |
| ಮೂರು ವರ್ಷಕ್ಕೆ | ₹ ೬೦೦/- |

■ ನವಕರ್ನಾಟಕ ಶಾಖೆಗಳು

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಆತಂಕವನ್ನೂ ಅನಿಶ್ಚಿತತೆಯನ್ನೂ ಅನುಮಾನವನ್ನೂ ಉಂಟುಮಾಡುವ ಅಪಾಯ ಎದುರಾಗಿದೆ. ಇದು ಭಾರತದ ಒಕ್ಕೂಟ ವ್ಯವಸ್ಥೆಗೆ ಧಕ್ಕೆ ತರುವ ನಡೆ.

ಭಾರತದ ಏಕತೆ ಜಮ್ಮು – ಕಾಶ್ಮೀರದ ಆರ್ಟಿಕಲ್ ೩೭೦ರ ರದ್ದತಿಯಿಂದ ಪೂರ್ಣಗೊಂಡಿತು ಎಂದು ಮೋದಿಯವರ ಭಕ್ತಗಣ, ಕೆಲವು ಮಾಧ್ಯಮಗಳು ಪ್ರಚಾರ ಮಾಡುತ್ತಿವೆ. ಭಾರತದ ಏಕತೆಗೆ ಸ್ವಾತಂತ್ರ್ಯ ಪಡೆದ ದಿನದಿಂದಲೇ ಕೆಲವು ಪ್ರದೇಶಗಳಲ್ಲಿ ಚಿಗುರಿದ ಪ್ರತ್ಯೇಕತಾವಾದಿ ಬೆಳವಣಿಗೆಗಳನ್ನು ಸೌಹಾರ್ದಯುತವಾಗಿ, ಸಂಘರ್ಷದಿಂದ, ತ್ಯಾಗ ಬಲಿದಾನಗಳಿಂದ ತಡೆಯಲಾಗಿದೆ. ತೆಲಂಗಾಣ ನಿಜಾಮನ ವಿರುದ್ಧದ ಹೋರಾಟದಲ್ಲಿ ಕಮ್ಯುನಿಸ್ಟರು ಶಸ್ತ್ರ ಹಿಡಿದು ಹೋರಾಡಿದ್ದಾರೆ. ಪೋರ್ಚುಗೀಸರ ವಿರುದ್ಧ ಗೋವಾ ವಿಮೋಚನಾ ಚಳುವಳಿ, ಫ್ರೆಂಚ್ ವಸಾಹತುಶಾಹಿಗಳ ವಿರುದ್ಧ ಪುದುಚೇರಿ ಜನರ ಹೋರಾಟ ಹೀಗೆ ಭಾರತದ ಇಂದಿನ ನಕ್ಷೆ ರೂಪುಗೊಳ್ಳಲು ಸಾವಿರಾರು ಜನ ತ್ಯಾಗ, ಬಲಿದಾನ ಮಾಡಿದ್ದಾರೆ. ೧೯೫೦ರಿಂದಲೇ ತಮಿಳುನಾಡಿನಿಂದ ಆರಂಭವಾದ ದ್ರಾವಿಡ ಚಳುವಳಿ ದಕ್ಷಿಣದ ನಾಲ್ಕು ದ್ರಾವಿಡ ರಾಜ್ಯಗಳನ್ನೊಳಗೊಂಡ 'ದ್ರಾವಿಡ ನಾಡು' ಘೋಷಣೆಯನ್ನು ಕೊಟ್ಟಿತ್ತು. ಅದು ದೆಹಲಿಯ ಆಡಳಿತವನ್ನು ಧಿಕ್ಕರಿಸಿ ಮೊದಲ ಸಾರ್ವತ್ರಿಕ ಚುನಾವಣೆಯನ್ನೇ ಬಹಿಷ್ಕರಿಸಿತ್ತು. ಅಸ್ಸಾಂನಲ್ಲಿ ೧೯೫೦ರಿಂದಲೇ ಆರಂಭವಾದ ಅಸ್ಸಾಮಿಗಳ ಅಸ್ಮಿತೆಯ ಚಳುವಳಿ ೧೯೮೩ರಲ್ಲಿ ೩೦೦೦ ಜನರನ್ನು ಬಲಿ ಪಡೆಯಿತು. ೧೯೮೪ರಲ್ಲಿ ಪಂಜಾಬ್‌ನಲ್ಲಿ ಖಲಿಸ್ತಾನ್ ಪ್ರತ್ಯೇಕತೆಗಾಗಿ ನಡೆದ ಸಂಘರ್ಷ ಸಾವಿರಾರು ಜನರನ್ನು ಬಲಿ ಪಡೆದು ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರ ಹತ್ಯೆಯೊಂದಿಗೆ ಅಂತ್ಯವಾಯಿತು. ಗೋರ್ಖಾಲ್ಯಾಂಡ್, ನಾಗಾ ಬಂಡಾಯ ಹೀಗೆ ದೇಶದ ಐಕ್ಯತೆಗೆ, ಸಮಗ್ರತೆಗೆ, ಧಕ್ಕೆ ತರುವಂಥ ಹಲವಾರು ಘಟನೆಗಳು, ವಿವಾದಗಳು ದೇಶದ ವಿವಿಧ ಭಾಗಗಳಲ್ಲಿ ನಡೆದಿವೆ. ಕಾಶ್ಮೀರ್ ವಿವಾದ ಭಾರತದ ಸ್ವಾತಂತ್ರ್ಯದೊಂದಿಗೇ ಆರಂಭಗೊಂಡಿದೆ. ಅದಕ್ಕಾಗಿ ಯುದ್ಧಗಳೂ ನಡೆದಿವೆ. ಭಾರತದ ಆಳುವ ಪಕ್ಷಗಳು ತಮ್ಮ ಎಲ್ಲ ದೌರ್ಬಲ್ಯಗಳೊಂದಿಗೂ ಭಾರತದ ಏಕತೆಯನ್ನು ಕಾಯ್ದುಕೊಂಡು ಬಂದಿವೆ. ಅವರು ಪ್ರತಿಪಾದಿಸಿದ ಏಕತೆ ಬಹುತ್ವವನ್ನೊಳಗೊಂಡ ಏಕತೆ. ಈಗ ಪ್ರಧಾನಿ ನರೇಂದ್ರ ಮೋದಿಯವರು ಮಾಡ ಹೊರಟಿರುವುದು ಬಹುತ್ವವನ್ನು ನಾಶ ಮಾಡಿ ಸರ್ವಾಧಿಕಾರವನ್ನು ಸ್ಥಾಪಿಸುವ ಏಕತೆ. ಅಣ್ವಸ್ತ್ರ ಹೊಂದಿರುವ ಭಾರತ – ಪಾಕಿಸ್ತಾನ ಎರಡೂ ದೇಶಗಳ ಆಡಳಿತಗಾರರು ಎಚ್ಚರಿಕೆಯಿಂದ ಮಾತನಾಡಬೇಕು. ಅಣ್ವಸ್ತ್ರ ಬಳಕೆಯ ವಿಷಯದಲ್ಲಿ ಕನಿಷ್ಠ ವಾಜಪೇಯಿಯವರಿಗಿದ್ದ ಬದ್ಧತೆಯಾದರೂ ಮೋದಿಯವರಿಗಿರಬೇಕು.

ಜಮ್ಮು – ಕಾಶ್ಮೀರದ ವಿಷಯದಲ್ಲಿ ಮೋದಿಯವರು ಸರ್ವಾಧಿಕಾರಿಯಂತೆ ವರ್ತಿಸಿದ್ದಾರೆ. ಸಂಸತ್ತಿನಲ್ಲಿ ಪ್ರಶ್ನಾತೀತ ಬಲವಿದ್ದಾಗಲೂ ಪ್ರಜಾಸತ್ತಾತ್ಮಕವಾಗಿ ನಡೆದುಕೊಳ್ಳದೇ ದೇಶದ ವಿಷಯದಲ್ಲಿ ಸಂಸತ್ತನ್ನೂ ವಿರೋಧ ಪಕ್ಷಗಳನ್ನೂ ವಿಶ್ವಾಸಕ್ಕೆ ತೆಗೆದುಕೊಳ್ಳದೇ ಗುಪ್ತವಾಗಿ ಮಾಡಿದ 'ಜಮ್ಮು – ಕಾಶ್ಮೀರ' ಕಾರ್ಯಾಚರಣೆ ಪ್ರಜಾಸತ್ತೆಗೆ ಮಾಡಿದ ಅಪಚಾರ. ಇದು ರಾಜಕೀಯ ಲಾಭಕ್ಕಾಗಿ ಮಾಡಿದ ಹುನ್ನಾರವೇ ಹೊರತು 'ಜಮ್ಮು – ಕಾಶ್ಮೀರ' ಜನರ ಮೇಲಿನ ಪ್ರೀತಿಯಿಂದಲ್ಲ. ಜಮ್ಮು – ಕಾಶ್ಮೀರ ಅಂದರೆ ಅಲ್ಲಿನ ಜನರೇ ಹೊರತು ಕೇವಲ ಗುಡ್ಡ ಬೆಟ್ಟಗಳಲ್ಲ. ಆದರೆ ರಾಜ್ಯದ ನೆಲ, ಜಲ, ಗುಡ್ಡ, ಬೆಟ್ಟಗಳನ್ನು ಬಂಡವಾಳ ಹೂಡಿಕೆದಾರರಿಗೆ ಕೊಡಲು ಹೊರಟಿರುವ ಮೋದಿಯವರದು ರಾಜಕೀಯದಾಚೆ ಇರುವ ಗುಪ್ತ ಕಾರ್ಯಸೂಚಿ. ದೇಶಿ, ವಿದೇಶಿ ಬಂಡವಾಳಗಾರರು ಲಾಭ ಮಾಡಿಕೊಳ್ಳಲು ಕಾಶ್ಮೀರ ಕಣಿವೆಗೆ ಬರುತ್ತಾರೆ ಹೊರತು ಅಲ್ಲಿನ ಜನರ ಉದ್ಧಾರಕ್ಕಲ್ಲ. ಮೋದಿಯವರಿಗೆ ನಿಜವಾಗಿ ಆ ಜನರ ಮೇಲೆ ಪ್ರೀತಿ ಇದ್ದರೆ, ಆ ಜನರನ್ನು ಮುಖ್ಯವಾಹಿನಿಗೆ ತರುವ ಗುರಿ ಹೊಂದಿದ್ದರೆ ಮೊದಲು ಸರಕಾರಿ, ಸಾರ್ವಜನಿಕ ವಲಯದ ಕೈಗಾರಿಕೆಗಳನ್ನು ಆರಂಭಿಸಿ ಉದ್ಯೋಗ ಸೃಷ್ಟಿಸುತ್ತಿದ್ದರು. ಈಗಾಗಲೇ ಜಮ್ಮು ಪ್ರದೇಶದವರು ನಮ್ಮ ಭೂಮಿ ರಕ್ಷಿಸಿ ಎಂದು ಕೂಗೆಬ್ಬಿಸುತ್ತಿದ್ದಾರೆ. ಭಾರತದ ಜನತೆ ಆರ್ಟಿಕಲ್ ೩೭೦ರ ಪ್ರಕಾರ ಆ ನಾಡಿನ ನೆಲದ ಮಕ್ಕಳ ಭೂಮಿ ರಕ್ಷಣೆಯ ಪರವಾಗಿರುತ್ತಾರೋ ಅಥವಾ ದೇಶ ವಿದೇಶದ ಕಂಪನಿಗಳಿಂದ ನಡೆವ ಭೂ ಕಬಳಿಕೆ ಪರವಾಗಿರುತ್ತಾರೋ ಯೋಚಿಸಬೇಕಿದೆ.

ಸಿದ್ದನಗೌಡ ಪಾಟೀಲ






ನವಕರ್ನಾಟಕ ಪ್ರಕಾಶನ ಹಾಗೂ ವಿಕಾಸ ಪ್ರಕಾಶನ ಜಂಟಿ ಆಶ್ರಯದಲ್ಲಿ ಡಾ॥ ಬಿ. ಆರ್. ಮಂಜುನಾಥ್ ಅವರ 'ಎಂಟು ದಿಕ್ಕು ನೂರೆಂಟು ಕಥೆ' ಮತ್ತು 'ಕಥನ ಕಣಜದ ಗಟ್ಟಿ ಕಾಳು' ಕೃತಿಗಳ ಲೋಕಾರ್ಪಣೆಯು ದಿನಾಂಕ ೨೮–೭–೨೦೧೯ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ನೆರವೇರಿತು. ಡಾ॥ ಜಿ. ರಾಮಕೃಷ್ಣ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಪ್ರೊ॥ ವಿ. ಎನ್. ಲಕ್ಷ್ಮೀನಾರಾಯಣ, ಶ್ರೀ ಹುಣಸವಾಡಿ ರಾಜನ್, ಡಾ॥ ಜಿ. ರಾಮಕೃಷ್ಣ, ಶ್ರೀಮತಿ ಪಲ್ಲವಿ ಇಡೂರ ಹಾಗೂ ಡಾ॥ ಬಿ. ಆರ್. ಮಂಜುನಾಥ್ ಉಪಸ್ಥಿತರಿದ್ದರು.

*(೩ನೇ ಪುಟದಿಂದ ಈ ತಿಂಗಳು)*

ಭಾಜಪ ಕೂಡ ಅನುಭವಿಸುತ್ತಿದೆ. ಅಸ್ಥಿರತೆ ಯಡಿಯೂರಪ್ಪನವರಿಗೂ ಕಾದಿದೆ. ಸರ್ವೋಚ್ಚ ನ್ಯಾಯಾಲಯದಲ್ಲಿ ಅನರ್ಹ ಶಾಸಕರ ಸ್ಥಿತಿ ಇತ್ಯರ್ಥವಾಗುವವರೆಗೆ ಕರ್ನಾಟಕದ ರಾಜಕಾರಣ ತಿಳಿಯಾಗಲು ಸಾಧ್ಯವಿಲ್ಲ. ಪ್ರವಾಹ ಎತ್ತಕಡೆ ಹರಿಯುವುದೆಂದು ಹೇಳುವಂತಿಲ್ಲ. ಅಂತೂ ಕರ್ನಾಟಕದ ರಾಜಕೀಯ ಪ್ರವಾಹ ಪರಿಸ್ಥಿತಿಯಂತೆಯೇ ಅಲ್ಲೋಲಕಲ್ಲೋಲವಾಗಿದೆ.

* * *

ಭಾಜಪ ಅಧಿಕಾರದಲ್ಲಿರುವವರೆಗೆ ಭಿನ್ನರಿಗೆ ರಕ್ಷಣೆ ಇಲ್ಲ. 'ಜೈಹಿಂದ್', 'ಭಾರತ ಮಾತಾಕಿ ಜೈ' ಎಂಬುದು ಹೋಗಿ ಇನ್ನು ಮುಂದೆ 'ಜೈ ಶ್ರೀರಾಮ್' ಮಂತ್ರ ಜಪ ಅನಿವಾರ್ಯ ಎನಿಸಿದೆ. ಗೋಹತ್ಯೆ ಆರೋಪ ಮೋದಿ ಆಡಳಿತದ ಮೊದಲ ಅಧಿಕಾರಾವಧಿಯಲ್ಲಿ ಮುಂಚೂಣಿಯಲ್ಲಿತ್ತು. ಹಿಂದು ಮತಾಂಧರು, ಅರ್ಥಾತ್ ಆರೆಸ್ಸೆಸ್ಸಿನವರು ಅನ್ಯಮತೀಯರನ್ನು ಸಾರ್ವಜನಿಕವಾಗಿ ಥಳಿಸಲು, ಕಗ್ಗೊಲೆ ಮಾಡಲು ಹಲ್ಲೆ ನಡೆಸುತ್ತಿದ್ದರು. ಅಂಥ ಪ್ರಕರಣಗಳು ಹಲವಾರು ನಡೆದುವು. ಯಾರಿಗೆ ಶಿಕ್ಷೆಯಾಯಿತೋ ಈ ಅಪರಾಧಕ್ಕೆ ಗೊತ್ತಿಲ್ಲ. ಆದರೆ ಅಲ್ಪಸಂಖ್ಯಾತರನ್ನು ಬೆದರಿಸಲು ಈ ಅಸ್ತ್ರ ಧಾರಾಳವಾಗಿ ಬಳಕೆಯಾಯಿತು. ಈಗ ಎರಡನೆಯ ಅವಧಿಯಲ್ಲಿ ಮೋದಿ–ಷಾ ಜೋಡಿ ಆಡಳಿತದಲ್ಲಿ ವರಸೆಯೇ ಬೇರೆ. ಈಗ 'ಜೈಶ್ರೀರಾಮ್' ಎನ್ನದಿದ್ದರೆ ಕತೆ ಮುಗಿದ ಹಾಗೆಯೇ. ಅಯೋಧ್ಯೆಯಲ್ಲಿ ರಾಮಮಂದಿರ ಕಟ್ಟಲು ನಿಂತಿರುವ ಕಟ್ಟಾಳುಗಳು 'ಜೈ ಶ್ರೀರಾಮ್' ಎಂದು ಘೋಷಣೆ ಕೂಗದಿದ್ದರೆ ಕೊಡುವ ಶಿಕ್ಷೆಗೆ ಗುರಿಯಾಗಬೇಕಾಗಿದೆ. ಅಂಥ ಪ್ರಕರಣಗಳು ಉತ್ತರ ಭಾರತದಲ್ಲಿ ಅದರಲ್ಲೂ ಉತ್ತರ ಪ್ರದೇಶದಲ್ಲಿ ಹೆಚ್ಚಾಗಿ ನಡೆದಿವೆ. ಉತ್ತರ ಪ್ರದೇಶದಲ್ಲಿ 'ಜೈ ಶ್ರೀರಾಮ್' ಎಂದು ಘೋಷಣೆ ಕೂಗದಿದ್ದ ಯುವಕನ ಮೇಲೆ ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಲಾಯಿತು. ಹಾಗೆಯೇ ಇತರರ ಮೇಲೂ ಹಲ್ಲೆಗಳು ನಡೆದಿವೆ. ಎಲ್ಲಿಗೆ ಬಂತು ನೋಡಿ ಪರಿಸ್ಥಿತಿ ಭಾಜಪ ಆಡಳಿತದಲ್ಲಿ!

* * *

'ಟಿಪ್ಪು ಜಯಂತಿ' ಯಾವತ್ತೂ ವಿವಾದಗ್ರಸ್ತ. ಕಾಂಗ್ರೆಸ್ ಅದನ್ನು ರಾಜಕೀಯವಾಗಿ ಬಳಸಿ ಕೊಳ್ಳಲು ಹಠತೊಟ್ಟರೆ, ಭಾಜಪ ವಿರೋಧಿಸಿ ರಾಜಕೀಯ ಮಾಡುತ್ತಿದೆ. ಸರಕಾರ ವಿವಾದಾತ್ಮಕ ವಾದ ಇಂಥ ಜಯಂತಿಗಳನ್ನು ಆಚರಿಸುವ ಹುನ್ನಾರವೆ ಸರಿಯಿಲ್ಲ ಎಂದು ಕಾಣುತ್ತದೆ. ರಾಜಕಾರಣಕ್ಕಾಗಿ ಸರಕಾರ ಹಲವು ಜಯಂತಿ ಗಳನ್ನು ಆಚರಿಸುವ ಪರಿಪಾಠ ಇದೆ. ಎಲ್ಲ ಬಿಟ್ಟು ಯಾವ ಪುರುಷಾರ್ಥಕ್ಕಾಗಿ ಜಯಂತಿಗಳನ್ನು ಆಚರಿಸಬೇಕು ಸರಕಾರ. ಅನವಶ್ಯಕವಾಗಿ ಇಂಥ ಜಯಂತಿಗಳ ಆಚರಣೆಯು ಚರಿತ್ರೆಯಲ್ಲಿನ ವ್ಯಕ್ತಿಗಳಿಗೆ ಸಲ್ಲಿಸುವ ಗೌರವಕ್ಕಿಂತ ಅಪಮಾನ ಎಸಗಿದಂತೆ ಆಗುತ್ತದೆ. ಟಿಪ್ಪು ಜಯಂತಿ ಅಂಥವುಗಳಲ್ಲಿ ಒಂದು. ಬ್ರಿಟಿಷ್ ಸರಕಾರದ ವಿರುದ್ಧವಾಗಿ ಕೊನೆ ಉಸಿರು ಇರುವವರೆಗೆ ಕಾದಾಡಿದ ವೀರ ಪುರುಷ ಟಿಪ್ಪು ಸುಲ್ತಾನ್. ಇದು ಚರಿತ್ರೆಯ ಸತ್ಯ. ಅನ್ಯಮತೀಯ ಎಂಬ ಕಾರಣಕ್ಕೆ ಹಿಂದು ಸಂಘಟನೆಗಳು, ಮುಖ್ಯವಾಗಿ ಆರೆಸ್ಸೆಸ್, ಭಾಜಪಗಳು ವಿರೋಧಿಸುತ್ತಿರುವುದು ಇತಿಹಾಸಕ್ಕೆ ಎಸಗಿರುವ ಅಪರಾಧ. ಹಾಗೆಯೇ ಕಾಂಗ್ರೆಸ್ ಆತನ ಹೆಸರನ್ನು ರಾಜಕೀಯ ದಾಳವಾಗಿ ಉಪಯೋಗಿಸಿಕೊಳ್ಳಲು ಹೊರಟಿರುವುದೂ ಅಪರಾಧವೇ. ಭಾಜಪ ಸರಕಾರದ ನೇತೃತ್ವ ವಹಿಸಿರುವ ಯಡಿಯೂರಪ್ಪ ವಿಶ್ವಾಸಮತ ವಿಧಾನಸಭೆಯಲ್ಲಿ ಸಾಬೀತುಪಡಿಸಿದ ಮರುದಿನವೇ 'ಟಿಪ್ಪು ಜಯಂತಿ'ಯನ್ನು ರದ್ದುಗೊಳಿಸಿದ್ದು ಸರಿಯಾದ ಕ್ರಮವಲ್ಲ. ಅಂಥ ಅವಸರ ಏನಿತ್ತು ಎನ್ನುವುದು ತಿಳಿಯುತ್ತಿಲ್ಲ. ಅಧಿಕಾರ ಗದ್ದುಗೆ ಏರುತ್ತಿದ್ದ ಹಾಗೆಯೇ ಕೈಗೊಂಡಿರುವ ಟಿಪ್ಪು ಜಯಂತಿ ರದ್ದತಿಯ ಕ್ರಮ ಹಿಂದುತ್ವದ ಕಾರ್ಯ ಸೂಚಿಗೆ ಮುನ್ನುಡಿಯಾಗಿದೆ. ಸಂಪುಟ ರಚನೆಗೆ ಮುನ್ನವೇ ಯಡಿಯೂರಪ್ಪ ಹೊರಡಿಸಿರುವ ಈ ಆಜ್ಞೆ ಟಿಪ್ಪು ಸುಲ್ತಾನನ ಶೌರ್ಯಕ್ಕೆ ಎಸಗಿರುವ ಅಪಮಾನ. ಕಾಂಗ್ರೆಸ್ ಜಯಂತಿ ಪರವಾಗಿದ್ದರೆ, ಭಾಜಪ ವಿರೋಧಿ. ಆದ್ದರಿಂದ ಸರಕಾರ ಯಾವ ಜಯಂತಿಯನ್ನೂ ಆಚರಿಸದಿರುವುದೇ ಮೇಲು.

* * *

ಬ್ರಿಟನ್ ಯೂರೋಪಿಯನ್ ಯೂನಿಯನ್ನಿ ನಿಂದ ಕಾಲ್ತೆಗೆಯುವುದು ಇನ್ನಷ್ಟು ಕಗ್ಗಂಟಾಗಿದೆ. 'ಬ್ರೆಕ್ಸಿಟ್' ಎಂದೇ ಹೆಸರಾಗಿರುವ ಜನಮತ ಗಣನೆಯ ತೀರ್ಪು ಸರಕಾರಕ್ಕೆ ನುಂಗಲೂ ಆಗದ ಉಗುಳಲೂ ಆಗದ ಬಿಸಿತುಪ್ಪವಾಗಿ ಪರಿಣಮಿಸಿದೆ. ಈಗಾಗಲೇ ಪ್ರಧಾನಿ ಥೆರೆಸಾ ಮೇ ಸರಕಾರ ಬ್ರೆಕ್ಸಿಟ್‌ಗೆ ಬಲಿಯಾಗಿದೆ. ಆಕೆ ಪ್ರಯಾಸಪಟ್ಟು ಸಿದ್ಧಗೊಳಿಸಿದ್ದ ಒಪ್ಪಂದಕ್ಕೆ ಬ್ರಿಟಿಷ್ ಪಾರ್ಲಿಮೆಂಟಿನ ಬೆಂಬಲ ದೊರಕಲಿಲ್ಲ. ಈಗ ನೂತನ ಪ್ರಧಾನಿಯಾಗಿ ಬೋರಿಸ್ ಜಾನ್ಸನ್ ಅಧಿಕಾರ ವಹಿಸಿಕೊಂಡಿದ್ದಾರೆ. ಅವರ ಹಾದಿಯೂ ಸುಗಮವಲ್ಲ. ಈಗಾಗಲೇ ಇಬ್ಬರು ಪ್ರಧಾನಿಗಳನ್ನು ಆಹುತಿ ತೆಗೆದುಕೊಂಡಿರುವ 'ಬ್ರೆಕ್ಸಿಟ್' ಮುಂದಿನ ದಾರಿ ಯಾವುದು ಈಗಲೇ ಹೇಳುವಂತಿಲ್ಲ. ಜನಾಭಿಪ್ರಾಯ ಸಂಗ್ರಹವಾದಾಗ ಬ್ರೆಕ್ಸಿಟ್ ಪರ ಹೆಚ್ಚು ಜನ ಒಲವು ತೋರಿದ್ದರಿಂದ ಡೇವಿಡ್ ಕ್ಯಾಮರೂನ್‌ರ ಸರಕಾರ ಪತನಗೊಂಡಿತ್ತು. ಯೂನಿಯನ್ನಿನಿಂದ ಹೊರಬರಲು ಥೆರೆಸಾ ಮೇ ಸರಕಾರದ ಪ್ರಸ್ತಾವಕ್ಕೆ ಬೆಂಬಲ ದೊರಕದೆ ಮೇ ಸರಕಾರ ಪತನಗೊಂಡಿತು. ಬ್ರಿಟನ್ನಿಗೆ ಇನ್ನೂ ಏನು ಕಾದಿದೆಯೋ.

* * *

ಪ್ರಕೃತಿ ವಿಕೋಪದ ಇತ್ತೀಚಿನ ಪರಿಣಾಮಗಳು ನಮ್ಮ ರಾಜ್ಯಕ್ಕೆ ದುರಂತ ಹಾಗೂ ಸವಾಲು. ನಮ್ಮಲ್ಲೇ ಆದ ಮಳೆಗಿಂತಲೂ ಕೋಯ್ನಾ, ಮಹಾಬಲೇಶ್ವರ, ಪಂಚಗನಿ ಮುಂತಾದ ಮಹಾರಾಷ್ಟ್ರದ ಪ್ರದೇಶ ಗಳಲ್ಲಿ ಸುರಿದ ಧಾರಾಕಾರ ಮಳೆಯಿಂದಾಗಿ ಆಲಮಟ್ಟಿ ಜಲಾಶಯ ತುಂಬುವುದಲ್ಲದೆ ಅನೇಕ ಊರುಗಳು ಮುಳುಗಿಹೋದವು. ಮನೆಗಳು – ಮರಗಳು ಉರುಳಿಹೋದವು. ನಮ್ಮಲ್ಲೇ ಆದ ಮಳೆಯೂ ನಾಡು ಅಲ್ಲೋಲ–ಕಲ್ಲೋಲವಾಗಲು ಕಾರಣವಾಯಿತು. ಒಂದು ವಾರದಲ್ಲಿ ಸಂಭವಿಸಿದ ಹೊಡೆತವು ಇಡೀ ವ್ಯವಸ್ಥೆಯನ್ನು ಅಲುಗಾಡಿಸಿ ಬಿಟ್ಟಿದೆ. ರಕ್ಷಣಾ ಕಾರ್ಯಗಳಲ್ಲಿ ಜನರೇ ಪಾಲ್ಗೊಂಡು, ಆಗಬಹುದಾಗಿದ್ದ ಘೋರ ದುರಂತವನ್ನು ಸಾಕಷ್ಟು ನಿರೋಧಿಸಿದ್ದಾರೆ. ಅವರಿಗೆ ರಾಜ್ಯವು ಋಣಿಯಾಗಿದೆ. ಕೇಂದ್ರ ಸರ್ಕಾರದ ಕಣ್ಣಿಗೆ ಇದು ಭಾರಿ ಪ್ರಮಾಣದ ದುರಂತ ಎನಿಸಿಲ್ಲ ದಿರುವುದು ನಮ್ಮ ರಾಜ್ಯದ ದುರಂತ. ಸರ್ಕಾರಿ ಅಧಿಕಾರಿಗಳು ಮತ್ತು ಸಾರ್ವಜನಿಕರು ರಾಜಕೀಯ ನಾಯಕರಿಗಿಂತಲೂ ಹೆಚ್ಚು ಶ್ರಮಿಸಿದ್ದಾರೆ ಮತ್ತು ಕೀರ್ತಿಗೆ ಭಾಜನರಾಗಿದ್ದಾರೆ. ರಾಜಕೀಯ ವ್ಯಕ್ತಿಗಳು ಭಾಗವಹಿಸಲು ಏನು ಮುಗ್ಗಟ್ಟುಗಳಿದ್ದು ವೆಂಬುದನ್ನು ವ್ಯಾಖ್ಯಾನಿಸುವ ಅಗತ್ಯವಿಲ್ಲ. ಮುಖ್ಯಮಂತ್ರಿಯನ್ನು ಬಿಟ್ಟು ಬೇರೆ ಮಂತ್ರಿಗಳೇ ಇರದಿದ್ದ ಅಪರೂಪದ ಕಾಲದಲ್ಲಿ ಪ್ರವಾಹ ಬಂದಿದ್ದು ರಾಜಕೀಯ ನಾಯಕರಿಗೆ ಅವಗಢ ಉಂಟುಮಾಡಿರಬೇಕು ! ಯಾರು ಮಂತ್ರಿ ಗಳಾಗುತ್ತಾರೆಂಬ ಗುಸುಗುಸು ಅವರನ್ನು ನಿಷ್ಕ್ರಿಯ ಗೊಳಿಸಿತೋ ಏನೋ. ತಮ್ಮ ತಮ್ಮ ಕ್ಷೇತ್ರಗಳಲ್ಲಿ ಶಾಸಕರು ಸಾಂತ್ವನ ಹೇಳುವುದಕ್ಕೇನೂ ಅಡ್ಡಿ ಇರಲಿಲ್ಲವಾದರೂ ಅವರ ರಾಜಕೀಯ ಭವಿಷ್ಯದ ಬಗೆಗಿನ ಚಿಂತೆಯು ಅವರನ್ನು ಬೆಂಗಳೂರು – ದೆಹಲಿಗಳಲ್ಲಿ ಉಳಿಸಿಬಿಟ್ಟಿತು. ಮುಖ್ಯಮಂತ್ರಿ ಪ್ರಮಾಣ ವಚನ ಸ್ವೀಕರಿಸಿದ ನಂತರ ವಾರಗಟ್ಟಲೆ ಮಂತ್ರಿಮಂಡಲ ರಚನೆಯಾಗದೆ ದಿನಗಳು ಕಳೆದುಹೋದದ್ದು ನಮ್ಮ ರಾಜ್ಯದಲ್ಲಿ ಒಂದು ಅಪೂರ್ವ ದಾಖಲೆ. ಅಂದರೆ, ತೆರೆಮರೆಯಲ್ಲಿ ವ್ಯವಹಾರ ಕುದುರಿಸಲು ಏನೆಲ್ಲಾ ಕಸರತ್ತು ನಡೆಸುತ್ತಿರುವ ಬಣಗಳಿವೆ ಎಂಬುದರ ಸೂಚನೆ ಅದು. ಮಾನ್ಯ ಅಮಿತ್ ಷಾ ಅವರಿಗೆ ಪುರುಸೊತ್ತು ದೊರೆತ ನಂತರ ಯಾರು ಮಂತ್ರಿಗಳಾಗುತ್ತಾರೆ ಎಂಬುದು ತೀರ್ಮಾನವಾಗಬೇಕಿದೆ ಎಂಬ ಸೂಚನೆಯನ್ನು ಮುಖ್ಯಮಂತ್ರಿಯೇ ನೀಡಿದ್ದಾರೆ. ಜೊತೆಗೆ, ಸರ್ವೋಚ್ಚ ನ್ಯಾಯಾಲಯವು ನಮ್ಮ "ಅತೃಪ್ತ" ಘಟಾನುಘಟಿಗಳ ಅಚ್ಚ ಪ್ರಾಮಾಣಿಕತೆ ಮತ್ತು ನಿಸ್ಪೃಹತೆ ಬಗ್ಗೆ ತೀರ್ಮಾನ ನೀಡ ಬೇಕಾಗಿದೆ. ಈ ಅತೃಪ್ತರನ್ನು ತಣಿಸಿ ತೃಪ್ತಿಗೊಳಿಸದೆ ಭಾಜಪದಲ್ಲಿರುವ ಬೇರೆಯವರಿಗೆ ತೃಪ್ತಿಯ ಭಾಗ್ಯ ಇಲ್ಲವೇನೋ!! ನಮ್ಮ ರಾಜ್ಯದ ರಾಜಕೀಯ ಧುರೀಣರ ಮಾನವೆಂದರೆ ಹಣದಿಂದ ಅಳೆಯ ಬೇಕಾದ್ದು ಎಂಬ ಸಂಗತಿಗೆ ಜನತೆ ಈ ವೇಳೆಗೆ ಒಗ್ಗಿಹೋಗಿದೆ. ಇಷ್ಟು ಭಯಂಕರ 'ಅತೃಪ್ತಿ'ಗೆ

ಖಜಾನೆಯನ್ನು ಬರಿದು ಮಾಡಿ ಸ್ಥಳೀಯ ಮತ್ತು ದೆಹಲಿಯ ದೇವತೆಗಳಿಗೆ 'ಹವಿಸ್ಸು' ನೀಡಿದರೆ ಮಂತ್ರಿಪದವಿಗಳು ದಕ್ಕಬಹುದು, ಆದರೆ ಪ್ರವಾಹ ಪೀಡಿತರ ಬವಣೆ ನೀಗುವುದಿಲ್ಲ. ಮಾನ್ಯ ನಿರ್ಮಲಾ ಸೀತಾರಾಮನ್ ಎಂಬಾಕೆ ದೇಶದಲ್ಲಿ '೫ ಟ್ರಿಲಿಯನ್ ಡಾಲರ್' ಆರ್ಥಿಕತೆಯ ನಿರ್ಮಾಣದಲ್ಲಿ ತೊಡಗಿರುವಾಗ ಹೆಲಿಕಾಪ್ಟರಿನಲ್ಲಿ ಸಂಚರಿಸುವಾಗ ಬಹುಶಃ ಅವರಿಗೆ ನಮ್ಮ ರಾಜ್ಯದಲ್ಲಿ ಪ್ರವಾಹವೂ ಕಾಣಲಿಲ್ಲ, ಸಂತ್ರಸ್ತರೂ ಕಾಣಲಿಲ್ಲ. ಅವರನ್ನು ನಮ್ಮ ರಾಜ್ಯದಿಂದ ರಾಜ್ಯಸಭೆಗೆ ಕಳಿಸಿದ್ದ ಭಾರತೀಯ ಜನತಾ ಪಕ್ಷದ ಶಾಸಕರು ಪಿಳಿಪಿಳಿ ಕಣ್ಣು ಬಿಡುತ್ತಿದ್ದರೆ ಆಶ್ಚರ್ಯವಿಲ್ಲ. ಆದರೆ "ಒಂದು ದೇಶ – ಒಂದು ಭಾಷೆ – ಒಬ್ಬ ನಾಯಕ – ಒಬ್ಬ ರಾಮ" ಮುಂತಾಗಿ ಒಂಟಿತನದ ಬಾಧೆಗೆ ಸಿಲುಕಿರುವ ಅವರು ಈಗಲಾದರೂ ದೆಹಲಿಯತ್ತ ದೃಷ್ಟಿ ಹೊರಳಿಸುವುದನ್ನು ಸ್ವಲ್ಪ ಕಡಿಮೆ ಮಾಡಿ ಪ್ರವಾಹದಲ್ಲಿ ಕೊಚ್ಚಿ ಹೋಗದೆ ಸ್ವಂತದ ಸ್ಥೈರ್ಯದಿಂದ ಸೆಣಸುತ್ತಿರುವ ಬಾಂಧವರತ್ತ ಕಣ್ಣು ಹಾಯಿಸುತ್ತಾರೆಂದು ಆಶಿಸೋಣ.

✶ ✶ ✶

ಮೈಮೂನಾ ಅಬ್ಬಾಸ್ ಮೊಲ್ಲಾ ಬೆಂಗಳೂರಿನವರು. ೧೯೭೦–೮೦ರ ದಶಕಗಳಲ್ಲಿ ಅವರು ಸೌತ್ ಎಂಡ್ ಬಳಿ ವಾಸಿಸುತ್ತಿದ್ದರು. ಪಶ್ಚಿಮ ಬಂಗಾಳದ ಯುವನಾಯಕ ಹನ್ನನ್ ಮೊಲ್ಲಾನನ್ನು ಮದುವೆಯಾಗಿ ಅವರು ಕೊಲ್ಕತ್ತಾ ಮತ್ತು ದೆಹಲಿಗೆ ತೆರಳಿದರು. ಹನ್ನನ್ ಮೊಲ್ಲಾ ಲೋಕಸಭಾ ಸದಸ್ಯರಾಗಿದ್ದರು ಹಾಗೂ ರೈತ ಹೋರಾಟಗಳಲ್ಲಿ ನಿರತರಾಗಿದ್ದರು. ಮೈಮೂನಾ ಇತ್ತೀಚೆಗೆ ಅದ್ಭುತವಾದ ಸಾಹಸದಲ್ಲಿ ಭಾಗಿಯಾಗಿ ಬಂದು ಉಕ್ಕು ಪರದೆಯ ಹಿಂದಿನ ಜೀವನ ಹೇಗಿದೆಯೆಂಬುದರ ಪರಿಚಯ ಮಾಡಿಕೊಟ್ಟಿದ್ದಾರೆ. ಮೈಮೂನಾ ಮತ್ತಿಬ್ಬರು ಕಾಶ್ಮೀರಕ್ಕೆ ಹೋಗಿ ನಾಲ್ಕೈದು ದಿನ ನಡೆದಾಡಿ ಬಂದಿದ್ದಾರೆ. ವಾಹನಗಳು ಅವರನ್ನು ಕೊಂಡೊಯ್ಯಲು ಸಿದ್ಧ ಇರದಿದ್ದುದರಿಂದ 'ಪಾದಯಾತ್ರೆ'ಯನ್ನು ವಿಪುಲವಾಗಿ ನಡೆಸಿದ್ದಾರೆ. ಎಲ್ಲವೂ ಸ್ವಚ್ಛವಾಗಿದೆ, ಸುಗಮವಾಗಿದೆ, ಸ್ವತಂತ್ರವಾಗಿದೆ, ಇತ್ಯಾದಿ ಭಾರತ ಸರ್ಕಾರದ ಹೇಳಿಕೆಗಳಿಗೆ ಭಿನ್ನವಾಗಿ ಮೈಮೂನಾ ತಂಡದವರು ಕಾಶ್ಮೀರದ ಜನಸಾಮಾನ್ಯರು ಹಿಂಸೆ, ಹಸಿವು ಮತ್ತು ಹಂಗಿಗೆ ತೀವ್ರವಾಗಿ ಗುರಿಯಾಗಿದ್ದುದರ ಪ್ರತ್ಯಕ್ಷ ವರದಿ ನೀಡಿದ್ದಾರೆ. ತಾರಿಗಾಮಿ ಶ್ರೀನಗರದ ನಿವಾಸಿ, ಕಾಶ್ಮೀರದ ಶಾಸನಸಭಾ ಸದಸ್ಯ, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತ. ಕೆಲವು ವರ್ಷಗಳ ಹಿಂದೆ ಆತ ಬೆಂಗಳೂರಿಗೆ ಬಂದಿದ್ದಾಗ 'ಹೊಸತು' ಅವರ ಸಂದರ್ಶನ ಮಾಡಿ ಪ್ರಕಟಿಸಿತ್ತು. ಮೈಮೂನಾಗೆ ಆತ ಆಪ್ತ ಸ್ನೇಹಿತ. ಅವರನ್ನು ಭೇಟಿಯಾಗಲು ಮೈಮೂನಾ ತಂಡ ಅವರ ಮನೆಯ ಬಾಗಿಲಿನವರೆಗೆ ಹೋಯಿತು. ತಾರಿಗಾಮಿ ಒಳಗೆ ಮನೆಯಲ್ಲಿದ್ದರು – ಆದರೆ ಗೃಹಬಂಧನದಲ್ಲಿ. ಅವರನ್ನು ಭೇಟಿಯಾಗಲು ಮೈಮೂನಾ ತಂಡಕ್ಕೆ ಪೊಲೀಸರು ಅನುಮತಿ ನೀಡಲಿಲ್ಲ. "ಎಲ್ಲವೂ ಸುಗಮ"ವಾಗಿದ್ದರೆ ತಾರಿಗಾಮಿ ಏಕೆ ಬಂಧನದಲ್ಲಿದ್ದಾರೆ ಮತ್ತು ಅವರನ್ನು ಯಾರೂ ಭೇಟಿಯಾಗಲು ಸಾಧ್ಯವಿಲ್ಲದಿರುವುದು ಏಕೆ? ಕಾಶ್ಮೀರವು ಭಾರತದ ಅವಿಭಾಜ್ಯ ಅಂಗವೆಂಬುದನ್ನು ಒಪ್ಪಿಕೊಂಡಿರುವವರಿಗೆ ಕಾಶ್ಮೀರದ ಜನರ ಸ್ಥಿತಿಗತಿಗಳನ್ನು ಮುಚ್ಚುಮರೆಯಿಲ್ಲದೆ ತಿಳಿಸುವುದಕ್ಕೆ ಅಡ್ಡಿ ಏನಿದೆ? ನಮ್ಮ ದೇಶದ ಜನರನ್ನು ಪರಕೀಯರೋ ಎಂಬಂತೆ ನಡೆಸಿಕೊಳ್ಳುವುದುಂಟೇ? ಅವರೊಡನೆ ಸಂವಾದ ಏರ್ಪಡಿಸಲು ಸಂಕೋಚವೇಕೆ? ಮೈಮೂನಾ ತಂಡದವರು ತೀವ್ರಗಾಮಿಗಳ ಬೆಂಬಲಿಗರೇನಲ್ಲ ಅಲ್ಲವೇ? ಇಂತಹ ಹತ್ತಾರು ಪ್ರಶ್ನೆಗಳು ದೇಶದ ಮುಂದಿವೆ. ಸರ್ವೋಚ್ಚ ನ್ಯಾಯಾಲಯವು ಸಂವಿಧಾನದ ೩೭೦ನೆಯ ವಿಧಿಯನ್ನು ಕುರಿತಂತೆ ವಿಚಾರಣೆ ನಡೆಸಲು ಎರಡು ವಾರಗಳ ಗಡುವನ್ನು ಪ್ರಕಟಿಸಿದೆ. ಅಲ್ಲಿಯವರೆವಿಗೂ ಕಾಶ್ಮೀರದ ಜನಸಾಮಾನ್ಯರಿಗೆ ಆಹಾರ, ಔಷಧಿ, ನೀರು, ವಿದ್ಯುಚ್ಛಕ್ತಿ ಮುಂತಾದುವು ಮುಗ್ಗಟ್ಟಿಲ್ಲದೆ ದೊರಕಬೇಕಲ್ಲವೇ? ಪ್ರತಿಭಟನೆಯಲ್ಲಿ ತೊಡಗಿರುವವರೊಡನೆ ಸಹ ಸರ್ಕಾರವು ಸಂಭಾಷಣೆ ನಡೆಸಬೇಕು. ಅದರ ಬದಲಾಗಿ ದೂರವಾಣಿ ಇತ್ಯಾದಿ ಸೌಲಭ್ಯಗಳನ್ನು ಕಡಿತಗೊಳಿಸಲಾಗಿದೆ ಎಂಬ ಸುದ್ದಿ ಇದೆ. ೧೯೭೫ರ ತುರ್ತು ಪರಿಸ್ಥಿತಿ ಕಾಲದಲ್ಲೂ ಜನರಿಗೆ ದೇಶದಲ್ಲಿ ಎಲ್ಲೆಲ್ಲಿ ಏನೇನು ಜರುಗುತ್ತಿದೆ ಎಂಬ ಮಾಹಿತಿ ದೊರೆಯುತ್ತಿತ್ತು. ಆದರೆ ಕಾಶ್ಮೀರವೀಗ ನಮಗೆ "ಕಗ್ಗತ್ತಲೆಯ ಖಂಡ" ಆಗಿಬಿಟ್ಟಿದೆ, ಅಲ್ಲಿಯ ಜನಗಳನ್ನೂ ಕಾರ್ಗತ್ತಲು ಆವರಿಸಿದೆ.

ರಾಜ್ಯಶಾಸ್ತ್ರ ನಿಪುಣರೆಂದು ತಮ್ಮನ್ನು ತಾವು ಬಣ್ಣಿಸಿಕೊಳ್ಳುವ ಕೆಲವರು ನಮ್ಮ ಮಾಧ್ಯಮಗಳಲ್ಲಿದ್ದಾರೆ. ಅವರಿಗೆ ಕಾಶ್ಮೀರದ ಕತ್ತಲು ಕಾಣಿಸುತ್ತಿಲ್ಲ; ಅಲ್ಲಿಯ ಕತ್ತಲು ಸ್ವಾಭಾವಿಕ ಮತ್ತು ಅನಿವಾರ್ಯವೆಂಬಂತೆ ಅವರು ಚಿತ್ರಿಸುತ್ತಿರುವುದು ಉಂಟು. ಕೇವಲ ಎಪ್ಪತ್ತು ವರ್ಷಗಳ ಹಿಂದಿನ ಘಟನೆಗಳನ್ನು ಸಹ ತಿಳಿಯಲು ನಿರಾಕರಿಸುತ್ತಿರುವ ಭೂಪರು ಇವರು. ಜವಾಹರಲಾಲ್ ನೆಹರು ಎಂಬ ಏಕೈಕ ವ್ಯಕ್ತಿಯೇ ಬಿಕ್ಕಟ್ಟುಗಳಿಗೆ ಕಾರಣವೆಂದು ಅರಚುವವರಿಗೆ ಇತಿಹಾಸದ ಮೊದಲ ಪಾಠಗಳ ತಿಳಿವು ಇದ್ದಂತೆ ತೋರುತ್ತಿಲ್ಲ. ಹರಿಸಿಂಗ್ ಎಂಬೊಬ್ಬ ರಾಜ ಕಾಶ್ಮೀರವನ್ನು ಭಾರತದಲ್ಲಿ ಅಂತರ್ಗತವಾಗಲು ಬಿಡದೆ ಕಾಶ್ಮೀರದ ಮೇಲೆ ಪಾಕಿಸ್ತಾನದ ಆಕ್ರಮಣ ನಡೆಯಲು ಕಾರಣನಾದ. ಸ್ವಾತಂತ್ರ್ಯ ಪೂರ್ವದಲ್ಲಿ ಆತನ ವಿರುದ್ಧ ಕಾಶ್ಮೀರದಲ್ಲಿ ಜನತಾ ಚಳುವಳಿ ನಡೆದಿತ್ತು; ನೆಹರು ಅಂಥವರನೇಕರಿಗೆ ಹರಿಸಿಂಗ್ ಕಾಶ್ಮೀರ ಪ್ರವೇಶಿಸಲು ಅವಕಾಶ ನೀಡಿರಲಿಲ್ಲ. ಪಾಕ್ ಆಕ್ರಮಣದ ನಂತರವೂ ಭಾರತದಲ್ಲಿ ಲೀನವಾಗಲು ಮೀನ – ಮೇಷ ಎಣಿಸಿದ ಹರಿಸಿಂಗ್ ತರುವಾಯದಲ್ಲಿ ತಡವಾಗಿ ಭಾರತದ ಸೇನೆಯ ಪ್ರವೇಶವನ್ನು ಕೋರಿದ ಮತ್ತು ಷರತ್ತುಗಳನ್ನು ವಿಧಿಸಿದ. ನಮ್ಮ ಸೇನೆಗೆ ಕಾಲ ಮಿಂಚಿಹೋಗಲು ಅದೂ ಒಂದು ಕಾರಣವಾಗಿದ್ದಿತು. ಹರಿಸಿಂಗ್‌ನ ಅಂದಿನ ಷರತ್ತುಗಳಿಗೂ ಸಂವಿಧಾನದ ೩೭೦ನೆಯ ವಿಧಿಗೂ ಸಂಬಂಧವಿದೆಯೆನ್ನುತ್ತಾರೆ. ಸರ್ವೋಚ್ಚ ನ್ಯಾಯಾಲಯವು ಅಂತಹ ಅಂಶಗಳನ್ನೆಲ್ಲಾ ಪರೀಕ್ಷಿಸುತ್ತದೆಂಬ ನಿರೀಕ್ಷೆ ಇದೆ. ಏತನ್ಮಧ್ಯೆ ಕಾಶ್ಮೀರದ ನಾಗರಿಕ ಜೀವನಕ್ಕೆ ಧಕ್ಕೆ ಉಂಟು ಮಾಡದೆ ಭಾರತ ಸರ್ಕಾರವು ಮುನ್ನಡೆಯಲಾರದೆ ಎಂಬ ಪ್ರಶ್ನೆ ಎದ್ದಿದೆ. "ಬ್ರಿಟನ್ನಿನ ಬೊಗಳೆ ಕಾರ್ಪೊರೇಷನ್" ಎಂದು ಬಿ.ಬಿ.ಸಿ.ಯನ್ನು ಹಾಸ್ಯ ಮಾಡುತ್ತಿದ್ದುದುಂಟು. ಭಾರತದ ಇಂದಿನ ನಾಯಕತ್ವವನ್ನು ಬಿ.ಬಿ.ಸಿ. ಶ್ಲಾಘಿಸುತ್ತಲೇ ಬಂದಿದೆ. ಕಾಶ್ಮೀರದೊಳಗಿನ ಸನ್ನಿವೇಶವನ್ನು ಚಿತ್ರಿಸುವ ಒಂದೆರಡು ಸಂಗತಿಗಳನ್ನು ಬಿ.ಬಿ.ಸಿ. ಬಿತ್ತರಿಸಿತೆಂಬ ಸಮಾಚಾರವಿದೆ. ಅದಕ್ಕೆ ಕೇಂದ್ರ ಸರ್ಕಾರವು ವಿವರಣೆ ಕೇಳಿದೆಯೆಂಬ ಸುದ್ದಿಯೂ ಇದೆ. ಎಲ್ಲವೂ ಸುಗಮವಾಗಿದೆಯೆನ್ನುವ ನಮ್ಮ ಕೇಂದ್ರ ಸರ್ಕಾರವು ಇಂತಹ ವಿವರಣೆ ಬಯಸುವ ಪ್ರಸಂಗ ಉದ್ಭವಿಸಿದ್ದು ಹೇಗೆ? ಇರುವುದನ್ನು ಇರುವಂತೆ ಹೇಳಿದರೆ ಕೇಂದ್ರ ಸರ್ಕಾರಕ್ಕೆ ಜನರ ಬೆಂಬಲವೇನೂ ಶೂನ್ಯವಾಗುವುದಿಲ್ಲ ಎಂಬ ಭರವಸೆ ತಾಳುವುದು ಸಂದರ್ಭವನ್ನು ತಿಳಿಗೊಳಿಸಲು ಸಹಾಯಕವಾಗಬಹುದೆನಿಸುತ್ತದೆ.

✶ ✶ ✶

ಕಾಶ್ಮೀರದ ಇಂದಿನ ಸನ್ನಿವೇಶವನ್ನು ಕುರಿತಂತೆ ಇನ್ನೊಂದು ಪ್ರಸಂಗ ನಮ್ಮ ಮುಂದಿದೆ. ಅಮೆರಿಕಾದ ಪ್ರಜಾಪ್ರತಿನಿಧಿ ಸಭೆಯ ಸದಸ್ಯ ಟಾಮ್ ಸುವೋಜ್ಜಿ ಎಂಬಾತ ತನ್ನ ದೇಶದ ವಿದೇಶಾಂಗ ಕಾರ್ಯದರ್ಶಿ ಪಾಂಪಿಯೋಗೆ ಪತ್ರವೊಂದನ್ನು ಬರೆದು ಕಾಶ್ಮೀರದಲ್ಲಿ ಮಾನವ ಹಕ್ಕುಗಳ ದಮನ ಹೆಚ್ಚುತ್ತಿದೆಯಾದ್ದರಿಂದ ಅಮೆರಿಕಾದ ಸರ್ಕಾರವು ಭಾರತ ಸರ್ಕಾರದೊಡನೆ ಮಾತುಕತೆ ನಡೆಸಬೇಕು ಎಂದು ಆಗ್ರಹಿಸಿದ. ಅವನು ಪಾಂಪಿಯೋಗೆ ಯಾವ ದಾಖಲೆಗಳನ್ನು ನೀಡಿದ್ದನೋ ತಿಳಿಯದು. ನಮ್ಮ ಕೇಂದ್ರ ಸರ್ಕಾರವು ಅಮೆರಿಕಾದ ಪರಮ ಮಿತ್ರ, ನಮ್ಮ ದೇಶವನ್ನು ನೇಟೋ ಕೂಟಕ್ಕೆ ಆಹ್ವಾನಿಸಲಾಗಿದೆ ಕೂಡ. ಅದಕ್ಕೆ ಒಪ್ಪಿದರೆ ನಮ್ಮ ದೇಶದಲ್ಲಿ ನೇಟೋ ಮಿಲಿಟರಿ ಠಾಣಗಳು ಸಹ ತಲೆ ಎತ್ತಬಹುದು. ಅಂತಹ ಅಮೆರಿಕಾದ ಪ್ರಜಾಪ್ರತಿನಿಧಿಯು ತನ್ನ ಪತ್ರವನ್ನು ಹಿಂತೆಗೆದುಕೊಂಡ. ಏಕೆಂದರೆ ಅಮೆರಿಕಾದಲ್ಲಿ ನೆಲೆಸಿರುವ ಭಾರತ ಮೂಲದ ಒಂದಷ್ಟು ಮಂದಿ ಭಾರಿ ಕೋಲಾಹಲ ಎಬ್ಬಿಸಿದರು. ಏನೇ ಇರಲಿ, ಈ ಟಾಮ್ ನೀಡಿದ್ದ ದಾಖಲೆಗಳ ಬಗೆಗಿನ ಕುತೂಹಲವು ಅಪ್ರಾಸಂಗಿಕವಲ್ಲ.




## ✉ ಮನುಷ್ಯ ನಿರ್ಮಿತ ಅನಾಹುತ, ಈ ಜಲ ಪ್ರಳಯ

ತಾನು ಬದುಕುವುದಕ್ಕಾಗಿ ನಿಸರ್ಗದೊಂದಿಗೆ ಶತಮಾನಗಳಿಂದ ಸೆಣಸುತ್ತ ಬಂದ ಮನುಷ್ಯ, ಅನೇಕ ಬಾರಿ ಗೆದ್ದಿದ್ದಾನೆ. ಈ ಗೆಲುವಿಗೆ ಭಾರೀ ಬೆಲೆಯನ್ನೂ ತೆತ್ತಿದ್ದಾನೆ. ಕರ್ನಾಟಕ, ಮಹಾರಾಷ್ಟ್ರ ಮತ್ತು ಕೇರಳ ರಾಜ್ಯಗಳಲ್ಲಿ ಈಗ ಉಂಟಾಗಿರುವ ಜಲಪ್ರಳಯ ಇದಕ್ಕೊಂದು ಉದಾಹರಣೆ. ಪ್ರಕೃತಿಯ ಮೇಲೆ ನಡೆಸಿದ ದುರಾಕ್ರಮಣ ಈ ಸ್ಥಿತಿಗೆ ಕಾರಣ. ಇದಕ್ಕೆ ಲಾಭಕೋರ ಬಂಡವಾಳಶಾಹಿ ಆರ್ಥಿಕತೆಯ ಕೊಡುಗೆ ಸಾಕಷ್ಟಿದೆ.

ಮಳೆಗಾಲದಲ್ಲಿ ಮಳೆ ಬರುವುದು ನಿಸರ್ಗದ ಸಹಜ ನಿಯಮ. ಮಳೆಯ ನೀರು ಹರಿದು ಹೋಗಲು ಹಳ್ಳ, ಕೊಳ್ಳ, ನದಿಗಳಿವೆ. ಈ ನೀರು ಹರಿದು ಹೋಗುವ ಮಾರ್ಗದಲ್ಲೇ ಮರಳು ಗಣಗಾರಿಕೆ ನಡೆಸಿದರೆ, ಹಳ್ಳ, ಕೆರೆಗಳನ್ನು ಮುಚ್ಚಿ ಬಡಾವಣೆ, ಮನೆಗಳನ್ನು ನಿರ್ಮಿಸಿಕೊಂಡರೆ ನೀರು ಹರಿದು ಎಲ್ಲಿ ಹೋಗಬೇಕು? ಅದು ಬೇಕೆಂದಲ್ಲಿ ಹರಿದುಹೋಗಿ ಸಮುದ್ರ ಸೇರುತ್ತದೆ. ಆಗ ಮಳೆಯ ನೀರು ಮನೆಗೆ ಬಂತು, ಊರಿಗೆ ಬಂತು ಎಂದು ಬೊಬ್ಬೆ ಹಾಕುತ್ತೇವೆ. ಹೀಗಾಗಬಾರದೆಂದು ಹಿಂದಿನ ಆಡಳಿತಗಾರರು ರಾಜ ಕಾಲುವೆಗಳನ್ನು ನಿರ್ಮಿಸಿದ್ದರು. ಕೆರೆ, ಕೊಳ್ಳಗಳನ್ನು ನಿರ್ಮಿಸಿದ್ದರು. ಮಳೆಗಾಲದಲ್ಲಿ ಇವು ತುಂಬಿ ಬೇಸಿಗೆಯಲ್ಲಿ ಮಾತ್ರವಲ್ಲ ಎಲ್ಲ ಕಾಲದಲ್ಲೂ ಕುಡಿಯುವ ನೀರು, ಬೇಸಾಯಕ್ಕೆ ನೀರು ಲಭ್ಯವಾಗುತ್ತಿತ್ತು. ಆದರೆ ಜಾಗತೀಕರಣದ ಶಕೆ ಆರಂಭವಾದ ನಂತರ ಆ ಕೆರೆಗಳನ್ನು ಮುಚ್ಚಿ ಅಲ್ಲೂ ಬಡಾವಣೆಗಳು, ಬಹು ಅಂತಸ್ತಿನ ಕಟ್ಟಡಗಳು ನಿರ್ಮಾಣವಾಗಿವೆ. ಇದರ ಪರಿಣಾಮವಾಗಿ ಅಂತರ್ಜಲವೂ ಪಾತಾಳಕ್ಕೆ ಹೋಗಿದೆ.

ಜನಸಂಖ್ಯೆ ಹೆಚ್ಚಾದಂತೆ ಮನುಷ್ಯ ಆಸರೆಗೆ ಇಳೆಯ ಪ್ರತಿಯೊಂದು ಜಾಗವನ್ನೂ, ಅವಕಾಶಗಳನ್ನೂ ಬಳಸಿಕೊಳ್ಳುವುದು ಅನಿವಾರ್ಯವಾಗುತ್ತದೆ ಎಂಬುದು ಎಷ್ಟು ನಿಜವೋ ಆತನ ದುರಾಸೆಯೂ ಇದಕ್ಕೆ ಅಷ್ಟೇ ಕಾರಣ. ಸಂಪತ್ತಿನ ಸಂಗ್ರಹದ ದುರಾಸೆ ಮುಂದಿನ ನೂರು ತಲೆಮಾರುಗಳಿಗೆ ತನ್ನ ಕುಟುಂಬವನ್ನು ಸುಖವಾಗಿ ಇಡಲು ಇಂಥ ಅನಾಹುತ ಮಾಡುತ್ತ ಬಂದ ಸಂಪತ್ತಿನ ಸಂಗ್ರಹವೇ ಬಂಡವಾಳವಾದ. ಅದೇ ಇಂದಿನ ಅನಾಹುತಕ್ಕೆ ಕಾರಣ. ಈಗಂತೂ ಎಲ್ಲರಿಗೂ ಆಸ್ತಿ ಮಾಡುವ ಹುಚ್ಚು. ಈ ಭೂಮಿ ಇಲ್ಲಿ ವಾಸಿಸುವ ಎಲ್ಲ ಮನುಷ್ಯರಿಗೆ ಮಾತ್ರವಲ್ಲ ಸಕಲ ಜೀವಿಗಳಿಗೂ ಸೇರಿದ್ದು ಎಂಬ ಅರಿವು ಮಾಯವಾಗಿದೆ. ಇಲ್ಲಿರುವುದೆಲ್ಲ ತನ್ನದೇ ಎಂಬ ದುರಾಸೆ ಇಂದು ಜಗತ್ತನ್ನು ಈ ಅವನತಿಗೆ ತಂದು ನಿಲ್ಲಿಸಿದೆ.

ಈಗ ಉಂಟಾಗಿರುವ ಜಲ ಪ್ರಳಯ ಅನಿರೀಕ್ಷಿತವಲ್ಲ. ಹಿಂದೆ ೨೦೦೫ರಲ್ಲಿ ಮತ್ತು ೨೦೦೯ರಲ್ಲಿ ಕೂಡ ಆಗಿತ್ತು, ಆದರೆ ಈಗ ಅದಕ್ಕಿಂತ ದೊಡ್ಡ ಪ್ರಮಾಣದಲ್ಲಿ ಅಪ್ಪಳಿಸಿದೆ. ಇದೇನೇ ಇದ್ದರೂ ಜಗತ್ತು ಇಷ್ಟೆಲ್ಲ ವೈಜ್ಞಾನಿಕವಾಗಿ ಮುಂದುವರಿದಿರುವಾಗ ಇದನ್ನು ಸಮರ್ಥವಾಗಿ ನಿಭಾಯಿಸಲು ನಮ್ಮ ಸರ್ಕಾರಗಳು ಯೋಜನೆ ರೂಪಿಸಬೇಕಾಗಿತ್ತು,




ಸುಸಂಬದ್ಧ ಜಲ ನಿರ್ವಹಣಾ ವ್ಯವಸ್ಥೆಯನ್ನು ರೂಪಿಸಬೇಕಾಗಿತ್ತು. ಆದರೆ ನಮ್ಮ ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ನಿರ್ದಿಷ್ಟವಾದ ಜಲ ನೀತಿ ಎಂಬುದೇ ಇಲ್ಲ. ಹೀಗೆ ಪ್ರವಾಹ ಉಂಟಾದಾಗ ಒಂದಿಷ್ಟು ಕೋಟಿ ಖರ್ಚು ಮಾಡಿ, ಸತ್ತವರಿಗೆ ಪರಿಹಾರ ನೀಡಿ ಕೈ ತೊಳೆದುಕೊಳ್ಳುತ್ತವೆ.

ಈಗಿನ ಪ್ರವಾಹಕ್ಕೂ ನಿಜವಾದ ಕಾರಣ ಕೃಷ್ಣಾ ತೀರದ ನೀರಾವರಿ ಯೋಜನೆಗಳ ಜಲಾಶಯಗಳ ಅಸಮರ್ಪಕ ಮತ್ತು ಅವೈಜ್ಞಾನಿಕ ನಿರ್ವಹಣೆ. ಇದಕ್ಕೆ ಕೇಂದ್ರ ಮತ್ತು ರಾಜ್ಯ ಸರಕಾರಗಳೆರಡೂ ಕಾರಣ. ನೀರು ಹಂಚಿಕೆಗೆ ಸಂಬಂಧಿಸಿದಂತೆ ಕರ್ನಾಟಕ ಮತ್ತು ಮಹಾರಾಷ್ಟ್ರ ನಡುವಿನ ವಿವಾದ ಮಾತ್ರವಲ್ಲ, ಕೇಂದ್ರದ ಹೊಣೆಗೇಡಿತನ ಸಹ ಇದಕ್ಕೆ ಕಾರಣ.

ಈಗ ಅದನ್ನೆಲ್ಲ ವಿಶ್ಲೇಷಣೆ ಮಾಡುವ ಸಂದರ್ಭವಲ್ಲ. ಸಾವಿರಾರು ಜನ ಮನೆ ಮಾರು ಕಳೆದುಕೊಂಡು ಬೀದಿ ಪಾಲಾಗಿದ್ದಾರೆ. ಅವರಿಗೆ ತಕ್ಷಣ ಪುನರ್ವಸತಿ ಕಲ್ಪಿಸಬೇಕು. ಆದರೆ ಇದನ್ನೆಲ್ಲ ಮಾಡಬೇಕಾದ ರಾಜ್ಯ ಸರ್ಕಾರ ಏಕೋಪಾಧ್ಯಾಯ ಶಾಲೆಯಂತಾಗಿದೆ. ಮುಖ್ಯಮಂತ್ರಿ ಯಡಿಯೂರಪ್ಪನವರೊಬ್ಬರೆ ಎಲ್ಲೆಡೆ ಓಡಾಡುತ್ತಿದ್ದಾರೆ. ರಾಜ್ಯದಲ್ಲಿ ಬಿಜೆಪಿ ಸರಕಾರ ಬಂದು ೧೬ ದಿನಗಳಾದರೂ ಮಂತ್ರಿ ಮಂಡಳ ರಚನೆಯಾಗಿಲ್ಲ. ಇದೇ ಸಂದರ್ಭದಲ್ಲಿ ಒಮ್ಮೆಲೆ ಪ್ರವಾಹ ಬಂದಿದೆ ಮತ್ತು ಅತಿವೃಷ್ಟಿಯಿಂದ ೧೫ ಜಿಲ್ಲೆಯಲ್ಲಿ ಸಾವಿರಾರು ಜನ ಬೀದಿಗೆ ಬಿದ್ದಿದ್ದಾರೆ. ರಾಜ್ಯದ ಮುಖ್ಯಮಂತ್ರಿಗೆ ತನ್ನ ಸಚಿವ ಸಂಪುಟ ರಚನೆ ಮಾಡುವ ಸ್ವಾತಂತ್ರ್ಯವಿಲ್ಲ. ದಿಲ್ಲಿಯ ದೊರೆಗಳು, ನಾಗಪುರದ ರಿಮೋಟ್ ರಾಜರು ಓಕೆ ಮಾಡಬೇಕು. ಈಗ ಅವರು ಅದಕ್ಕೆ ತಯಾರಿಲ್ಲ. ಹೀಗಾಗಿ ಯಡಿಯೂರಪ್ಪ ಅಡಕತ್ತರಿಯಲ್ಲಿ ಸಿಕ್ಕು ವಿಲಿ ವಿಲಿ ಒದ್ದಾಡುತ್ತಿದ್ದಾರೆ. ಅನ್ಯಮಾರ್ಗವಿಲ್ಲದೆ ೭೬ನೇ ವಯಸ್ಸಿನಲ್ಲಿ ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಸುತ್ತುತ್ತಿದ್ದಾರೆ. ದಣಿವಿಲ್ಲದೆ ಬೆಳಗಿನಿಂದ ರಾತ್ರಿವರೆಗೆ ಓಡಾಡುತ್ತಿದ್ದಾರೆ. ಆದರೆ ಜೊತೆಗೆ ಮಂತ್ರಿಗಳಿಲ್ಲದೆ ಒಬ್ಬ ಮನುಷ್ಯ ಏನು ಮಾಡಲು ಸಾಧ್ಯ? ಪ್ರವಾಹ ಪೀಡಿತ ಪ್ರದೇಶಗಳಲ್ಲಿ ದಿನದಿಂದ ದಿನಕ್ಕೆ ಪರಿಸ್ಥಿತಿ ಹದಗೆಡುತ್ತಿದೆ. ಜನಸಾಮಾನ್ಯರ ಬದುಕು ಮೂರಾಬಟ್ಟೆಯಾಗಿದೆ. ರಾಜ್ಯದಲ್ಲಿ ಸರಕಾರವೆ ಇಲ್ಲದಂತಾಗಿದೆ. ಮಂತ್ರಿಗಳಾಗಬೇಕೆಂಬ ಬಿಜೆಪಿ ಆಕಾಂಕ್ಷಿಗಳಲ್ಲಿ ಅಸಮಾಧಾನ ಉಂಟಾಗಿದೆ. ಪ್ರವಾಹ ಪರಿಸ್ಥಿತಿ ಇದೆ ಎಂದು ಅವರೆಲ್ಲರೂ ಸುಮ್ಮನಿದ್ದಾರೆ. ಇದೇ ಅಸಮಾಧಾನದ ಕಾರಣದಿಂದಲೇ ಬಿಜೆಪಿ ಶಾಸಕರು ಪ್ರವಾಹ ಪರಿಹಾರ ಕಾರ್ಯದಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಿಲ್ಲ, ಸಿ ಎಂ ಆದವರು ಒಬ್ಬರೆ ಓಡಾಡಲಿ ಎಂದು ಸೇಡು ತೀರಿಸಿಕೊಳ್ಳುತ್ತಿದ್ದಾರೆ.

ಯಡಿಯೂರಪ್ಪನವರು ಹಠ ಹಿಡಿದು ಮುಖ್ಯಮಂತ್ರಿಯಾಗಿರುವ ಬಗ್ಗೆ ಬಿಜೆಪಿ ಶಾಸಕರ ಒಂದು ಗುಂಪಿನಲ್ಲಿ ಅದರಲ್ಲೂ ಸಂಘ ಪರಿವಾರದಲ್ಲಿ ಅಸಮಾಧಾನವಿದೆ. ಇದೇ ಸಂದರ್ಭ ಬಳಸಿಕೊಂಡು 'ಯಡಿಯೂರಪ್ಪನವರಿಗೆ ವಯಸ್ಸಾಗಿದೆ. ಅವರು ಅಸಮರ್ಥ ಎಂದು ಬಿಂಬಿಸಿ ಅವರ ಕುರ್ಚಿಯನ್ನು ಎಳೆದು ಕೆಳಗೆ ಬೀಳಿಸಿ ಹರಿಯಾಣ, ಮಹಾರಾಷ್ಟ್ರದಂತೆ ಕಟ್ಟಾ ಆರ್‌ಎಸ್‌ಎಸ್ ಯುವ ಸ್ವಯಂ ಸೇವಕನನ್ನು ಸಿಎಂ ಗಾದಿಯ ಮೇಲೆ ಕೂರಿಸುವ ಮಸಲತ್ತು ನಡೆದಿದೆ' ಎಂದು ವದಂತಿ ಹರಡಿದೆ. ಯಡಿಯೂರಪ್ಪನವರೇನು ಸಂಪನ್ನರಲ್ಲ, ಅವರಿಗೆ ಹಿಂದೆ ಜನ ಅಧಿಕಾರ ಕೊಟ್ಟಾಗ ಗಣಿ ಲೂಟಿಗೆ, ರಿಯಲ್ ಎಸ್ಟೇಟ್ ಮಾಫಿಯಾಗಳನ್ನು ಸಾಕಿ ಆಡಳಿತ ವ್ಯವಸ್ಥೆಯನ್ನು ಅಧ್ವಾನಗೊಳಿಸಿದ್ದರು. ಈ ಬಾರಿಯೂ ತಮ್ಮ ಸುತ್ತ ತಮಗೆ ಸಂಬಂಧಿಸಿದವರನ್ನು ಕಡು ಭ್ರಷ್ಟರನ್ನು ಸೇರಿಸಿಕೊಂಡಿದ್ದಾರೆ. ಅಧಿಕಾರ ಸ್ವೀಕರಿಸಿದ ಕೆಲವೇ ತಾಸುಗಳಲ್ಲಿ ತರಾತುರಿಯಲ್ಲಿ ಮನಬಂದಂತೆ ಅಧಿಕಾರಿಗಳ ವರ್ಗಾವಣೆ ಮಾಡಿದ್ದಾರೆ. ಹೀಗಾಗಿ ಪ್ರವಾಹ ಪರಿಹಾರ ಕಾರ್ಯ ಅಸ್ತವ್ಯಸ್ತಗೊಂಡಿದೆ. ರಾಜಕಾರಣಿಗಳ ಅವಿವೇಕ, ದೂರದೃಷ್ಟಿಯ ಕೊರತೆಯಿಂದಾಗಿ ಪ್ರವಾಹ ಪರಿಸ್ಥಿತಿ ಉಲ್ಬಣಿಸಿದೆ. ಸೂಕ್ತ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಂಡಿದ್ದರೆ ಪರಿಸ್ಥಿತಿ ಇಷ್ಟು ಅಧ್ವಾನವಾಗುತ್ತಿರಲಿಲ್ಲ. ಮಳೆ, ಪ್ರವಾಹ ಬರುವುದು ಸಹಜ. ಸರಕಾರ ಈ ಬಗ್ಗೆ ಮೊದಲೇ ಎಚ್ಚೆತ್ತು ಮಹಾರಾಷ್ಟ್ರದ

ಮಾದರಿಯಂತೆ ಅಲ್ಲಲ್ಲಿ ಚೆಕ್ ಡ್ಯಾಮ್‌ಗಳನ್ನು ನಿರ್ಮಿಸಿದ್ದರೆ ಪ್ರವಾಹ ತಡೆಗೆ ಮಳೆ ನೀರು ಸಂಗ್ರಹಕ್ಕೆ ಅನುಕೂಲವಾಗುತ್ತಿತ್ತು. ಅಲ್ಲಲ್ಲಿ ಇಂಗು ಗುಂಡಿಗಳನ್ನು ನಿರ್ಮಿಸಿದ್ದರೆ ಹೀಗಾಗುತ್ತಿರಲಿಲ್ಲ.

ಇದರಿಂದ ಭಾರೀ ಪ್ರವಾಹ ತಡೆಯಲು ಸಾಧ್ಯವಾಗದಿದ್ದರೂ ಆರಂಭದ ಹಂತದಲ್ಲಿ ಅದರ ರಭಸವನ್ನು ತಡೆಯಬಹುದಾಗಿತ್ತು. ಇದರಿಂದ ಅಂತರ್ಜಲ ಪ್ರಮಾಣವೂ ಹೆಚ್ಚಾಗುತ್ತದೆ. ಹರಿಯುವ ನೀರಿನ ಪ್ರಮಾಣವೂ ಕಡಿಮೆಯಾಗುತ್ತದೆ. ಕನಿಷ್ಠ ಮಳೆ ನೀರು ಸಂಗ್ರಹದ ವ್ಯವಸ್ಥೆ ಮಾಡಬೇಕಾಗಿತ್ತು. ಸರಕಾರ ಅದಾವುದನ್ನೂ ಮಾಡಲಿಲ್ಲ. ಬೆಂಕಿ ಬಿದ್ದಾಗ ಬಾವಿ ತೋಡಿದಂತೆ ಕಾಟಾಚಾರದ ಪರಿಹಾರ ಕ್ರಮಗಳಿಂದ ಆಗಾಗ ಮರುಕಳಿಸುವ ಈ ಸಮಸ್ಯೆಗೆ ಪರಿಹಾರ ಸಿಗುವುದಿಲ್ಲ. ಆದರೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಇಂದಿನ ಆರ್ಥಿಕ ಹಾಗೂ ಅಭಿವೃದ್ಧಿ ನೀತಿ ಇದಕ್ಕೆ ಅವಕಾಶ ಕೊಡುವುದಿಲ್ಲ. ಅಪಾಯಕಾರಿ ಯೋಜನೆಗಳ ಬಗ್ಗೆ ಆಕ್ಷೇಪಿಸಿದರೆ ಅಭಿವೃದ್ಧಿ ವಿರೋಧಿಗಳೆಂದು ಹಣೆಪಟ್ಟಿ ಅಂಟಿಸಿಕೊಳ್ಳಬೇಕಾಗುತ್ತದೆ. ಮಲೆನಾಡಿನಂತೆ ಗುಡ್ಡಗಾಡು ಪ್ರದೇಶ ಉತ್ತರ ಕರ್ನಾಟಕದಲ್ಲಿ ಇರುವುದು ಕಡಿಮೆ. ಅಲ್ಲಿ ಸಮತಟ್ಟಾದ ನೆಲವಿದೆ. ರೈತರು ತಮ್ಮ ಹೊಲಗಳಲ್ಲಿ ಮಳೆ ನೀರು ಇಂಗು ಗುಂಡಿಗಳನ್ನು ನಿರ್ಮಿಸಿದರೆ, ಚೆಕ್ ಡ್ಯಾಮ್‌ಗಳನ್ನು ನಿರ್ಮಿಸಿದರೆ ಇಂಥ ಅನಾಹುತಗಳನ್ನು ತಡೆಯಬಹುದು. ಆದರೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಯೋಜನಾಬದ್ಧ ಆರ್ಥಿಕತೆ ಇರುವುದಿಲ್ಲ. ಹೀಗಾಗಿ ಈ ಬಗ್ಗೆ ಗಂಭೀರವಾಗಿ ಯೋಚಿಸುವುದಿಲ್ಲ. ಆದರೆ ಈ ಬಗ್ಗೆ ಸರ್ಕಾರಗಳು ಮಾತ್ರವಲ್ಲ ಜನರೂ ಪ್ರಾಮುಖ್ಯತೆ ಕೊಡುವುದಿಲ್ಲ. ಬೇಸಾಯಕ್ಕಾಗಲಿ, ಕುಡಿಯುವುದಕ್ಕಾಗಲಿ ನೀರು ಬೇಕೆಂದಾಗ ಕೊಳವೆ ಬಾವಿಗಳನ್ನು ಕೊರೆಸುವ ಸುಲಭ ಮಾರ್ಗಕ್ಕೆ ಜನ ಮೊರೆಹೋಗಿದ್ದಾರೆ. ಹೀಗಾಗಿ ಇಂಥ ಅನಾಹುತಗಳಾಗುತ್ತವೆ. ಇನ್ನಾದರೂ ನಮ್ಮ ಸರಕಾರಗಳು, ಜನರು ಎಚ್ಚೆತ್ತು, ಮಳೆ ನೀರು ಇಂಗಿಸುವ ಗುಂಡಿಗಳನ್ನು, ಅಲ್ಲಲ್ಲಿ ಚೆಕ್ ಡ್ಯಾಮ್‌ಗಳನ್ನು ನಿರ್ಮಿಸಬೇಕು. ಸರಕಾರ ಎಲ್ಲರ ಮನೆಗಳಲ್ಲಿ, ಹೊಲಗಳಲ್ಲಿ ಮಳೆ ನೀರು ಸಂಗ್ರಹದ ಇಂಗು ಗುಂಡಿಗಳನ್ನು ಕಡ್ಡಾಯ ಮಾಡಬೇಕು. ಆದರೆ ಆರ್ಥಿಕ ಸಾಮಾಜಿಕ ಅಸಮಾನತೆ ದಿನದಿನಕ್ಕೆ ಹೆಚ್ಚುತ್ತಿರುವ ಈ ವ್ಯವಸ್ಥೆಯಲ್ಲಿ ಇದೆಲ್ಲ ಸಾಧ್ಯವೆ? ಸಾಧ್ಯ ಮಾಡಿಸಲು ಜನರು ದನಿಯೆತ್ತಬೇಕು.

*ಬೆಂಗಳೂರು, ೧೫-೦೮-೨೦೧೮* ***ಸನತ್‌ಕುಮಾರ ಬೆಳಗಲಿ***






ನವಕರ್ನಾಟಕ ೬೦ರ ಸಂಭ್ರಮಾಚರಣೆಯ ಶುಭಾರಂಭ ಹಾಗೂ 'ಅಕ್ಷರ ಪಯಣ – ೬೦' ಮಾಲಿಕೆಯ ೧೨ ಅನುವಾದಿತ ಕೃತಿಗಳ ಲೋಕಾರ್ಪಣೆಯು ದಿನಾಂಕ ೨೭-೭-೨೦೧೮ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಶ್ರೀ ಕೃಷ್ಣರಾಜ ಪರಿಷನ್ಮಂದಿರ ಸಭಾಂಗಣದಲ್ಲಿ ನೆರವೇರಿತು. ಡಾ॥ ಜಿ. ರಾಮಕೃಷ್ಣ ಅವರು ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಡಾ॥ ಬರಗೂರು ರಾಮಚಂದ್ರಪ್ಪ ಅವರು ಕೃತಿಗಳನ್ನು ಬಿಡುಗಡೆ ಮಾಡಿದರು.
ಡಾ॥ ಎಚ್. ಎಸ್. ಗೋಪಾಲರಾವ್, ಶ್ರೀಮತಿ ನೇಮಿಚಂದ್ರ ಹಾಗೂ ಡಾ॥ ಎಚ್. ಜಿ. ಜಯಲಕ್ಷ್ಮಿ ಅವರು ಕೃತಿಗಳ ಪರಿಚಯ ಮಾಡಿದರು. ನವಕರ್ನಾಟಕದ ವ್ಯವಸ್ಥಾಪಕ ನಿರ್ದೇಶಕರಾದ ಡಾ॥ ಸಿದ್ದನಗೌಡ ಪಾಟೀಲ ಅವರು ಉಪಸ್ಥಿತರಿದ್ದರು.

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

# ಹತಾಶೆ ಮೂಡಿಸುವ ಹೊಸ ಶಿಕ್ಷಣ ನೀತಿ

ಡಾ॥ ಜಿ. ರಾಮಕೃಷ್ಣ

ಭಾರತೀಯ ಬಾಹ್ಯಾಕಾಶ ಸಂಸ್ಥೆಯ ಮಾಜಿ ಅಧ್ಯಕ್ಷ ಡಾ॥ ಕೆ. ಕಸ್ತೂರಿರಂಗನ್ ನೇತೃತ್ವದಲ್ಲಿ ರಚನೆಯಾಗಿದ್ದ ಸಮಿತಿಯು ತನ್ನ ಶಿಕ್ಷಣ ನೀತಿಯ ಕರಡನ್ನು ಸರ್ಕಾರಕ್ಕೆ ಸಲ್ಲಿಸಿ ಕೆಲವು ತಿಂಗಳುಗಳೇ ಕಳೆದುಹೋಗಿವೆ. ಅಧ್ಯಕ್ಷರು ಮತ್ತು ಕಾರ್ಯದರ್ಶಿಯಲ್ಲದೆ ಸಮಿತಿಯಲ್ಲಿ ಏಳು ಮಂದಿ ಪ್ರಾಜ್ಞರಿದ್ದರು. ಅಮೆರಿಕಾದ ಪ್ರಿನ್‌ಸ್ಟನ್ ವಿಶ್ವವಿದ್ಯಾನಿಲಯದ ಗಣಿತಶಾಸ್ತ್ರ ಪ್ರಾಧ್ಯಾಪಕ ಮಂಜುಳ್ ಭಾರ್ಗವ ಸಹ ಅವರಲೊಬ್ಬರು. ೪೫೦ಕ್ಕೂ ಹೆಚ್ಚು ಪುಟಗಳಿರುವ ವರದಿಯ ಸಾರಾಂಶರೂಪವಾದ ೫೦ ಪುಟಗಳ ಹೊತ್ತಿಗೆಯೂ ಹೊರಬಂದಿದೆ. ಅದರಲ್ಲಿದೆಯೆನ್ನಲಾದ ಭಾಷಾಸ್ಖಾಲಿತ್ಯದಿಂದ ಬೇಸರಗೊಂಡ ಒಬ್ಬ ಆಂಗ್ಲಭಾಷಾ ಪ್ರಾಧ್ಯಾಪಕರು ಕೇಂದ್ರಸಚಿವ ಶ್ರೀ. ಜಾವಡೇಕರ್ ಅವರಿಗೆ ಪತ್ರವೊಂದನ್ನು ಬರೆದು ಕರಡು ನೀತಿಯ ಸಾರಾಂಶದ ಹೊತ್ತಿಗೆಯನ್ನು ಆಮೂಲಾಗ್ರವಾಗಿ ತಿದ್ದಿಬರೆದು ಕಳಿಸಿದ್ದಾರೆ. ಅವರು ಹೈದರಾಬಾದ್‌ನಲ್ಲಿರುವ ಆಂಗ್ಲಭಾಷೆ ಮತ್ತು ವಿದೇಶಿ ಭಾಷೆಗಳ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕರು ಮತ್ತು ಉನ್ನತ ಅಧಿಕಾರಿಯಾಗಿದ್ದವರು. ಆದರೆ ಭಾಷಾಸ್ಖಾಲಿತ್ಯವಷ್ಟೇ ಈ ನೂತನ ಶಿಕ್ಷಣ ನೀತಿಯ ಕರಡಿನ ನ್ಯೂನತೆಯಲ್ಲ. ಬೆಂಗಳೂರು ಕೇಂದ್ರ ವಿಶ್ವವಿದ್ಯಾನಿಲಯವು ಇದೇ ಜುಲೈ ೨೬ರಂದು ರಾಷ್ಟ್ರೀಯ ವಿಚಾರಗೋಷ್ಠಿ ನಡೆಸಿ ಕರಡು ಪ್ರತಿಪಾದಿಸುವ ನೀತಿಯ ಪರಾಮರ್ಶೆ ನಡೆಸಿತು. ಖ್ಯಾತ ಶಿಕ್ಷಣತಜ್ಞರಾದ ಶ್ರೀ. ಹರಗೋಪಾಲ (ರಾಷ್ಟ್ರೀಯ ಕಾನೂನು ವಿಶ್ವವಿದ್ಯಾಲಯ, ಬೆಂಗಳೂರು), ಡಾ॥ ಎಚ್. ಎ. ರಂಗನಾಥ (ಮಾಜಿ ಉಪಕುಲಪತಿ, ಬೆಂಗಳೂರು ವಿಶ್ವವಿದ್ಯಾಲಯ), ಮುಂತಾದವರು ನೀತಿಯನ್ನು 'ಗುರಿ ತಪ್ಪಿಸುವ ಜನವಿರೋಧಿ' ನೀತಿಯೆಂದು ಟೀಕಿಸಿದರು. ಪ್ರಸ್ತುತ ಲೇಖಕನೂ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡಿದ್ದುದುಂಟು.

೪೮೦ ಪುಟಗಳ ಕರಡನ್ನು ಸಹನೆಯಿಂದ ಓದಿದರೆ ನಿರಾಶೆ ಮಾತ್ರವೇ ಅಲ್ಲ, ಆಗಾಗ್ಗೆ ರಕ್ತದೊತ್ತಡ ಹೆಚ್ಚುವ ಸಾಧ್ಯತೆಯೂ ಇದೆ. ಸದ್ಯದ ಶಿಕ್ಷಣ ಕ್ಷೇತ್ರದ ನ್ಯೂನತೆಗಳನ್ನು ಸರಿಪಡಿಸಲು ಸಕ್ರಿಯವಾಗಿ ಮಧ್ಯಪ್ರವೇಶ ಮಾಡಲಾಗದವರು ಅದನ್ನು ಓದದಿದ್ದರೂ ಆದೀತು. ಅಷ್ಟೊಂದು ಮಂದಿ ಧೀಮಂತರು ಒಟ್ಟಾಗಿ ಸೇರಿ ರಚಿಸಿರುವ ನೀತಿಯು ಲಕ್ಷಣವಾಗಿಯೇ ಇರುತ್ತದೆಂಬ ಧೋರಣೆ ಆರೋಗ್ಯಕರವಲ್ಲ. ಯಾವುದೇ ಹೊಸ ನೀತಿಯು ಅಸ್ತಿತ್ವದಲ್ಲಿರುವುದನ್ನು ಉತ್ತಮಗೊಳಿಸಬೇಕು, ಮೊದಲಿಗಿಂತಲೂ ಹೆಚ್ಚು ಜನಪರವಾಗಿಸಬೇಕು, ಒಳಗೊಳ್ಳುವಿಕೆಯನ್ನು ಗಮನಾರ್ಹವಾಗಿ ವಿಸ್ತರಿಸಬೇಕು ಮತ್ತು ಸಾಮಾನ್ಯವಾಗಿ ಕಂಡುಬರುವ ಮೌಢ್ಯಗಳನ್ನು ನಿವಾರಿಸಬೇಕು. ಈ ದೃಷ್ಟಿಯಿಂದ ನೀತಿಯನ್ನು ವಿಶ್ಲೇಷಿಸಿಕೊಳ್ಳುವುದು ಅಗತ್ಯ.

೧೯೭೦ರ ದಶಕದಲ್ಲಿ ನಮ್ಮ ರಾಜ್ಯದ ಕಾಲೇಜು ಅಧ್ಯಾಪಕರು ಸೆಪ್ಟೆಂಬರ್ ೫ರಂದು 'ಶಿಕ್ಷಕ ದಿನಾಚರಣೆ'ಯನ್ನು ಪ್ರತಿಭಟನಾ ದಿನವೆಂದು ಐದಾರು ವರ್ಷಗಳ ಕಾಲ ಆಚರಿಸುತ್ತಿದ್ದರು. ದೇಶದಲ್ಲಿ ಶಿಕ್ಷಣದ ಬಾಬ್ತು ವೆಚ್ಚವನ್ನು ರಾಷ್ಟ್ರೀಯ ಉತ್ಪನ್ನದ ಶೇ. ಆರರ ಮಟ್ಟಕ್ಕೆ ಏರಿಸಬೇಕೆಂದು ಆಗ್ರಹಿಸುವುದೂ ಒಂದು ಉದ್ದೇಶವಾಗಿರುತ್ತಿತ್ತು. ಈವರೆವಿಗೂ ಅದು ಅಂದಿನಂತೆಯೇ ಉಳಿದಿದೆ. ಐದು ವರ್ಷಗಳ ಹಿಂದೆ ಮೋದಿ ಸರ್ಕಾರವು ಅಧಿಕಾರ ವಹಿಸಿಕೊಂಡ ನಂತರ ಕನಿಷ್ಠ ಶೇ. ೪ ಸಹ ಆಗಿಲ್ಲ. ಆದರೆ ಈಗಿನ ನೀತಿಯು ಶೇ. ೬ರ ಮಾತನ್ನು ಯಥಾಪ್ರಕಾರ ಉಚ್ಚರಿಸಿದೆ. ಅದನ್ನು ಅನುಷ್ಠಾನಕ್ಕೆ ತರುವ ಯೋಜನೆಯೇನೂ ಇರುವುದಿಲ್ಲ. ಬದಲಾಗಿ, ಆಯವ್ಯಯ ಪಟ್ಟಿಯಲ್ಲಿ ನಮೂದಿಸಿದಷ್ಟನ್ನೂ ಬಿಡುಗಡೆ ಮಾಡದಿರುವ ಸಂಪ್ರದಾಯವಿದೆ. ಉದಾಹರಣೆಗೆ, ಕಳೆದ ವರ್ಷ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ಆಯವ್ಯಯ ಪಟ್ಟಿಯಲ್ಲಿ ಘೋಷಿಸಿದ್ದ ಮೊತ್ತದಲ್ಲಿ ಒಂದು ಸಾವಿರ ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡದೆ ತಡೆಹಿಡಿಯಲಾಗಿತ್ತು. ಕಡೆಗೆ ಅದು ಶೇ. ೩.೫ರ ಸನಿಹಕ್ಕೆ ಸಹ ಬರಲಿಲ್ಲ. ಆದರೂ ಶಿಕ್ಷಣ ಯೋಜನೆಗಳನ್ನು ಘೋಷಿಸಲು ಕರಡು ನೀತಿಯು ಹಿಂದೆ ಬೀಳುವುದಿಲ್ಲ.

ಕೆಲವು ಪುಡಿ ತೀರ್ಮಾನಗಳಿವೆ : ಅವನ್ನು ಅನುಷ್ಠಾನಕ್ಕೆ ತರಲು ಯಾವ ಕಷ್ಟವೂ ಇಲ್ಲ. ಉದಾಹರಣೆಗೆ, ಕೇಂದ್ರ ಶಿಕ್ಷಣ ಸಚಿವಾಲಯಕ್ಕೆ ಕೆಲವು ವರ್ಷಗಳ ಹಿಂದೆ 'ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ' ಎಂಬ ಹೆಸರನ್ನು ನೀಡಲಾಗಿತ್ತು; ಈಗಿನ ನೀತಿಯು ಅದನ್ನು 'ಶಿಕ್ಷಣ ಸಚಿವಾಲಯ'ವೆಂದು ಕರೆಯುವ ತೀರ್ಮಾನ ಪ್ರಕಟಿಸಿದೆ. 'ಸಂಪನ್ಮೂಲ ಅಭಿವೃದ್ಧಿ' ಎಂದರೆ ಶಿಕ್ಷಣವನ್ನು ಉತ್ಪಾದನಾ ತಂತ್ರದ ಒಂದು ಅಂಗವಷ್ಟೇ ಎಂದು ವ್ಯಾಖ್ಯಾನಿಸಿದಂತಾಗುತ್ತಿತ್ತು. ವಿದ್ಯಾರ್ಥಿಗಳ ವ್ಯಕ್ತಿತ್ವ ಬೆಳೆಸುವ ಬದಲು ವ್ಯಕ್ತಿಯನ್ನು 'ಸರಕು ಉತ್ಪಾದಕ'ನನ್ನಾಗಿ ರೂಪಿಸುವುದು ಶಿಕ್ಷಣದ ಉದ್ದೇಶ ಎನಿಸುತ್ತಿತ್ತು. ತೋರಿಕೆಗಾದರೂ ಇನ್ನು ಮುಂದೆ 'ಶಿಕ್ಷಣ ನೀಡುವುದು' ಎಂಬರ್ಥ ತೋರಿಬಂದೀತು.

ಈಗಿನ ಕರಡು ನೀತಿಯಲ್ಲಿನ ಕೆಲವು ಅಂಶಗಳನ್ನು ಮೊದಲಿಗೆ ತಿಳಿಯಬಹುದು : (ಅ) ಪ್ರಸ್ತುತ, ಮಕ್ಕಳು ೧೫ ವರ್ಷಗಳ ಆರಂಭಿಕ ಶಿಕ್ಷಣ ಪಡೆಯುತ್ತಿದ್ದಾರೆ. ಅದನ್ನು ೫+೩+೩+೪ ಎಂದು ವಿಭಜಿಸಲಾಗಿದೆ; ಅಂದರೆ ೧೫ ವರ್ಷದ ಶಿಕ್ಷಣದಿಂದ ಪದವಿ ಪಡೆಯುತ್ತಾರೆ. ಇದನ್ನು ೭+೩+೨+೩ ಎಂದು ವಿಭಜಿಸಲಾಗುತ್ತದಂತೆ. ಅದರಿಂದ ಗುಣಾತ್ಮಕ ಬದಲಾವಣೆಯನ್ನೇನೂ ನಿರೀಕ್ಷಿಸುವಂತಿಲ್ಲ. ಕೇವಲ ಕಿರೀಟಕ್ಕೆ ಗರಿ ಸಿಗಿಸುವ ವಿಚಾರ ಇದು. (ಆ) ಶಿಕ್ಷಣದಲ್ಲಿ ತ್ರಿಭಾಷಾ ಸೂತ್ರವನ್ನು ಯಥಾಪ್ರಕಾರ ಉಚ್ಚರಿಸಲಾಗಿದೆ. ಇದು ಕರ್ನಾಟಕದಂತಹ ರಾಜ್ಯಗಳಿಗೆ ಹೊಸತೇನನ್ನೂ ಸೇರಿಸಿದಂತಾಗುವುದಿಲ್ಲ. ಆರಂಭದಲ್ಲಿ ಶಿಕ್ಷಣ



ಸಚಿವರು ದೇಶದಲ್ಲೆಲ್ಲಾ ಮೊದಲ ಎಂಟು ವರ್ಷಗಳ ಕಾಲ ಎಲ್ಲರಿಗೂ ಕಡ್ಡಾಯವಾಗಿ ಹಿಂದಿ ಕಲಿಸುವುದಾಗಿ ಘೋಷಿಸಿದ್ದರು. ಪ್ರತಿಭಟನೆಯ ಬಿಸಿ ಮುಟ್ಟಿಸಿದಾಗ ಆ ಹೇಳಿಕೆಯನ್ನು ಹಿಂತೆಗೆದುಕೊಂಡರು. ಅವರ ನಿಜವಾದ ನೀತಿಯೆಂದರೆ ಹಿಂದಿಯ ಕಡ್ಡಾಯ ಹೇರಿಕೆಯೇ; ದೇಶಕ್ಕೆಲ್ಲಾ ಒಬ್ಬ ನಾಯಕ, ಒಂದು ಭಾಷೆ, ಒಬ್ಬ ದೇವತೆ, ಇತ್ಯಾದಿ ಇರಬೇಕೆಂಬುದು ಇಂದಿನ ನಾಯಕರ ಅಭಿಲಾಷೆ. ಬಹುತ್ವವೆಂದರೆ ಅವರಿಗೆ ವಿಪರೀತ ಅಸಹನೆ ಇದೆ. 'ತ್ರಿಭಾಷಾ ಸೂತ್ರ' ಎಂದು ಹೇಳಿದರೂ ಉತ್ತರದ ರಾಜ್ಯಗಳಲ್ಲಿ ಅದು ಯಾವಾಗಲೂ ಎರಡು ಭಾಷೆಗಳೇ ಎಂದರ್ಥ : ಹಿಂದಿ ಮತ್ತು ಇಂಗ್ಲಿಷ್. ೧೯೬೪ರ ಕೊಠಾರಿ ಆಯೋಗವು ಉತ್ತರದಲ್ಲೂ ಮೂರು ಭಾಷೆಗಳನ್ನು ಕಲಿಸಬೇಕೆಂದು ನೀತಿ ನಿರೂಪಿಸಿತ್ತು. ದಕ್ಷಿಣದ ಯಾವುದಾದರೊಂದು ಭಾಷೆಯು ಮೂರನೆಯ ಭಾಷೆಯಾಗುತ್ತದೆಂಬ ನಿರೀಕ್ಷೆ ಎಂದೂ ಉತ್ತರದಲ್ಲಿ ಫಲಿಸಲಿಲ್ಲ, ಫಲಿಸುವುದಿಲ್ಲ. ನಮ್ಮ ರಾಜ್ಯದಲ್ಲೂ ಎರಡು ಭಾಷೆಗಳನ್ನು ಕಲಿಸುವಂತಿದ್ದರೆ ಸಾಕು. ಉತ್ತರ ರಾಜ್ಯಗಳಿಗೆ ಹೋಗಿ ಹಿಂದಿಯಲ್ಲಿ ವ್ಯವಹಾರ ಮಾಡುವವರು ಶಾಲೆಯಲ್ಲಿ ಕಲಿತ ಹಿಂದಿಯಿಂದ ಸಾಮರ್ಥ್ಯ ಗಳಿಸಿಲ್ಲ; ಹಿಂದಿ ಸಿನಿಮಾದಿಂದ ಹಿಂದಿ ಕಲಿತವರೇ ಹೆಚ್ಚು. ಜೊತೆಗೆ ಉತ್ತರದಿಂದ ಬಂದವರು ತಮ್ಮ ಅಹಂಕಾರ ಮೆರೆದು ನಮ್ಮ ರಾಜ್ಯದವರ ಮೇಲೆ ತಮ್ಮ ಭಾಷೆ ಹೇರುತ್ತಾರೆಯೇ ವಿನಾ ನಮ್ಮ ಭಾಷೆಯನ್ನು ಸುತರಾಂ ಕಲಿಯುವುದಿಲ್ಲ. ನಮ್ಮ ರಾಜ್ಯದಲ್ಲಿ ಎಂಟನೆಯ ತರಗತಿಯಿಂದ ಹತ್ತನೆಯ ತರಗತಿಯವರೆಗೆ ಮೂರು ವರ್ಷ ವಾರಕ್ಕೆ ಎರಡು ಗಂಟೆಗಳಂತೆ ಶಾಲೆಗಳಲ್ಲಿ ಹಿಂದಿ ಕಲಿಸಿದರೆ ಸಾಕು. ಅನಗತ್ಯವಾಗಿ ಮಕ್ಕಳ ಮೇಲೆ ಹಿಂದಿ ಹೇರುವುದು ಸಾಂಸ್ಕೃತಿಕ ಅಪರಾಧವಾಗುತ್ತದೆ. ಕರಡು ನೀತಿಯು ಈ ಅಪರಾಧಕ್ಕೆ ಒತ್ತುಕೊಟ್ಟಿದೆ. ಪ್ರಜಾಪ್ರಭುತ್ವದ ಒಕ್ಕೂಟದಲ್ಲಿ ರಾಜ್ಯಗಳ ಸ್ವಾಯತ್ತತೆಯನ್ನು ಕಡೆಗಣಿಸುವ ಶಿಕ್ಷಣನೀತಿಯು ಸರ್ವಥಾ ಅಮಾನ್ಯವಾಗಬೇಕು. (ಇ) ನೀತಿಯು ಸಹಜವಾಗಿಯೇ ಮುಂದಿನ ದಿನಗಳಲ್ಲಿ ಬರಲಿರುವ ಪಠ್ಯಪುಸ್ತಕಗಳ ಬಗ್ಗೆ ಪ್ರಸ್ತಾಪ ಮಾಡಿದೆ. ಭಾರತೀಯ ಜನತಾ ಪಕ್ಷವು ನವ ಪೀಳಿಗೆಗಳ ಮನಸ್ಸುಗಳಲ್ಲಿ ಅವೈಚಾರಿಕತೆಯನ್ನು ಸಾಂದ್ರವಾಗಿ ತುಂಬಲು ಹಾತೊರೆಯುತ್ತದೆ ಮತ್ತು ಅದಕ್ಕಾಗಿ ಶಾಲಾಕಾಲೇಜುಗಳ ಪಠ್ಯ ವಿಷಯಗಳನ್ನು ಹಾಗೂ ಪಠ್ಯ ಗ್ರಂಥಗಳನ್ನು ಬಳಸಿಕೊಳ್ಳಲು ತುದಿಗಾಲ ಮೇಲೆ ನಿಂತಿದೆ. ನಮ್ಮ ದೇಶದ ಚರಿತ್ರೆಯನ್ನು ತನ್ನ ಮನಬಂದಂತೆ ಬರೆದುಬಿಟ್ಟರೆ ದೇಶವು ಸುಭದ್ರವಾಗಿ ನೆಲೆಗೊಂಡು ಸಂಪದ್ಭರಿತ ವಾಗಿರುತ್ತದೆಂಬುದು ಆ ಪಕ್ಷದ ಮಹಾನ್ ಭ್ರಮೆ. ವರ್ತಮಾನದಲ್ಲಿ ಇತಿಹಾಸವನ್ನು ರಚಿಸಲಾಗದವರಿಗೆ ದೇಶದ ಪೂರ್ವೇತಿಹಾಸವನ್ನು ರಂಜನೀಯವಾಗಿ ಬರೆಯುವ ಲಾಲಸೆ ಇರುತ್ತದೆ. ವೇದದ ಕಾಲದಲ್ಲಿ ಅಂತರಗ್ರಹ ಸಂಚಾರಕ್ಕೆ ದಿವ್ಯರಥಗಳಿದ್ದವು, ಗಣೇಶನ ತಲೆಯನ್ನು ಕಡಿದಾಗ ಆನೆಯ ತಲೆಯನ್ನು ಜೋಡಿಸುವ ಶಸ್ತ್ರಚಿಕಿತ್ಸೆ ನೀಡಲಾಯಿತು (ಅಲ್ಲೇ ಬಿದ್ದಿದ್ದ ಅವನ ತಲೆಯನ್ನೇ ಏಕೆ ಜೋಡಿಸಲಿಲ್ಲವೋ ತಿಳಿಯದು), ಹಸುವಿನ ಗಂಜಳದಿಂದ ಅರ್ಬುದ ರೋಗದ ನಿವಾರಣೆ ಸಾಧ್ಯ, ಇತ್ಯಾದಿ ಅಪ್ರಗಲ್ಭ ಮಾಹಿತಿಯನ್ನು ಮಕ್ಕಳ ತಲೆಗೆ ತುಂಬುವು ದರಿಂದ ಏನನ್ನು ಸಾಧಿಸುತ್ತಾರೋ ಕಾಣೆವು! ಬರಲಿರುವ ಶಿಕ್ಷಣ ನೀತಿಯು ಇಡೀ ಶಿಕ್ಷಣ ಕ್ರಮವನ್ನು ನೀರಸಗೊಳಿಸಲಿದೆ, ಅವೈಜ್ಞಾನಿಕವಾಗಿಸಲಿದೆ : ಅದಕ್ಕೆ ಪಠ್ಯಪುಸ್ತಕಗಳನ್ನು ಸಾಧನ ಮಾಡಿಕೊಳ್ಳುವ ಹುನ್ನಾರವಿದೆ. ಕರಡು ನೀತಿಯ "ತಾತ್ಪರ್ಯ" ಎಂಬ ದಸ್ತಾವೇಜಿನಲ್ಲಿ (೪.ಜೆ) ಹೇಳಲಾಗಿರುವುದಿದು : "ರಾಷ್ಟ್ರೀಯ ಪಠ್ಯ ರಚನೆಯ ಪ್ರಕ್ರಿಯೆಯನ್ನು ೨೦೨೦ರ ಅಂತ್ಯದೊಳಗೆ ಮರುಪರಿಶೀಲಿಸಿ ಪರಿಷ್ಕರಿಸಲಾಗುತ್ತದೆ ಮತ್ತು ಪಠ್ಯಗಳನ್ನು ಎಲ್ಲ ಪ್ರಾದೇಶಿಕ ಭಾಷೆಗಳಲ್ಲೂ ಹೊರತರಲಾಗುತ್ತದೆ. ಹೊಸ ಪಠ್ಯಪುಸ್ತಕಗಳನ್ನು ಸಂರಚಿಸಿ ಅತ್ಯುತ್ತಮ ಭಾಷಾಂತರಗಳನ್ನು ಸಿದ್ಧಗೊಳಿಸಲಾಗುತ್ತದೆ."

ಇಡೀ ದೇಶಕ್ಕೆ ಒಂದು ಪಠ್ಯಪುಸ್ತಕ ಎಂದಾಗ ಪ್ರಾದೇಶಿಕ ಸಂಗತಿಗಳು ಮಣ್ಣು ಪಾಲಾಗುತ್ತವೆ. ಉದಾಹರಣೆಗೆ, ಇತಿಹಾಸದ ಪಠ್ಯಪುಸ್ತಕದಲ್ಲಿ ಹೊಯ್ಸಳರು, ನೊಳಂಬರು, ಕದಂಬರು, ಇತ್ಯಾದಿ ಏನೂ ಇರುವುದಿಲ್ಲ; ಕೇವಲ ಉತ್ತರ ಭಾರತದ ತಿರುಚಿದ ಚರಿತ್ರೆಯನ್ನು ಅಳವಡಿಸಲಾಗುತ್ತದೆ. ಬೇರೆ ಪಠ್ಯಗಳಲ್ಲೂ ಇದೇ ಸ್ವರೂಪವಿರುತ್ತದೆ. ನಮ್ಮ ಸಾಹಿತ್ಯ, ಇತಿಹಾಸ, ಸಂಸ್ಕೃತಿ, ಮುಂತಾದುವನ್ನು ಪಠ್ಯಪುಸ್ತಕಗಳಿಂದ ತೆಗೆದುಹಾಕಿ ಅಸಹ್ಯವೆನಿಸುವಂತಹ ಪಠ್ಯಪುಸ್ತಕಗಳನ್ನು ನಮ್ಮ ಮಕ್ಕಳ ಕೈಯ್ಯಲ್ಲಿ ಇರಿಸಲಾಗುತ್ತದೆ. "ಅತ್ಯುತ್ತಮ ಭಾಷಾಂತರಗಳನ್ನು" ಸಿದ್ಧಗೊಳಿಸಿಕೊಡುತ್ತಾರಂತೆ! ಅಂದರೆ ನಮ್ಮ ಅಧ್ಯಾಪಕರು ಮತ್ತು ಶಿಕ್ಷಣತಜ್ಞರು ಭಾಷಾಂತರ ಪಟುಗಳಾಗುತ್ತಾರೆ, ಸ್ವತಃ ಪಠ್ಯಪುಸ್ತಕಗಳ ರಚನೆ ಮಾಡುವುದಿಲ್ಲ. ಎನ್‌ಸಿಇಆರ್‌ಟಿ ಎಂಬ ಸರ್ವಜ್ಞ ಸಂಸ್ಥೆಯ ಅಡಿಯಾಳುಗಳಾಗಿ ಪ್ರಾದೇಶಿಕ ತಜ್ಞರು ಕೆಲಸ ಮಾಡುತ್ತಾರೆ, ತಮ್ಮ ಸ್ವಂತದ ಸೃಷ್ಟ್ಯಾತ್ಮಕ ಶಕ್ತಿಯನ್ನು ಹೂತು ಹಾಕುತ್ತಾರೆ, ಎಂದರ್ಥ. ಇದಕ್ಕಿಂತಲೂ ಕೀಳುನೀತಿಯನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ನಮ್ಮ ದೇಶದ ಪ್ರಭುಗಳು ನಮ್ಮ ದೇಶದ ಕೆಲವು ಭಾಗಗಳನ್ನು ವಸಾಹತುಗಳನ್ನಾಗಿ ಮಾರ್ಪಡಿಸುತ್ತಾರೆ, ಅಲ್ಲಿಯ ಧೀಶಕ್ತಿ ಮತ್ತು ಸ್ವಂತಿಕೆಯನ್ನು ಹಾಳುಗೆಡಹಲಾಗುತ್ತದೆ. ಇಡೀ ದೇಶಕ್ಕೆ ಒಂದು ಪಠ್ಯವೆಂದಾಗ ನಮ್ಮ ಪ್ರಾದೇಶಿಕತೆಯು ಸ್ವಾಯತ್ತತೆಯನ್ನು ಕಳೆದುಕೊಳ್ಳುತ್ತದೆ, ಭಾರತದ ಸಂವಿಧಾನದತ್ತವಾದ ಅನೇಕ ಸವಲತ್ತುಗಳನ್ನು ಇಲ್ಲವಾಗಿಸಿಕೊಳ್ಳುತ್ತದೆ. ಏಕಶಿಲಾ ಪ್ರಕಾರವಾದ ಶಿಕ್ಷಣ ಮತ್ತು ವ್ಯಕ್ತಿತ್ವ ರೂಪಿಸುವುದು ನಾಗರಿಕತೆ ಮತ್ತು ಸಂಸ್ಕೃತಿಯ ವಿನಾಶದ ಹಾದಿಯಾಗಿಬಿಡುತ್ತದೆ. ಇದು ಸರ್ವಥಾ ಯೋಗ್ಯವಲ್ಲ. ನೂತನ ಶಿಕ್ಷಣ ನೀತಿಯು ದೇಶದ ಬಹುತ್ವಕ್ಕೆ ಕೊಡಲಿಪೆಟ್ಟು ನೀಡಹೊರಟಿದೆ. ಅದನ್ನು ಸಾರಾಸಗಟಾಗಿ ನಿರಾಕರಿಸುವುದು ಅನಿವಾರ್ಯ. ಪ್ರತಿಯೊಂದು ರಾಜ್ಯವೂ ತನ್ನದೇ ಪಠ್ಯಪುಸ್ತಕಗಳನ್ನು ರಚಿಸಿಕೊಳ್ಳುವುದು ಪರಂಪರಾಗತವಾಗಿ ನಡೆದು ಬಂದಿದೆ, ಅದರಿಂದ ಶಿಕ್ಷಣಕ್ಕೆ ಧಕ್ಕೆಯುಂಟಾಗಿಲ್ಲ. ಪ್ರಾದೇಶಿಕವಾಗಿ ಅಧ್ಯಾಪಕರು ಮತ್ತು ಶಿಕ್ಷಣತಜ್ಞರು ಸ್ವತಂತ್ರವಾಗಿ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಿಕೊಳ್ಳಲೆಂದೇ ಸಂವಿಧಾನವು ಶಿಕ್ಷಣವನ್ನು ಸಹಗಾಮಿ (ಅಥವಾ 'ಕನ್‌ಕರೆಂಟ್') ಪಟ್ಟಿಯಲ್ಲಿ ಇರಿಸಿದೆ; ಅದನ್ನು ಬುಡಮೇಲು ಮಾಡುವುದು ಸಂವಿಧಾನ ವಿರೋಧಿಯಾದ್ದು, ಪ್ರಾದೇಶಿಕ ಅನನ್ಯತೆಯ ವಿರೋಧಿಯಾದ್ದು, ಜನವಿರೋಧಿಯಾದ್ದು; ಒಂದು ದೇಶ, ಒಂದೇ ಭಾಷೆ, ಒಂದೇ ಪಠ್ಯ, ಒಬ್ಬನೇ ನಾಯಕ, ಎಂಬ ಕಲ್ಪನೆಯೇ ಅಸಹ್ಯವಾದ್ದು. ಇದನ್ನು ವಿಸ್ತರಿಸಿ ನೀತಿಯು ಉನ್ನತ ಶಿಕ್ಷಣ ವ್ಯವಸ್ಥೆಯನ್ನು ಸಹ ಕೇಂದ್ರೀಕರಿಸುವ ಹುನ್ನಾರವನ್ನು ಹೊಂದಿದೆ, ಅದು ಖಂಡನೀಯ.

ಇತ್ತೀಚೆಗೆ ಕೇಂದ್ರ ಸರ್ಕಾರವು "ಐಸಿಎಸ್‌ಇ" ಶಾಲೆಗಳಲ್ಲಿ ಎನ್‌ಸಿಇಆರ್‌ಟಿ ಪಠ್ಯಪುಸ್ತಕಗಳನ್ನಷ್ಟೇ ಏಕೆ ಬಳಸಬಾರದೆಂಬ ಪ್ರಶ್ನೆಯನ್ನೆತ್ತಿದೆಯೆಂದು ವರದಿಯಾಗಿದೆ. ನಮ್ಮ ದೇಶದಲ್ಲಿ ಸಮಾನ ಏಕಶಿಕ್ಷಣ ವ್ಯವಸ್ಥೆ ಅಗತ್ಯವೆಂಬುದು ನಿಜ, ಆದರೆ ಅದು ಸಾಮಾಜಿಕ ಏಕತೆಯೇ ವಿನಾ ಸಂಸ್ಕೃತಿಯ ಏಕತೆಯಲ್ಲ. ಸಮಾನ ಸೌಲಭ್ಯ ಮತ್ತು ಸಮಾನ ಅವಕಾಶ ಕಲ್ಪಿಸುವುದು ಜನಪರ ಶಿಕ್ಷಣ ನೀತಿಯೇ ವಿನಾ ೨೦೧೯ರ ಕರಡು ಶಿಕ್ಷಣ ನೀತಿಯು ನೀಡಲು ಮುಂದಾಗಿರುವ ಏಕಕೇಂದ್ರಿತ ಶಿಕ್ಷಣ ನೀತಿಯು ಜನಪರವಲ್ಲ. ಪ್ರತಿಯೊಂದು ರಾಜ್ಯವೂ ಸೃಷ್ಟಿಶೀಲವಾಗಿರಬೇಕೇ ವಿನಾ ಭಾಷಾಂತರ ನೈಪುಣ್ಯದಲ್ಲಿ ಮುಳುಗಿಹೋಗುವುದಲ್ಲ; ಹಾಗೆ ಉಳಿಯಬೇಕಾದರೆ ಪ್ರಸ್ತುತ ಘೋಷಿತ ಕರಡು ಶಿಕ್ಷಣ ನೀತಿಯು ಹೇಳುವ ಕರಾಳ ಭಾಗಗಳನ್ನು ಕಿತ್ತೊಗೆಯಬೇಕು.

(ಈ) ನಮ್ಮ ಶಾಲಾ–ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಪೂರ್ಣಾವಧಿ ಅಧ್ಯಾಪಕರ ಕೊರತೆ ಹಲವು ವರ್ಷಗಳಿಂದಲೂ ಇದೆ. ಅದೇ ಪರಿಸ್ಥಿತಿ ಬೇರೆ ರಾಜ್ಯಗಳಲ್ಲೂ ಇದೆ. ಕಾಲೇಜುಗಳು ಬಹುಮಟ್ಟಿಗೆ ಈಗ ಪೂರ್ತಿ ಖಾಸಗಿಯಾಗಿವೆ. ವಿಶ್ವವಿದ್ಯಾಲಯ ಧನಸಹಾಯ ಆಯೋಗವು ಘೋಷಿಸಿರುವ ವೇತನ ಹಾಗೂ ಶ್ರೇಣಿ ಎಲ್ಲ ಅಧ್ಯಾಪಕರಿಗೂ ಇದೆಯೆಂಬ ಭಾವನೆ ಜನಮನ ದಲ್ಲಿದೆ. ಆದರೆ ಖಾಸಗಿ ಕಾಲೇಜುಗಳಲ್ಲಿ ಅದಕ್ಕೆ ಭಾಜನರಾಗಿರುವವರು ಬೆರಳೆಣಿಕೆಯಷ್ಟು. ಅವರು ನಿವೃತ್ತರಾದರೆ ಯುಜಿಸಿ ವೇತನವು ಕಾಲೇಜುಗಳಲ್ಲಿ ಸುತರಾಂ ಇರುವುದಿಲ್ಲ. ಅಂತೆಯೇ ವಿಶ್ವವಿದ್ಯಾಲಯಗಳಲ್ಲಿ ನೇಮಕಾತಿ ನಡೆಯ ದಿರುವುದರಿಂದ ಶೇ. ೫೦ರಷ್ಟು ಅಧ್ಯಾಪಕರು ಹಂಗಾಮಿಯಾಗಿ ನೇಮಕ ಗೊಂಡವರು. ಅವರಿಗೆಲ್ಲಾ ಗಂಟೆಗೆ ಇಂತಿಷ್ಟು ಎಂಬ ಕೂಲಿ ನೀಡಲಾಗುತ್ತದೆ. ಅಂತರರಾಷ್ಟ್ರೀಯ ಮಟ್ಟಕ್ಕೆ ನಮ್ಮ ವಿದ್ಯಾಸಂಸ್ಥೆಗಳನ್ನು ಏರಿಸುವುದಾಗಿ ಒಂದು ಕಡೆ ಘೋಷಣೆ, ಅಧ್ಯಾಪಕರನ್ನು ನೇಮಿಸದ ಸನ್ನಿವೇಶ ಮತ್ತೊಂದೆಡೆ. ಈಗಿನ ಕರಡು ನೀತಿ ಹೇಳುತ್ತದೆ, ೨೦೨೨ರ ವೇಳೆಗೆ, ಅಂದರೆ ಮೂರು ವರ್ಷಗಳಲ್ಲಿ, ಎಲ್ಲೆಡೆ ಪೂರ್ಣಾವಧಿ ಅಧ್ಯಾಪಕರನ್ನು ನೇಮಿಸಲಾಗುತ್ತದೆ, ಎಂದು. ಬಾಜಿ ಕಟ್ಟುವ ಅಭ್ಯಾಸವಿರುವವರು ಯತ್ನಿಸಿ ನೋಡಬಹುದು : ೨೦೨೨ರ ವೇಳೆಗೆ ಇದನ್ನು ಕಾರ್ಯಗತಗೊಳಿಸಿರುವುದಿಲ್ಲ, ಎಂದು. ಬೆಂಗಳೂರು ಕೇಂದ್ರ ವಿಶ್ವವಿದ್ಯಾಲಯ ಸ್ಥಾಪಿತವಾಗಿ ಎರಡು ವರ್ಷ ಕಳೆದಿದೆ, ಆದರೆ ಪೂರ್ಣಾವಧಿ

ಅಧ್ಯಾಪಕರಿಲ್ಲ. ಸರ್ಕಾರವು ಆ ರೀತಿ ನೇಮಕಾತಿಗೆ ಈವರೆಗೆ ಅನುಮತಿ ನೀಡಿಲ್ಲ. ಹಾಗೆ ನೇಮಕ ನೀಡಿದರೆ ವೇತನ ನೀಡಬೇಕಾಗುತ್ತದೆ; ನಿವೃತ್ತ ಅಧ್ಯಾಪಕರು ಮತ್ತು ಯುವ ಅಧ್ಯಾಪಕರನ್ನು ನಿರ್ದಿಷ್ಟ ಅವಧಿಗೆ ಗೊತ್ತುಪಡಿಸಿಕೊಂಡರೆ ಸಂಬಳ ಕೊಡುವ ನಿರ್ಬಂಧವಿಲ್ಲ! ಗುತ್ತಿಗೆ ಮೇಲೆ ನೇಮಕಗೊಂಡ ಅಧ್ಯಾಪಕರು ಎರಡು–ಮೂರು ಕಡೆ ಪಾಠ ಹೇಳಿ ಜೀವನ ಹೊರೆಯುತ್ತಾರೆ, ಆದ್ದರಿಂದ ಅವರು ಹೊರೆಯಲ್ಲ! ಎಷ್ಟೋ ಆಶ್ವಾಸನೆಗಳ ನಡುವೆ ಇದೂ ಒಂದು: ಪೂರ್ಣಾವಧಿ ಅಧ್ಯಾಪಕರ ಔಪಚಾರಿಕ ನೇಮಕಾತಿ ನಡೆಸಲಾಗುತ್ತದೆ, ಎಂಬುದು. ಕಾದು ನೋಡೋಣ!

೨೦೨೨ರ ವೇಳೆಗೆ ಇಂತಹ ಬದಲಾವಣೆಯ ರಂಗಿನ ನಿರೀಕ್ಷೆಯಾದರೆ ಕರಡು ನೀತಿಯ ಪ್ರಕಾರ ೨೦೩೨ರ ವೇಳೆಗೆ ನಮ್ಮ ದೇಶದ ಕಾಲೇಜುಗಳು ಮತ್ತು ವಿಶ್ವವಿದ್ಯಾನಿಲಯಗಳು ವೈಭವದ ಗೂಡುಗಳಾಗಿರುತ್ತವೆ, ಅತಿರಮ್ಯ ವಿದ್ಯಾಕೇಂದ್ರಗಳಾಗಿರುತ್ತವೆ. ಆ ಭರವಸೆಯನ್ನು ಕರಡು ನೀತಿಯು ನೀಡುತ್ತಿದೆ: ಹಣದ ಕೊರತೆ ಇರುವುದಿಲ್ಲ, ಉನ್ನತ ಮಟ್ಟದ ವ್ಯಾಸಂಗ ಮತ್ತು ಸಂಶೋಧನೆಗಳು ನಡೆಯುತ್ತಿರುತ್ತವೆ, ಎಂದು. ಆ ವೈಭವವನ್ನು ಕಂಡು ಕಣ್ಣು ತುಂಬಿಸಿಕೊಳ್ಳಲು ಪ್ರಸ್ತುತ ಲೇಖಕನಂಥವರು ಇರುವುದಿಲ್ಲವಲ್ಲ ಎಂದು ಮರುಗಬೇಕಾಗಿದೆ! ಆಗ್ಗೆ 'ಮೇರು' ಎನಿಸಿಕೊಳ್ಳುವ ವಿಶ್ವವಿದ್ಯಾನಿಲಯಗಳು ಎಲ್ಲೆಲ್ಲೂ ಪಸರಿಸಿರುತ್ತವೆ. ಇಂಗ್ಲಿಷ್‌ನ 'ಮೇರು' ಎಂದರೆ ಬಹುಶಿಸ್ತೀಯ ಶಿಕ್ಷಣ ಮತ್ತು ಸಂಶೋಧನೆಗಳ ತಾಣವಾದ ವಿಶ್ವವಿದ್ಯಾನಿಲಯಗಳು. ಅವುಗಳೊಟ್ಟಿಗೆ ಬೌದ್ಧಿಕ ಬೆಳವಣಿಗೆಯ ಶ್ರೇಯಸ್ಕರವಾಗಿ ನಡೆಯುವಂತೆ ಮಾಡಲು ವಿಶೇಷ ಭಾರತೀಯ ಶಿಕ್ಷಣ ಸಂಸ್ಥೆಗಳನ್ನು ನಿರ್ಮಿಸಲಾಗಿರುತ್ತದೆ. ಅವನ್ನು "ಇಂಡಿಯನ್ ಇನ್‌ಸ್ಟಿಟ್ಯೂಟ್ಸ್ ಆಫ್ ಲಿಬರಲ್ ಆರ್ಟ್ಸ್" ಎನ್ನಲಾಗುತ್ತದೆ. ಪ್ರಾಚೀನ ನಲಂದಾ, ತಕ್ಷಶಿಲೆಗಳಂತೆ ಇವು ಸರ್ವಾಂಗೀಣ ಬೌದ್ಧಿಕ ಚಟುವಟಿಕೆಗಳ ಕೇಂದ್ರಗಳಾಗಿರುತ್ತವೆಯೆಂಬ ಮಾತನ್ನು ನೀತಿಯು ದಾಖಲಿಸಿದೆ. ಸಕಲ ಕಲಾ ವಲ್ಲಭರೂ ಅಲ್ಲಿರುತ್ತಾರೆ; ಆದ್ದರಿಂದ ಕೃಷಿ, ಕಲೆ, ತಂತ್ರಜ್ಞಾನ, ವೈದ್ಯಕೀಯ, ಮೂಲಭೂತ ವಿಜ್ಞಾನ, ಹೀಗೆ ಎಲ್ಲ ಜ್ಞಾನಶಿಸ್ತುಗಳಿಗೂ ಅವು ಆಗರಗಳಾಗಿರುತ್ತವೆ. ಅವೆಲ್ಲಾ ಎಷ್ಟು ವ್ಯಾಪಕ ಮತ್ತು ಅದ್ಭುತವೆಂದರೆ ಅವುಗಳ ಹೊರಗೆ ಕಲಿಯುವಂಥದೇನೂ ಇರುವುದಿಲ್ಲ. ಈಗ ಐದನೆಯ ತರಗತಿಯಲ್ಲಿರುವ ನಮ್ಮ ಮಕ್ಕಳಿಗೆ ಮುಂದೆ ಅಂತಹ ಮನೋಹರ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಜನೆಯನ್ನು ಮುಂದುವರಿಸುವ ಸೌಭಾಗ್ಯವಿರುತ್ತದೆ. ವ್ಯಂಗ್ಯವಾಡುವುದು ಬೇಡ, ವಾಸ್ತವವಾಗಿ ಅಂತಹ ವಿದ್ಯಾಕೇಂದ್ರಗಳು ದೇಶದುದ್ದಗಲಕ್ಕೂ ಸರ್ವರಿಗೂ ಎಟುಕುವಂತಿರುತ್ತವೆಂದು ಆಶಿಸೋಣ. ಅವು ಜ್ಞಾನವಿರೋಧಿ ಕೇಂದ್ರಗಳೂ ಆಗದಿರಲೆಂದು ಒತ್ತಾಯಿಸೋಣ. ಕಡೆಕಡೆಗೆ ನಲಂದಾ ಮುಂತಾದ ವಿದ್ಯಾಕೇಂದ್ರಗಳು ಕೇವಲ ಮಹಾಯಾನ ಬೌದ್ಧಪಂಥದ ಶಿಸ್ತಿಗೆ ಒಳಪಟ್ಟಿದ್ದವು; ನಮ್ಮ ಸಂಸ್ಥೆಗಳು ಹಾಗೆ ಸೀಮಿತಗೊಳ್ಳಬಾರದು.

ಕೆಲವು ವರ್ಷಗಳ ಹಿಂದೆ ಸ್ಯಾಂ ಪಿಟ್ರೋಡ ಬೆಂಗಳೂರಿನಲ್ಲಿ ನಿರ್ಬಂಧಿತ ಶ್ರೋತೃವರ್ಗಕ್ಕೆ ಉಪನ್ಯಾಸ ನೀಡಿದ್ದುದು ನೆನಪಿಗೆ ಬರುತ್ತದೆ. ಆತನ ಮಾತಿನಲ್ಲಿ ಎಳ್ಳಷ್ಟೂ ಆಸಕ್ತಿಯಿಲ್ಲದ ವಿದ್ಯಾರ್ಥಿ–ವಿದ್ಯಾರ್ಥಿನಿಯರನ್ನು ಜ್ಞಾನಜ್ಯೋತಿ ಸಭಾಂಗಣದಲ್ಲಿ ಕೂಡಿಹಾಕಿ ಅವರಿಗೆ ಭಾಷಣ ಮಾಡಿದ್ದು ಪಿಟ್ರೋಡಾರ ಸಾಹಸವೇ ಸರಿ. ಆಗ ತಾನೆ ನಮ್ಮ ದೇಶದ ಪ್ರಾಥಮಿಕ ಶಿಕ್ಷಣದ ಸುಧಾರಣೆಗೆ ಆತ ವರದಿಯೊಂದನ್ನು ನೀಡಿದ್ದ. ಆತನ ಪಲ್ಲವಿ ಹೀಗಿತ್ತು: "ನಾನು ದೂರಸಂಪರ್ಕ ಕ್ಷೇತ್ರಕ್ಕೆ ಸುಧಾರಣೆ ತಂದೆ; ನೋಡಿ, ಅದೆಷ್ಟು ವಿಜೃಂಭಿಸುತ್ತಿದೆ! ಈಗ ಪ್ರಾಥಮಿಕ ಶಿಕ್ಷಣದ ಸುಧಾರಣೆಗೆ ವರದಿ ನೀಡಿದ್ದೇನೆ. ಐದು ವರ್ಷಗಳಲ್ಲಿ ಅದು ಸುಂದರವಾಗಿ ವಿಕಸಿಸುತ್ತದೆ." ಇದರ ಬಗ್ಗೆ ವ್ಯಾಖ್ಯಾನ ಅನಗತ್ಯ. ವರದಿಯಿಂದ ಎಲ್ಲವನ್ನೂ ಸಾಧಿಸುವಂತಿದ್ದರೆ ಈಗಿನ ಕರಡು ಶಿಕ್ಷಣ ನೀತಿಯು ಭವ್ಯವಾದ ಶಿಕ್ಷಣ ಸೌಧವನ್ನು ನಿರ್ಮಿಸೀತು! ಆದರೆ ಅದರ ಘೋಷಿತ ಪರಿಪ್ರೇಕ್ಷ್ಯವು ಅ–ಚಾರಿತ್ರಿಕವಾದ್ದು, ಅನಂಗೀಕಾರಾರ್ಹವಾದ್ದು. ಕರಡು ನೀತಿಯ ಪ್ರಕಾರ ನಲಂದಾ ಮತ್ತು ತಕ್ಷಶಿಲೆ ವಿದ್ಯಾಕೇಂದ್ರಗಳಲ್ಲಿ ಪಾಣಿನಿ, ಚರಕ, ಚಾಣಕ್ಯ, ಆರ್ಯಭಟ, ಮುಂತಾದವರೆಲ್ಲಾ ವಿದ್ಯಾಭ್ಯಾಸ ಪಡೆದಿದ್ದರು. ಇದು ಭಾರಿ ಉಡಾಫೆಯ ಮಾತು, ಇವರೆಲ್ಲಾ ಎಲ್ಲಿ ಶಿಕ್ಷಣ ಪಡೆದರೆಂಬುದಕ್ಕೆ ಯಾವ ಪುರಾವೆಗಳೂ ಇಲ್ಲ. ಪಾಣಿನಿ ಅತಿಶ್ರೇಷ್ಠ ವ್ಯಾಕರಣ ಪ್ರತಿಭೆ ಎಂಬುದರಲ್ಲಿ ಸಂಶಯವಿಲ್ಲ; ಆದರೆ ಅವನು ಯಾವ ಕಾಲದವನು ಮತ್ತು ಎಲ್ಲಿ ಶಿಕ್ಷಣ ಪಡೆದನೆಂಬುದು ನಿಸ್ಸಂದೇಹವಾಗಿ ತಿಳಿದಿಲ್ಲ. ಚರಕನ ಶಾಲೆಯೆಂದರೆ ಕಾಡುಮೇಡುಗಳು; ಗುಡ್ಡಗಾಡಿನ ಜನ ಅವನ ಗುರುಗಳು. ಅವರೊಡನೆ ಮೂಲಿಕೆಗಳನ್ನರಸುವುದು ಅವನ ಸಂಶೋಧನಾ ವಿಧಾನ. ಚರಕ ಸಂಹಿತೆಯ ಮೊದಲೆರಡು ಅಧ್ಯಾಯಗಳಿಂದ ಇದು ಅತಿಸ್ಪಷ್ಟವಾಗಿ ತಿಳಿಯುತ್ತದೆ. ಆರ್ಯಭಟನ ಕಾಲಕ್ಕಾಗಲೆ ನಲಂದಾ ಶಿಥಿಲವಾಗಿಹೋಗಿತ್ತು. ನಮ್ಮ ೨೦೧೯ರ ಕರಡು ಶಿಕ್ಷಣ ನೀತಿಯು ಪ್ರಾಚೀನ ಭಾರತದ ರಮ್ಯತೆಯನ್ನು ಇಷ್ಟು ವಿರೂಪಗೊಳಿಸಿರುವುದು ಅಕ್ಷಮ್ಯವೆನಿಸುತ್ತದೆ.

ಒಂದು ಸರಳ ದೃಷ್ಟಾಂತವನ್ನು ಗಮನಿಸೋಣ: ತಾರಾನಾಥ ಎಂಬುವವನೊಬ್ಬ ಬೌದ್ಧಮತದ ಇತಿಹಾಸವನ್ನು ರಚಿಸಿದ್ದ. ಅದು ಈಗ ಟಿಬೆಟನ್ ಭಾಷಾಂತರದಲ್ಲಿ ಮಾತ್ರ ಲಭ್ಯ; ಮೂಲ ಸಂಸ್ಕೃತ ಗ್ರಂಥವು ದೊರಕಿಲ್ಲ. ಅಶೋಕನ ಕಾಲದ ನಂತರದ ತಾರಾನಾಥ ನಲಂದಾ ಬಗ್ಗೆ ಪ್ರಸ್ತಾಪಿಸಿದ್ದಾನೆ. ಗ್ರಂಥವು ಆಂಗ್ಲಭಾಷಾ ಅನುವಾದದಲ್ಲಿ ನಮ್ಮ ಕಣ್ಣಮುಂದಿದೆ. ಅವನು ನೀಡಿರುವ ಒಂದು ಮಾಹಿತಿ ಹೀಗಿದೆ: ಸೌರಾಷ್ಟ್ರದಲ್ಲಿ (ಇಂದಿನ ಗುಜರಾತ್ ಪ್ರದೇಶ) ಮಹಾಯಾನ ಬೌದ್ಧಪಂಥದ ಸಿದ್ಧಾಂತವನ್ನು ಬೋಧಿಸುವ ಕೇಂದ್ರವೊಂದರಲ್ಲಿ ಐನೂರು ಅಧ್ಯಾಪಕರಿದ್ದರು. ಲಕ್ಷ್ಯಾಸನೆಂಬ ರಾಜ ಅವರನ್ನು ಆಹ್ವಾನಿಸಿ ಅವರ ಕೇಂದ್ರವನ್ನು ಪೋಷಿಸಬಯಸಿದ. ತನ್ನ ಮಂತ್ರಿಯನ್ನು ಕೇಳಿದ: "ಅಲ್ಲಿ ಎಷ್ಟು ಮಂದಿ ಅಧ್ಯಾಪಕರಿದ್ದಾರೆ?" ಉತ್ತರ: ಐನೂರು ಮಂದಿ. "ಅಲ್ಲಿ ಬೋಧನೆ ಪಡೆಯುತ್ತಿರುವವರು ಎಷ್ಟು ಮಂದಿ?" ಉತ್ತರ: ಐನೂರು. ರಾಜನಿಗೆ ವ್ಯಾಕುಲ ಆವರಿಸಿತು. ಅಬು ಪರ್ವತ ಶ್ರೇಣಿಯಲ್ಲಿ ಅವನು ಐನೂರು ಬೌದ್ಧ ದೇಗುಲಗಳನ್ನು ನಿರ್ಮಿಸಿ ಪ್ರತಿಯೊಂದರಲ್ಲೂ ಬೋಧನೆಗೆ ಅಗತ್ಯವಾದ ಸೌಕರ್ಯಗಳನ್ನು ಕಲ್ಪಿಸಿದ. ಇದು ಇತಿಹಾಸ; ಐತಿಹ್ಯವಲ್ಲ. ನಮ್ಮ ಕರಡು ಶಿಕ್ಷಣ ನೀತಿಯು ಐತಿಹ್ಯಗಳ ರಮ್ಯತೆಗೆ ಮನಸೋತು ಅನೈತಿಹಾಸಿಕ ಮಾಹಿತಿಯ ಆಧಾರದ ಮೇಲೆ ಅಪ್ರಾಸಂಗಿಕ ಹೇಳಿಕೆಗಳನ್ನು ನೀಡಿಬಿಟ್ಟಿದೆ. ಇದು ಯಾವುದೇ ಶಿಕ್ಷಣ ನೀತಿಗೆ ಅತ್ಯಂತ ಮಾರಕವಾದುದೆಂಬುದು ಸಂಶಯಾತೀತ.

ವರ್ತಮಾನದ ಬಗೆಗಾದರೂ ಅದಕ್ಕೆ ವಸ್ತುನಿಷ್ಠ ಆಧಾರಗಳಿವೆಯೇ ಎಂದರೆ ಅದೂ ಇಲ್ಲ. ಅದರ ಒಂದು ವಾಕ್ಯ ನೋಡಿ: "ಸಾರ್ವಜನಿಕ ಶಿಕ್ಷಣ ಸಂಸ್ಥೆಗಳಿಗೆ ನೀಡಲಾಗುತ್ತಿರುವ ಮನ್ನಣೆಗೆ ಭಿನ್ನವಾಗಿ ಖಾಸಗಿ ಉನ್ನತ ಶಿಕ್ಷಣ ಸಂಸ್ಥೆಗಳನ್ನು ಅವಕೃಪೆಗೆ ಗುರಿಯಾಗಿಸಲಾಗಿದೆ" (ಪುಟ ೨೦೬). ಇದು ಸರ್ವಥಾ ಸುಳ್ಳು. ನಮ್ಮ ಪ್ರಕೃತದ ಸನ್ನಿವೇಶದಲ್ಲಿ ಸರ್ಕಾರಿ ಶಿಕ್ಷಣ ಸಂಸ್ಥೆಗಳಿಗೆ ಎಂತಹ ಬೆಂಬಲ ನೀಡಲಾಗುತ್ತಿದೆಯೆಂಬುದನ್ನು ತಿಳಿಯಲು ಯಾವುದೇ ಹಳ್ಳಿಯ ಪ್ರಾಥಮಿಕ ಶಾಲೆಗಳನ್ನು ನೋಡಿಬಂದರೆ ಸಾಕು. ಅವುಗಳನ್ನು ಮುಚ್ಚಲು ಅಗತ್ಯವಾದ ಎಲ್ಲ ಕ್ರಮಗಳನ್ನೂ ದೇಶದ ಎಲ್ಲ ರಾಜ್ಯಸರ್ಕಾರಗಳೂ ಬಹಳ ನಿಷ್ಠೆಯಿಂದ ಕೈಗೊಂಡಿವೆ. ಜನದ್ರೋಹಕ್ಕೆ ಅದೊಂದು ಭಾರಿ ನಿದರ್ಶನವಾಗಿದೆ. ಅದೇ, ಅಂಬಾನಿಯ ಜಿಯೋ ವಿಶ್ವವಿದ್ಯಾನಿಲಯವಾದರೆ, ಅಸ್ತಿತ್ವಕ್ಕೆ ಬರುವ ಮುನ್ನವೇ ಅದಕ್ಕೆ 'ಶ್ರೇಷ್ಠ ಸಂಸ್ಥೆ' ಎಂಬ ಬಿರುದು ನೀಡಿ ೫೦೦ ಕೋಟಿ ರೂಪಾಯಿಗಳನ್ನು ನೀಡಲಾಗಿದೆ. ಖಾಸಗಿಗೆ "ಅವಮನ್ನಣೆ" ಎಂಬುದೆಲ್ಲಿದೆ? ನಮ್ಮ ಪ್ರಾಥಮಿಕ ಶಾಲಾಮಟ್ಟದಿಂದ ಪದವಿ ಮಟ್ಟದವರೆಗೆ ಐದಾರು ಶ್ರೇಣಿಗಳ ಶಿಕ್ಷಣ ಸಂಸ್ಥೆಗಳು ಖಾಸಗಿ ಕ್ಷೇತ್ರದಲ್ಲಿವೆ. ಅವು ಯಾರ ಹಂಗೂ ಇಲ್ಲದೆ ಮನಸೋ ಇಚ್ಛೆ ಶುಲ್ಕ ವಿಧಿಸುತ್ತವೆ. ಸಮಾಜದ ಶ್ರೇಣೀಕರಣವು ಸಂಪೂರ್ಣವಾಗಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಪ್ರತಿಫಲಿತವಾಗಿವೆ. ಅದಕ್ಕೆ ಇತಿಶ್ರೀ ಹಾಡುವ ಬದಲು ಕರಡು ನೀತಿಯು ಖಾಸಗಿ ವಲಯದ ಶ್ರೇಯೋಭಿವೃದ್ಧಿಗಾಗಿ ಕಣ್ಣೀರು ಸುರಿಸ ಹೊರಟಿದೆ. ಬರಲಿರುವ ನೀತಿಯ ವರ್ಗ ಅಸ್ಮಿತೆ ಏನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈ ನೀತಿಯ ಅಘೋಷಿತ ಧ್ಯೇಯವಾಕ್ಯ ಇದೇ: "ಇರುವವರಿಗೆ ಇನ್ನಷ್ಟು; ಇಲ್ಲದವರಿಂದ ಇದ್ದುದನ್ನೂ ಕಸಿದುಕೊ." ಕಾಲೇಜು – ವಿಶ್ವವಿದ್ಯಾಲಯಗಳ ಆರ್ಥಿಕ ಹೊರೆಯನ್ನು ನೀಗಿಸುವ ಕೆಲಸವನ್ನು ತಕ್ಕಮಟ್ಟಿಗೆ ಮಾಡಿಕೊಂಡು ಬಂದಿರುವ ವಿಶ್ವವಿದ್ಯಾಲಯ ಧನಸಹಾಯ ಆಯೋಗವನ್ನು ತುಂಡರಿಸುವ ಕ್ರಮವನ್ನು ನೀತಿಯು ನಮ್ಮ ಮುಂದಿಟ್ಟಿದೆ (೧೮.೪.೧). ಅದರ ಜಾಗದಲ್ಲಿ "ಉನ್ನತ ಶಿಕ್ಷಣ ಅನುದಾನ ಸಮಿತಿ" ಎಂಬುದನ್ನು ಸ್ಥಾಪಿಸಲಾಗುತ್ತದೆ. ಅದು ಯಾವ ಪರಿಗಣನೆಯನ್ವಯ ಅನುದಾನ ನೀಡುತ್ತದೆಂಬುದನ್ನು ವಿಸ್ತರಿಸಿ

ಹೇಳಿಲ್ಲ. ಕರಡು ನೀತಿಯ ಪ್ರಕಾರ ಎಲ್ಲ ಉನ್ನತ ಶಿಕ್ಷಣ ಸಂಸ್ಥೆಗಳೂ ಬಹುತೇಕ ನಗರಕೇಂದ್ರಿತವಾಗಿರುತ್ತವೆ. ಹಾಗೆಂದು ನೇರವಾಗಿ ಹೇಳಿಲ್ಲದ ಕರಡು, ಕಾಲೇಜುಗಳಿಗೆ ವಿದ್ಯಾರ್ಥಿಗಳ ಸಂಖ್ಯೆಯನ್ನು ನಿಗದಿಗೊಳಿಸುತ್ತದೆ. ಐದು ಸಾವಿರ ಎಂಬುದು ಸಾಮಾನ್ಯ ಸೂಚನೆ. ಅಂದರೆ, ತಾಲ್ಲೂಕು ಕೇಂದ್ರಗಳ ಕಾಲೇಜುಗಳ ದುರ್ಗತಿಯನ್ನು ಊಹಿಸಬಹುದು. ಕರಡು ನೀತಿಯಲ್ಲೆಲ್ಲೂ ಮೀಸಲಾತಿಯ ಭವಿಷ್ಯದ ಬಗೆಗೆ ಯಾವ ನೇರ ದಿಗ್ದರ್ಶನವೂ ಇಲ್ಲ. ಆದರೆ ಪದೇ ಪದೇ "ಅರ್ಹತೆ"ಯ ಮಾನದಂಡವನ್ನು ಎತ್ತಿಹಿಡಿಯಲಾಗಿದೆ. ಗ್ರಾಮೀಣ ಪ್ರದೇಶಗಳ ವಿದ್ಯಾರ್ಥಿಗಳನ್ನು ಒಳಗೊಳ್ಳುವುದಕ್ಕೆ ಪರ್ಯಾಯವೆಂದರೆ ಅರ್ಹತೆಯ ಅಗ್ರಮಾನ್ಯತೆ! ಈ ಅರ್ಹತೆಯೆಂಬುದು ಮೂರ್ತವೇ, ಇಲ್ಲ ಅಮೂರ್ತವೇ? ಅದನ್ನು ಪಡೆಯುವುದೆಂತು? ಅಸಮಾನ ಸೌಲಭ್ಯಗಳು ಮತ್ತು ಸಮಾನ ಸ್ಪರ್ಧೆ ಎಂಬುದರ ಕುಹಕವನ್ನೇನಾದರೂ ತಿಳಿದಿರುವೆವೆ? ಅರ್ಹತೆಗೂ ಪುಷ್ಟಿಯುತ ಆಹಾರಕ್ಕೂ ನೇರ ಸಂಬಂಧವಿದೆಯೆಂದು ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಉದ್ದಾಲಕ ಆರುಣಿಯು ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರಾಯೋಗಿಕವಾಗಿ ಸೂತ್ರೀಕರಿಸಿದ್ದ, ಅದಕ್ಕೆ ತನ್ನ ಮಗ ಶ್ವೇತಕೇತುವಿನ ಮೇಲೆ ಪ್ರಯೋಗ ನಡೆಸಿದ್ದ. ನಮ್ಮ ಸಾಮಾಜಿಕ-ಆರ್ಥಿಕ ನೀತಿಗಳು ಇದನ್ನು ಗಾಳಿಗೆ ತೂರಿವೆ. ಅರ್ಹತೆ ಎಂಬ ಶ್ರೇಷ್ಠತೆಯನ್ನು ತಮ್ಮಲ್ಲಿ ತುಂಬಿಕೊಂಡಿದ್ದವರೇ ನಮ್ಮ ದೇಶದಲ್ಲಿ ಎರಡು ಸಾವಿರ ವರ್ಷ ಆಳ್ವಿಕೆ ನಡೆಸಿದ್ದಾರೆ; ಅದರ ಫಲ ನಮಗೆ ದಿನನಿತ್ಯ ಗೋಚರಿಸುತ್ತಿದೆ. ಏರು-ಪೇರು ಮತ್ತು ಶ್ರೇಷ್ಠ-ಕನಿಷ್ಠ ಎಂಬ ತಾರತಮ್ಯ ನಮ್ಮನ್ನು ಛಿದ್ರಗೊಳಿಸಿದೆ, ಅಸಮಾನರನ್ನಾಗಿಸಿದೆ. ಕರಡು ನೀತಿಯು ತುಚ್ಛ ಬುದ್ಧಿವಂತಿಕೆಯಿಂದ ವಾಸ್ತವವನ್ನು ಕಾಣಲಿಚ್ಛಿಸದೆ ಶ್ರೇಷ್ಠತೆಯ ಹೆಸರಿನಲ್ಲಿ ಹಿಂದುಳಿದವರನ್ನು ಸಂಪೂರ್ಣವಾಗಿ ಅಲಕ್ಷ್ಯಕ್ಕೆ ಗುರಿಮಾಡಿದೆ. ಇದು ನೀತಿಯಲ್ಲ, ಬದಲಿಗೆ ಖಂಡನಾರ್ಹ ದುರ್ನೀತಿಯಾಗಿದೆ. ಕೆಲವರಿಗೆ ಉಚ್ಚ ಶಿಕ್ಷಣ, ಇನ್ನಿತರರಿಗೆ "ಕೌಶಲ್ಯಾಭಿವೃದ್ಧಿಗಾಗಿ ಶಿಕ್ಷಣ" ಎಂಬ ಸೂತ್ರವು ಗುಟ್ಟಾಗಿ ನೀತಿಯಲ್ಲಿ ನುಸುಳಿದೆ. ಅಂದರೆ, ಕಮ್ಮಾರನ ಮಗ ಕಮ್ಮಾರ ಮತ್ತು ವಿಜ್ಞಾನಿಯ ಮಗಳು ವಿಜ್ಞಾನಿ, ಎಂದರ್ಥ. ಶ್ರೇಣೀಕೃತ ಸಮಾಜದ ಎಲ್ಲ ದುರ್ನಡತೆ ಮತ್ತು ವಂಚನೆಗಳನ್ನೂ ಪುಷ್ಟೀಕರಿಸುವ "ನೂತನ"ವೇನೂ ಅಲ್ಲದ ಶಿಕ್ಷಣ ನೀತಿ ಇದು.

ಹಿಂದೆ ವಿಶ್ವವಿದ್ಯಾಲಯವೊಂದರಲ್ಲಿ ವಿಜ್ಞಾನ, ವಾಣಿಜ್ಯ, ಸಾಹಿತ್ಯ, ಮಾನವಿಕ, ವೈದ್ಯಕೀಯ, ತಾಂತ್ರಿಕ ಶಿಕ್ಷಣ, ಕೃಷಿವಿಜ್ಞಾನ, ಕಾನೂನು, ಹೀಗೆ ಎಲ್ಲ ಶಿಸ್ತುಗಳೂ ಇರುತ್ತಿದ್ದವು. ಅದು ಆರೋಗ್ಯಕರ ಕೂಡ. ಅದನ್ನು ವಿಘಟಿಸಿ ಒಂದೊಂದು ಶಿಸ್ತಿಗೇ ಮೀಸಲಾದ ವಿಶ್ವವಿದ್ಯಾಲಯಗಳ ಸ್ಥಾಪನೆಯತ್ತ ಧಾವಿಸಿ ಇಡೀ ಶೈಕ್ಷಣಿಕ ತತ್ತ್ವಶಾಸ್ತ್ರವನ್ನು ಅಪ್ರಸ್ತುತಗೊಳಿಸಲಾಯಿತು. ಈಗಿನ ಕರಡು ನೀತಿಯು ಅದನ್ನು ಪುನರಪಿ ಸಮಗ್ರತೆಯತ್ತ ಕೊಂಡೊಯ್ಯುವುದಾಗಿ ಹೇಳಿರುವುದು ಸ್ವಾಗತಾರ್ಹವಾಗಿದೆ.

ಪ್ರತಿಯೊಂದು ಹಂತದಲ್ಲೂ ಕರಡು ನೀತಿಯು ಆರ್ಥಿಕ ಆಯಾಮವನ್ನು ಕುರಿತಂತೆ ಯಾವ ಕಾಳಜಿಯನ್ನೂ ವ್ಯಕ್ತಪಡಿಸಿಲ್ಲ, ತನ್ನ ಸೂಚಿತ ಯೋಜನೆಗಳಿಗೆ ಹಣವು ಲಭ್ಯವಾಗುತ್ತದೆಯೇ ಎಂಬ ಪ್ರಶ್ನೆಯನ್ನು ಎತ್ತಿಲ್ಲ. ಅಷ್ಟು ನಿಷ್ಫಲವೂ ಅವ್ಯಾವಹಾರಿಕವಾದ ಕರಡು ನೀತಿಯೂ ಅದಾಗಿದೆ. ಈ ವರ್ಷದ ಕೇಂದ್ರದ ಬಜೆಟ್ ನಲ್ಲಿ ಶಿಕ್ಷಣಕ್ಕೆಂದು ಇರಿಸಲಾಗಿರುವ ಮೊತ್ತವನ್ನು ಗಮನಿಸಿದರೆ ಒಂದಂಗುಲದ ಪ್ರಗತಿಯನ್ನು ಸಾಧಿಸುವ ಮಹತ್ವಾಕಾಂಕ್ಷೆಯೂ ಅದರಲ್ಲಿಲ್ಲವೆಂಬುದು ಸೂರ್ಯಸ್ಪಷ್ಟ. ಹೀಗಿರುವಾಗ ನಿರೀಕ್ಷಿತ ೧೫,೦೦೦ ವಿಶ್ವವಿದ್ಯಾನಿಲಯಗಳನ್ನು ೨೦೩೨ರ ವೇಳೆಗೆ ಸ್ಥಾಪಿಸುವುದು ಭ್ರಮೆಯಾಗಿಯೇ ಉಳಿಯುವ ಸಾಧ್ಯತೆ ಹೆಚ್ಚು. ೨೦೩೨ರ ವೇಳೆಗೆ ಹೇಗೂ ನಮ್ಮ ಆರ್ಥಿಕತೆಯು "ಐದು ಟ್ರಿಲಿಯನ್ ಡಾಲರುಗಳ ಆರ್ಥಿಕತೆ" ಆಗಿರುತ್ತದೆ, ಆದ್ದರಿಂದ ಯಾವುದಕ್ಕೂ ಕೊರತೆ ಇರುವುದಿಲ್ಲವೆಂಬ ಹುಮ್ಮಸ್ಸು ಕರಡು ನೀತಿಯನ್ನು ಬಲೂನಾಗಿ ಉಬ್ಬಿಸಿದೆ. (ಅದೇ ನೋಡಿ, ಲೆಕ್ಕಾಚಾರ ಕೂಡ ಡಾಲರುಗಳಲ್ಲಿ, ರೂಪಾಯಿಯಲ್ಲಿ ಅಲ್ಲ). ಸದ್ಯದ ಆರ್ಥಿಕ ಪರಿಸ್ಥಿತಿಯು ಮುಗ್ಗಟ್ಟುಗಳ ಆಗರವೆಂದು ಎಲ್ಲರಿಗೂ ತಿಳಿದಿದೆ. ನಿರುದ್ಯೋಗ, ಹಣದುಬ್ಬರ, ಮಾರುಕಟ್ಟೆಯ ಕುಸಿತ, ಉತ್ಪಾದನಾ ಪತನ, ಹೀಗೆ ಯಾವುದರ ಬಗೆಗೂ ನಿಖರ ಮಾಹಿತಿಯು ಪ್ರಕಟವಾಗುತ್ತಿಲ್ಲ. ರಾಷ್ಟ್ರೀಯ ಒಟ್ಟು ಉತ್ಪನ್ನ ಮತ್ತು ಅಭಿವೃದ್ಧಿಯ ದರ ಸಹ ತಿರುಚಲಾಗುತ್ತಿದೆಯೆಂದು ಪರಿಣತರು ಸಾರ್ವಜನಿಕವಾಗಿ ಹೇಳುತ್ತಿದ್ದಾರೆ ಮತ್ತು ಅನೇಕರು ತಮ್ಮ ಉನ್ನತ ಜವಾಬ್ದಾರಿ ಸ್ಥಾನಗಳನ್ನು ತೊರೆದು ನಿರ್ಗಮಿಸುತ್ತಿದ್ದಾರೆ. ಅಂದರೆ "ಡೆನ್ಮಾರ್ಕ್ ರಾಜ್ಯದಲ್ಲಿ ಎಲ್ಲವೂ ಸುಸೂತ್ರವಾಗಿ ಜರುಗುತ್ತಿಲ್ಲ" ಎಂದರ್ಥ. ನಮ್ಮ ದೇಶದ ವಾಸ್ತವಿಕ ಆರ್ಥಿಕ ಸನ್ನಿವೇಶವು ಕಾಶ್ಮೀರದ ಆಂತರಿಕ ಸನ್ನಿವೇಶದಷ್ಟೇ ನಿಗೂಢವಾಗಿಬಿಟ್ಟಿದೆ. ಹೀಗಿರುವಾಗ "ಐದು ಟ್ರಿಲಿಯನ್ ಡಾಲರುಗಳ ಆರ್ಥಿಕತೆ"ಯು ೨೦೩೨ರ ವೇಳೆಗೆ ದೇಶದಲ್ಲಿ ವಿರಾಜಮಾನವಾಗುತ್ತಿರುತ್ತದೆಂಬ ಹೇಳಿಕೆಯು ಪ್ರಶ್ನಾರ್ಹವೆಂದು ತೋರುತ್ತದೆ. ಕರಡು ಶಿಕ್ಷಣ ನೀತಿಯು ಅಂತಹ ಆರ್ಥಿಕ ಮರೀಚಿಕೆಯ ಹಿನ್ನೆಲೆಯಲ್ಲಿ ಪ್ರತಿಪಾದಿತವಾಗಿದೆ. ಅಲ್ಲಿ ಉಕ್ತವಾಗಿರುವ ಯೋಜನೆಗಳಿಗೆ ಬೇಕಾಗುವಷ್ಟು ಹಣವನ್ನು ಎಲ್ಲಿಂದ ಮತ್ತು ಹೇಗೆ ಕ್ರೋಢೀಕರಿಸಲಾಗುತ್ತದೆಂಬುದು ಒಂದು ಯಕ್ಷ ಪ್ರಶ್ನೆಯೇ ಸರಿ. ಅಂಕಿ-ಸಂಖ್ಯೆಗಳ ಎಗ್ಗಿಲ್ಲದ ಆಟವು ಶಿಕ್ಷಣ ನೀತಿಗೆ ಗಟ್ಟಿ ಅಡಿಪಾಯ ಒದಗಿಸುತ್ತಿಲ್ಲ. ಒಂದು ದಿವ್ಯ ಪ್ರಾತಃಕಾಲದಂದು "ಇಗೋ, ಇಂದಿಗೆ ಐದು ಟ್ರಿಲಿಯನ್ ಡಾಲರ್ ಆರ್ಥಿಕತೆ ಸಿದ್ಧಿಸಿದೆ" ಎಂದು ಮಂತ್ರದಂಡ ಹಿಡಿದು ಪಠಿಸಿದರೆ ವಸ್ತುಸ್ಥಿತಿಯು ಹಾಗೆ ಪರಿವರ್ತನೆಗೊಳ್ಳುವ ಸಾಧ್ಯತೆ ಇದ್ದಿದ್ದರೆ ಚಂದ ಇರುತ್ತಿತ್ತು! ಹಾಗೇನಾದರೂ ನಡೆದುಹೋದರೆ ಇಂದು ಕೊಳಚೆ ಪ್ರದೇಶಗಳ ನಿವಾಸಿಗಳಾದ ನಮ್ಮ ಬಂಧುಗಳು ಬಹುಮಹಡಿ ಕಟ್ಟಡಗಳಲ್ಲಿ ವಿರಾಜಿಸುತ್ತಿರುತ್ತಾರೆ. ಅಲ್ಲಿಯ ಮಕ್ಕಳು ದಷ್ಟಪುಷ್ಟರಾಗಿ ಬೆಳೆದು "ಸಂಶೋಧನಾ ವಿಶ್ವವಿದ್ಯಾಲಯ"ಗಳಲ್ಲಿ ನೂತನ ಆವಿಷ್ಕಾರಗಳನ್ನು ಮಾಡುತ್ತಿರುತ್ತಾರೆ. ಶುಭಮಸ್ತು. ಅಲ್ಲದೆ, ಈ ಕರಡಿನ ಪ್ರಕಾರ ಮೂರು ವಿಧದ ವಿಶ್ವವಿದ್ಯಾಲಯಗಳಿರುತ್ತವೆ: ಸಂಶೋಧನೆಗೆ ಮೀಸಲಾದವು, ಅಧ್ಯಾಪನಕ್ಕೆ ಮೀಸಲಾದವು, ಮತ್ತು ಸಾಮಾನ್ಯ ಕಾಲೇಜುಗಳು. ಯಾವ ಕಾಲೇಜಿನಲ್ಲೂ ೫೦೦೦ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವುದಿಲ್ಲ. ಅಂದರೆ, ಮಾಗಡಿ-ಮಧುಗಿರಿ-ಮುಧೋಳ-ಮುಳಬಾಗಿಲು, ಇಂತಹ ಊರುಗಳ ಕಾಲೇಜುಗಳು ಮುಚ್ಚಿ ಹೋಗುತ್ತವೆ. ಅಲ್ಲಿಯ ವಿದ್ಯಾರ್ಥಿಗಳು ಬೆಂಗಳೂರು, ಧಾರವಾಡ, ಮುಂತಾದೆಡೆ ವ್ಯಾಸಂಗ ಮಾಡಬೇಕು. ಆ ವೇಳೆಗೆ ನಮ್ಮ ಹಳ್ಳಿಗಳ ಜನರ ಜೇಬುಗಳೂ ಹಣದಿಂದ ತುಂಬಿ ಹರಿದುಹೋಗುವಂತಿರುತ್ತವಾದ್ದರಿಂದ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಎಲ್ಲಿಗೆ ಬೇಕಾದರೂ ಕಳಿಸುವ ಆರ್ಥಿಕ ಸಾಮರ್ಥ್ಯ ಹೊಂದಿರುತ್ತಾರೆ. ಸಾಮರ್ಥ್ಯವಿಲ್ಲದ ಕುಟುಂಬಗಳವರು, ವಿಶೇಷತಃ ಹೆಣ್ಣುಮಕ್ಕಳು ಮತ್ತು ಹಿಂದುಳಿದವರು, ಉನ್ನತ ಶಿಕ್ಷಣವೆಂಬ ಕನಸಿಗೆ ಕೊಳ್ಳಿ ಇಕ್ಕಿಕೊಳ್ಳಬೇಕು. ಯೋಚನೆ ಮಾಡಿದರೆ, ನಮ್ಮ ಉನ್ನತ ಶಿಕ್ಷಣವು ಪ್ರಪಾತಕ್ಕೆ ನೂಕಲ್ಪಡುತ್ತದೆಂಬ ಭಯ ಆವರಿಸುತ್ತದೆ. ಇದು ಉಳ್ಳವರ ಪರವಾದ ನೀತಿ, ನಗರಗಳ ಪರವಾದ ನೀತಿ, ಖಾಸಗಿ ವಿಶ್ವವಿದ್ಯಾನಿಲಯಗಳ ಮಾಲಿಕರ ಪರವಾದ ನೀತಿ. ಅಲ್ಲದೆ, ವಿದೇಶಿ ವಿಶ್ವವಿದ್ಯಾಲಯಗಳಿಗೆ ರತ್ನಗಂಬಳಿ ಹಾಸಿ ಸ್ವಾಗತಿಸುವ ಯೋಜನೆಯೂ ಮಗುಮ್ಮಾಗಿ ಕರಡು ನೀತಿಯಲ್ಲಿ ಸೇರಿದೆ.

ಕರಡು ನೀತಿ ಹೇಳುತ್ತದೆ, "ನಮ್ಮ ಶಿಕ್ಷಣ ನೀತಿಯು ಭಾರತ - ಕೇಂದ್ರಿತ ನೀತಿಯಾಗಿರುತ್ತದೆ" ಎಂದು. ಈವರೆಗೆ ಅದು ಟಿಂಬಕ್ಟು - ಕೇಂದ್ರಿತ ನೀತಿಯಾಗಿದ್ದಿತೆ? ಭಾರತ - ಕೇಂದ್ರಿತವೆಂದರೆ ಆಧುನಿಕ ವೈಜ್ಞಾನಿಕ ಸಂಶೋಧನೆಗಳನ್ನು, ಇತಿಹಾಸ ಮುಂತಾದ ಶಿಸ್ತುಗಳ ಅಧ್ಯಯನವನ್ನು, ರದ್ದುಮಾಡುವುದೆಂದರ್ಥವಲ್ಲ ಎಂದು ಊಹಿಸಬೇಕಾಗಿದೆ. ನಾವೆಲ್ಲ ವ್ಯಾಸಂಗ ಮಾಡಿದ್ದು ಭಾರತ - ಕೇಂದ್ರಿತ ಶಿಕ್ಷಣ ವ್ಯವಸ್ಥೆಯಲ್ಲೇ ಅಲ್ಲವೇನು?

ಉನ್ನತ ಶಿಕ್ಷಣ ಕ್ಷೇತ್ರವನ್ನು ವಿಶೇಷವಾಗಿ ಗಮನದಲ್ಲಿರಿಸಿಕೊಂಡು ಪ್ರಸ್ತುತ ಲೇಖನದಲ್ಲಿ ಕರಡು ನೀತಿಯನ್ನು ಪರಾಮರ್ಶೆ ಮಾಡಲಾಗಿದೆ. ಪ್ರಾಥಮಿಕ ಶಿಕ್ಷಣ, ಪದವಿಪೂರ್ವ ಶಿಕ್ಷಣ, ತಂತ್ರಜ್ಞಾನ ಮತ್ತು ವೈದ್ಯಕೀಯ ಶಿಕ್ಷಣ, ಕೃಷಿ ಶಿಕ್ಷಣ, ಮಹಿಳಾ ಶಿಕ್ಷಣ, ಅಲ್ಪಸಂಖ್ಯಾತರ ಶಿಕ್ಷಣ, ಮುಂತಾದುವನ್ನು ಕುರಿತಂತೆ ಕೂಡ ಕರಡು ನೀತಿಯ ವಿಮರ್ಶೆಯು ಜರೂರಾಗಿ ಆಗಬೇಕಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಹಾಲು-ಜೇನಿನ ಹೊಳೆ ಹರಿಸಲಾಗುತ್ತದೆಂಬ ಭ್ರಮೆಯಿಂದ ಹೊರಬಂದು ದೇಶದ ಅತಿಸಾಮಾನ್ಯರಿಗೆ ನಾಳಿನ ದಿನಗಳಲ್ಲಿ ಎಷ್ಟು ಮತ್ತು ಎಂತಹ ಶಿಕ್ಷಣ ದೊರೆಯಬಹುದೆಂಬ ವಿಚಾರವನ್ನು ಗಂಭೀರವಾಗಿ ಪರಿಶೀಲಿಸುವ ಜವಾಬ್ದಾರಿ ಜನತೆಯದಾಗಿದೆ. "ಅರ್ಹತೆ"ಯ ಸಬೂಬು ಹೇಳಿ ಎಷ್ಟು ಮಂದಿಯನ್ನು, ಯಾವ ಸಾಮಾಜಿಕ ಗುಂಪಿನ ವಿದ್ಯಾರ್ಥಿಗಳನ್ನು, ಹೊರದಬ್ಬುತ್ತೇವೆ ಎಂಬ ಆತಂಕವು ನಮ್ಮನ್ನು ಬಾಧಿಸಿದರೆ "ಕರಡು ಶಿಕ್ಷಣ ನೀತಿ - ೨೦೧೯" ನಮಗೆ ಸ್ವಲ್ಪ ಅರ್ಥವಾಗಿದೆಯೆಂದು ಭಾವಿಸಬಹುದಾಗಿದೆ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



## ಅನುರಾಧ ಜಗಳೂರು

ಪೀಟ್ ಹೈನ್ ಅವರು ಒಬ್ಬ ಮಾನವತಾವಾದಿ. ಎರಡನೆಯ ಜಾಗತಿಕ ಯುದ್ಧದ ಬಳಿಕ ಎಲ್ಲಾ ದೇಶಗಳ ಮೇಧಾವಿಗಳು ಒಟ್ಟುಗೂಡಿ ಜಗತ್ತಿನ ಒಟ್ಟಾರೆ ಸಮಸ್ಯೆಗಳಿಗೆ ಪರಿಹಾರ ತಂದುಕೊಡಲು ಪ್ರಯತ್ನಿಸಬೇಕು ಎಂಬ ಉದ್ದೇಶದಿಂದ ಕಟ್ಟಿದ ಹಲವಾರು ಸಂಘ-ಸಂಸ್ಥೆಗಳಿಗೆ ಸದಸ್ಯರಾಗಿ ಕೆಲಸ ಮಾಡಿದರು. ಇವುಗಳಲ್ಲಿ ವರ್ಲ್ಡ್ ಮೂವ್‌ಮೆಂಟ್ ಫಾರ್ ವರ್ಲ್ಡ್ ಫೆಡರಲ್ ಗವರ್ನ್‌ಮೆಂಟ್, ಲೀಗ್ ಆಫ್ ಟಾಲರೆನ್ಸ್ ಇವುಗಳೂ ಸೇರಿದ್ದವು. ಮಾನವತಾವಾದವನ್ನು ಎತ್ತಿ ಹಿಡಿಯುವ ಸಂಘ ವಾದ ಹ್ಯೂಮನಿಸ್ಟ್ ಯೂನಿಯನ್ನಿಗೂ ಅವರು ಸದಸ್ಯರಾಗಿದ್ದರು. ಕಲೆ, ಆಟ, ಸಾಹಿತ್ಯ, ಗಣಿತ ಶಾಸ್ತ್ರ, ಮಾನವತಾವಾದದಂತಹ - ಎಲ್ಲ ಕ್ಷೇತ್ರಗಳಿಗೂ ಪೀಟ್ ಹೈನ್ ಅವರ ಕೊಡುಗೆ ಅಪಾರವಾದುದು.

# ಪೀಟ್ ಹೈನ್

*ಕಳೆದಾಗ ಕೈಗವಸು ಒಂದು,*
*ನಿಜ, ಸಂಕಟವೇ ಆಗುವುದು*
*ಆದರೆ*
*ಒಂದು ಕಳೆಯಿತು ಎಂದು*
*ಬಿಸುಟದರೆ ಮತ್ತೊಂದು*
*ಯೋಚಿಸು,*
*ಸಿಕ್ಕರೆ ಮೊದಲನೆಯದು*
*ಆಗುವ ಸಂಕಟವೆಷ್ಟೆಂದು*

– ಮೇಲಿನ ಸಾಲುಗಳು ೧೯೪೦ರ ದಶಕದಲ್ಲಿ ಡೆನ್ಮಾರ್ಕ್ ದೇಶದ ರಸ್ತೆಗಳ ಅಕ್ಕಪಕ್ಕದ ಗೋಡೆಗಳ ಮೇಲೆ ಇದ್ದಕ್ಕಿದ್ದಂತೆ ಕಂಡುಬಂದವು. ದೇಶವನ್ನು ಆಕ್ರಮಿಸಿದ್ದ ನಾತ್ಸಿ ಸೈನ್ಯಕ್ಕೆ ಇದು ಕೇವಲ ಒಂದು ಪದ್ಯವೆಂದಷ್ಟೇ ಕಂಡಿತು. ಆದರೆ ಡೇನರಿಗೋ, ಅದರ ಒಳಾರ್ಥ ತಿಳಿದು ಬಂತು:

"ಈಗ ಆಳುತ್ತಿರುವ ಜರ್ಮನರನ್ನು ಮೆಚ್ಚಿಸಲು ಅವರು ಹೇಳಿದಂತೆ ನಡೆಯಬೇಡಿ. ಸ್ವಾತಂತ್ರ್ಯ ವನ್ನೇನೋ ಕಳೆದುಕೊಂಡಿದ್ದೇವೆ. ಮುಂದೆ ಅವರನ್ನು ಇಲ್ಲಿಂದ ಹೊರಹಾಕಿ ಸ್ವಾತಂತ್ರ್ಯವನ್ನು ಹಿಂತೆಗೆದು ಕೊಂಡಮೇಲೆ, ದೇಶದ್ರೋಹ ಮಾಡಿದ ಬೇಸರ ಮತ್ತು ಪಶ್ಚಾತ್ತಾಪ ನಿಮ್ಮನ್ನು ಕಾಡುತ್ತವೆ."

ಆ ಸಾಲುಗಳನ್ನು ಬರೆದವರು ಡೆನ್ಮಾರ್ಕ್ ದೇಶದ ಭೌತ ವಿಜ್ಞಾನಿ ಪೀಟ್ ಹೈನ್. ೧೯೪೦ರ ಏಪ್ರಿಲ್‌ನಲ್ಲಿ, ಜರ್ಮನಿಯ ಸೈನ್ಯವು ಡೆನ್ಮಾರ್ಕನ್ನು ಹೊಕ್ಕು ಕೇವಲ ಆರೇ ಘಂಟೆಗಳಲ್ಲಿ ದೇಶವನ್ನು ಆಕ್ರಮಿಸಿಕೊಂಡಾಗ ಪೀಟ್ ಹೈನ್ ಅವರು ಅದರ ವಿರುದ್ಧ ನಡೆಯುತ್ತಿದ್ದ ಗುಪ್ತ ಆಂದೋಲನವನ್ನು ಸೇರಿದರು. ಕವನಗಳನ್ನು ಬರೆಯುವ ತಮ್ಮ ಹವ್ಯಾಸವನ್ನೇ ಉಪಯೋಗಿಸಿ ಕೊಂಡು ಆಂದೋಲನದಲ್ಲಿ ಭಾಗಿಯಾದರು. **'ಕುಂಬೆಲ್'** ಎಂಬ ಅಂಕಿತ ನಾಮವನ್ನಿಟ್ಟುಕೊಂಡು (ಆ ಪ್ರದೇಶದ ಪುರಾತನ ಭಾಷೆಯಲ್ಲಿ 'ಕುಂಬೆಲ್' ಅಂದರೆ ಸಮಾಧಿ ಶಿಲೆ) ತಮ್ಮ ಕಿರುಪದ್ಯಗಳಿಗೆ **"ಗ್ರುಕ್"** ಎಂಬ ಹೆಸರು ಕೊಟ್ಟು, 'ಪೊಲಿಟಿಕೊ' ದಿನಪತ್ರಿಕೆಯಲ್ಲಿ ಬರೆಯಲಾರಂಭಿಸಿದರು. ಈ ಗ್ರುಕ್‌ಗಳು ಕೆಲವೇ ದಿನಗಳಲ್ಲಿ ಬಹಳ ಜನಪ್ರಿಯ ವಾದವು. ಡೇನರನ್ನು ಹುರಿದುಂಬಿಸುವಲ್ಲಿ ಮತ್ತು ಅವರನ್ನು ನಾತ್ಸಿಗಳ ವಿರುದ್ಧ ಸಂಘಟಿಸುವಲ್ಲಿ ಅವುಗಳು ಯಶಸ್ವಿಯಾದವು. ಅದರ ಕರ್ತೃವೂ ಡೇನರಿಗೆ ಅಚ್ಚುಮೆಚ್ಚಾದರು. ಆದರೆ ಈ ಪದ್ಯಗಳಿಗೆ ಬೇರೊಂದು ಒಳಾರ್ಥ ಇರಬಹುದೆಂದು ಜರ್ಮನರಿಗೆ ಮಾತ್ರ ಕೊನೆಯವರೆಗೂ ತಿಳಿದುಬರಲಿಲ್ಲ.

ಪೀಟ್ ಹೈನ್ ಅವರ ಹಿರಿಮೆ ಅವರ ಕವನ ಗಳಿಗಷ್ಟೇ ಮೀಸಲಾಗಿಲ್ಲ. ಅವರು ಒಬ್ಬ ಗಣ್ಯ ಭೌತಶಾಸ್ತ್ರಜ್ಞರೂ ಹೌದು. ವರ್ಷಗಳು ಕಳೆದಂತೆ, ಅವರು ಒಬ್ಬ ಗಣಿತಶಾಸ್ತ್ರಜ್ಞರೆಂದೂ ಮತ್ತು ಇಂಜಿನಿಯರ್, ಕಲಾವಿದ, ಆವಿಷ್ಕಾರಿ ಹಾಗೂ ರೂವಾರಿ ಎಂದೂ ಹೆಸರುವಾಸಿಯಾದರು.

ಪೀಟ್ ಹೈನ್ ೧೯೦೫ರ ಡಿಸೆಂಬರ್ ೧೬ರಂದು ಕೊಪನ್‌ಹ್ಯಾಗೆನ್‌ನಲ್ಲಿ ಹುಟ್ಟಿದರು. ಅವರ ತಾಯಿ ನೇತ್ರ ವೈದ್ಯೆ ಮತ್ತು ತಂದೆ ಇಂಜಿನಿಯರ್. ಶಾಲಾ ನಂತರ ಅವರು ಕೊಪನ್‌ಹ್ಯಾಗೆನ್ ವಿಶ್ವವಿದ್ಯಾಲಯ ದಲ್ಲಿ ತತ್ವಶಾಸ್ತ್ರವನ್ನು ಅಭ್ಯಾಸ ಮಾಡಿದರು. ನಂತರ ಅದೇ ಊರಿನ ಕಲಾ ಶಾಲೆಯಲ್ಲೂ, ಸ್ಟಾಕ್‌ಹೋಮ್‌ನ ರಾಯಲ್ ಅಕೆಡೆಮಿ ಆಫ್ ಫೈನ್ ಆರ್ಟ್ಸ್‌ನಲ್ಲೂ ಕಲೆಯನ್ನು ಅಭ್ಯಾಸ ಮಾಡಿದರು. ಮತ್ತೆ ಹುಟ್ಟೂರಿಗೆ ಮರಳಿ ಕೊಪನ್‌ಹ್ಯಾಗೆನ್ ವಿಶ್ವವಿದ್ಯಾಲಯದ ಭೌತಶಾಸ್ತ್ರ ಇಲಾಖೆಯಲ್ಲಿ (ಈಗಿನ ನೀಲ್ಸ್ ಬೋರ್ ಇನ್ಸ್‌ಟಿಟ್ಯೂಟ್) ಭೌತಶಾಸ್ತ್ರ ಮತ್ತು ತತ್ವಶಾಸ್ತ್ರವನ್ನು ಅಧ್ಯಯನ ಮಾಡಿದರು. ಮೇಲ್ನೋಟಕ್ಕೆ ಪೀಟ್ ಹೈನ್ ತಮ್ಮ ವೃತ್ತಿಯ ಹಾದಿಯನ್ನು ಪದೇ ಪದೇ ಬದಲಿಸಿದಂತೆ ತೋರಬಹುದು. ಆದರೆ ಅವರ ಅಭಿಪ್ರಾಯ ಭಿನ್ನವಾದದ್ದು. ವಿಜ್ಞಾನ ಮತ್ತು ಕಲೆ ಎರಡಕ್ಕೂ ಒಂದೇ ರೀತಿಯ ಕಲ್ಪನಾಶಕ್ತಿ ಮತ್ತು ಆಲೋಚನಾ ವಿಧಾನ ಬೇಕು, ಆದ್ದರಿಂದ ಯಾವುದೇ ಸಮಯದಲ್ಲಿ, ಒಬ್ಬ ವಿಜ್ಞಾನಿಯು ಮಾಡುತ್ತಿರುವ ಕೆಲಸ ವಿಜ್ಞಾನವೋ ಅಥವಾ ಕಲೆಯೋ ಎಂದು ಹೇಳಲಾಗುವುದಿಲ್ಲ, ತಾವು ವಿಜ್ಞಾನಿಯೂ ಹೌದು ಕಲೆಗಾರನೂ ಹೌದು ಎಂದು ಅವರು ಹೇಳುತ್ತಿದ್ದರು. ಮುಂದೆ ತಮ್ಮ ಜೀವನದಲ್ಲಿ ಹಲವಾರು ನಿದರ್ಶನಗಳ ಮೂಲಕ ಇದನ್ನು ಸಾಬೀತುಪಡಿಸಿದರು. ಅವರ ರಚನೆಗಳಲ್ಲಿ ಕಲೆಯ ಮತ್ತು ಗಣಿತ ಅಥವಾ ವಿಜ್ಞಾನದ ಸುಮಧುರ ಸಾಮರಸ್ಯ ಎದ್ದು ಕಾಣುತ್ತಿತ್ತು.

೧೯೫೦ರ ದಶಕದಲ್ಲಿ, ಸ್ಟಾಕ್‌ಹೋಮ್‌ನ ಪುರಯೋಜಕರಿಗೆ ಒಂದು ಸಮಸ್ಯೆ ಎದುರಾಯಿತು. ಊರ ಮಧ್ಯದಲ್ಲಿದ್ದ ಕೆಲವು ಹಳೆಯ ಕಟ್ಟಡಗಳನ್ನು ಒಡೆದು, ಅವುಗಳ ಸ್ಥಳದಲ್ಲಿ ಶಿಲ್ಪಕೃತಿಗಳೂ ಕಾರಂಜಿಗಳೂ ಇರುವಂತಹ ಒಂದು ಸುಂದರವಾದ ಕೇಂದ್ರ ಸ್ಥಳವನ್ನೂ, ಅದರ ಸುತ್ತ ವಾಹನಗಳು ಸರಾಗವಾಗಿ ಹರಿದಾಡಲು ಅನುಕೂಲವಿರುವ ರಸ್ತೆಗಳನ್ನೂ ಕಟ್ಟಬೇಕೆಂದು ಅವರು ಯೋಜನೆ ಹಾಕಿಕೊಂಡಿದ್ದರು. ಆದರೆ ರಸ್ತೆಗಳ ಮಧ್ಯದ ಆ ದ್ವೀಪ ಯಾವ ಆಕಾರದಲ್ಲಿರಬೇಕು, ಕಟ್ಟಡಗಳನ್ನು ಒಡೆದು ಉಂಟುಮಾಡಿದ ಸ್ಥಳ ಆಯತಾಕಾರದಲ್ಲಿದ್ದುದರಿಂದ ದ್ವೀಪ ವೃತ್ತಾಕಾರವಿದ್ದರೆ ಸರಿಬರುವುದಿಲ್ಲ, ಆಕಾರ ಎಲಿಪ್ಸ್ ಇದ್ದರೂ ಮೂಲೆಗಳಲ್ಲಿ ಸ್ಥಳ ವ್ಯರ್ಥ ವಾಗುತ್ತದೆ, ದ್ವೀಪವೂ ಆಯತಾಕಾರದಲ್ಲಿದ್ದರೆ, ಅದರ ಮೂಲೆಗಳಲ್ಲಿ ವಾಹನಗಳು ತಿರುಗುವುದಕ್ಕೆ ಅನಾನುಕೂಲ, ಈ ಸಮಸ್ಯೆಯನ್ನು ಬಗೆಹರಿಸುವುದು ಹೇಗೆ? ಆ ಯೋಜನೆಯ ಭಾರ ಹೊತ್ತಿದ್ದ ವಾಸ್ತುಶಿಲ್ಪಿಗಳ ತಂಡದ ಒಬ್ಬನಿಗೆ ಪೀಟ್ ಹೈನ್ ಅವರ ಪರಿಚಯವಿತ್ತು. ತಂತ್ರವಿದ್ಯೆ ಹಾಗೂ ಕಲೆಯ ನಡುವಿನ ಮಸುಕಾದ ಪ್ರದೇಶದಲ್ಲಿದ್ದ ಈ ಸಮಸ್ಯೆಯು ಪೀಟ್ ಹೈನ್ ಅವರಿಗೆ ಹೇಳಿ ಮಾಡಿಸಿದ್ದು ಎಂದು ಅವನಿಗೆ ಅನಿಸಿರಬೇಕು. ಆತ ಸಮಸ್ಯೆಯನ್ನು ಅವರ ಮುಂದಿಟ್ಟ. ಪೀಟ್ ಹೈನ್ ಅವರು ಒಂದೇ ಕ್ಷಣದಲ್ಲಿ ಅದರ ಪರಿಹಾರದ ಸುಳಿವು ಕಂಡುಕೊಂಡರು. "ನಮಗೆ ಬೇಕಿರುವುದು ಆಯತಾಕಾರಕ್ಕೂ ಎಲಿಪ್ಸಿಗೂ ಮಧ್ಯದ ಆಕಾರ. ಎಲಿಪ್ಸಿನ ಸಮೀಕರಣದಲ್ಲಿ ಇರುವ ಘಾತವನ್ನು ೨.೫ ಮಾಡಿದರೆ ದೊರಕುವ ವಕ್ರಾಕಾರವೇ ಈ ಸಂದರ್ಭದಲ್ಲಿ ಸೂಕ್ತ" ಎಂದು

ಒಂದೇ ಬಾರಿಗೆ ಉತ್ತರಿಸಿದರು. ಆ ವಾಸ್ತುಶಿಲ್ಪಿಗೂ ತಕ್ಕಮಟ್ಟಿಗೆ ಗಣಿತ ತಿಳಿದಿದ್ದರಿಂದ, ಅವರು ಹೇಳುತ್ತಿರುವುದು ಕೂಡಲೇ ಅರ್ಥವಾಯಿತು.

ಎಲಿಪ್ಸಿನ ಸಮೀಕರಣ ಈ ರೀತಿಯಲ್ಲಿದೆ. ಇಲ್ಲಿ a ಮತ್ತು b ಗಳು ಎಲಿಪ್ಸಿನ ಪ್ರಧಾನ ಅಕ್ಷ ಮತ್ತು ಲಘು ಅಕ್ಷ :




$$\frac{x^2}{b^2} + \frac{y^2}{a^2} = 1$$



ಚಿತ್ರದಲ್ಲಿರುವಂತೆ, ಸಮೀಕರಣದಲ್ಲಿನ ಘಾತವು ೨ ಆಗಿದ್ದಾಗ ವಕ್ರವು ಎಲಿಪ್ಸ್ ಆಗುತ್ತದೆ. ಘಾತವು ಹೆಚ್ಚಾದಂತೆ ವಕ್ರವು ಆಯತಾಕಾರವನ್ನು ಹೋಲಲು ಪ್ರಾರಂಭಿಸುತ್ತದೆ. ೨ರ ಸ್ಥಳದಲ್ಲಿ ೨. ೫ಅನ್ನು ಉಪಯೋಗಿಸಿದರೆ ಬರುವ ವಕ್ರವನ್ನೇ ಪೀಟ್ ಹೈನ್ ಅವರು ಸಮಸ್ಯೆಗೆ ಪರಿಹಾರವೆಂದು ಸೂಚಿಸಿದ್ದು. ಕೆಲವೇ ದಿನಗಳಲ್ಲಿ ಅವರು ಆ ವಕ್ರವನ್ನು ಚಿತ್ರಿಸಿಯೂ ತೋರಿಸಿದರು. ಅದು ಊರ ಮಧ್ಯದ ಸ್ಥಳಕ್ಕೆ ಸುಂದರವಾಗಿ ಹೊಂದುತ್ತಿತ್ತು.

ಈ ವಕ್ರಕ್ಕೆ ಪೀಟ್ ಹೈನ್ 'ಸೂಪರ್ ಎಲಿಪ್ಸ್' ಎಂದು ಹೆಸರು ಕೊಟ್ಟರು. ಸ್ಟಾಕ್‌ಹೋಮ್ ನಗರದಲ್ಲಿ 'ಸೂಪರ್ ಎಲಿಪ್ಸ್' ಆಕಾರದ ಸುಂದರ ಕೇಂದ್ರ ಸ್ಥಳವನ್ನು ಕಟ್ಟಲಾಯಿತು. ಪ್ರಪಂಚದ ಹಲವಾರು ನಗರಗಳ ಯೋಜನೆಗಳಲ್ಲಿ 'ಸೂಪರ್ ಎಲಿಪ್ಸ್' ಆಕಾರವನ್ನು ಉಪಯೋಗಿಸಿದ್ದಾರೆ. ಅವುಗಳಲ್ಲಿ ಮೆಕ್ಸಿಕೋ ಸಿಟಿಯ ಆಜ್ಟೇಕ ಒಲಿಂಪಿಕ್ ಕ್ರೀಡಾಂಗಣವೂ ಒಂದು.

ಪೀಟ್ ಹೈನ್ ಕೊಪನ್‌ಹ್ಯಾಗೆನ್‌ನ ಶ್ರೇಷ್ಠ ಭೌತವಿಜ್ಞಾನಿ ನೀಲ್ಸ್ ಬೋರ್ ಅವರ ಶಿಷ್ಯರಾಗಿದ್ದರು. ವಿಶ್ವವಿದ್ಯಾಲಯದಿಂದ ಹೊರಬಂದಮೇಲೂ ಅವರೊಡನೆ ಸ್ನೇಹ ಮುಂದುವರೆಯಿತು. ಅವರ ಮಾತಿನಲ್ಲೇ ಹೇಳುವುದಾದರೆ, ಬೋರ್ ಜೊತೆ ಅವರು 'ಬೌದ್ಧಿಕ ಪಿಂಗ್ ಪಾಂಗ್' ಆಡುತ್ತಿದ್ದರಂತೆ. ಬೋರ್ ಅವರ ಮೂಲಕ ಪೀಟ್ ಹೈನ್ ಅವರಿಗೆ ಐನ್‌ಸ್ಟೈನ್ ಮತ್ತು ಚಾರ್ಲಿ ಚಾಪ್ಲಿನ್ ಅವರ ಪರಿಚಯ ವಾಯಿತು. ಈ ನಾಲ್ಕೂ ಜನರ ನಡುವಿನ ಸ್ನೇಹ ತಮಗೆ ಎಷ್ಟು ಸ್ಫೂರ್ತಿದಾಯಕ ವಾಗಿತ್ತು ಎಂಬುದನ್ನು ಪೀಟ್ ಹೈನ್ ಹಲವಾರು ಕಡೆ ಬರೆದಿದ್ದಾರೆ.

ಪೀಟ್ ಹೈನ್ ಒಮ್ಮೆ ಖ್ಯಾತ ಜರ್ಮನ್ ಭೌತ ವಿಜ್ಞಾನಿ ವರ್ನರ್ ಹೈಸನ್‌ಬರ್ಗ್ ಅವರ ಭಾಷಣವನ್ನು ಕೇಳಲು ಹೋಗಿದ್ದರು. ಭಾಷಣದ ಮಧ್ಯೆ ಯಾವುದೋ ಕಾರಣಕ್ಕೆ ಕೋಣೆಯೊಂದನ್ನು ಘನಗಳನ್ನಾಗಿ ವಿಂಗಡಿಸುವ ಮಾತು ಬಂತು. ಪೀಟ್ ಹೈನ್‌ರ ಅನಿಯಮಿತ ಕಲ್ಪನಾ ಶಕ್ತಿ ಆ ಚಿತ್ರವನ್ನು ಮುಂದೆ ಬೆಳಸಿಕೊಂಡು ಹೋಯಿತು. ಘನಗಳನ್ನು ಒಂದರ ಮುಖ ಒಂದಕ್ಕೆಂಬಂತೆ ಜೋಡಿಸಿದರೆ ಹಾಗೂ ಜೋಡಿಸಿದಾಗ ಕನಿಷ್ಠ ಒಂದು ಮೂಲೆಯಾದರೂ ನಿರ್ಮಾಣವಾಗುವಂತೆ ಎಷ್ಟು ಬಗೆಯಲ್ಲಿ ಜೋಡಿಸಬಹುದು?

ಚಿತ್ರದಲ್ಲಿ ತೋರಿಸಿರುವಂತೆ, ಕೇವಲ ಮೂರು ಘನಗಳಿದ್ದರೆ ಅವನ್ನು ಒಂದೇ ಒಂದು ರೀತಿ ಜೋಡಿಸಲು ಸಾಧ್ಯ.

ನಾಲ್ಕು ಘನಗಳನ್ನಾದರೋ, ಆರು ರೀತಿ ಜೋಡಿಸಬಹುದು. (ಈ ಆಕೃತಿ ಗಳಲ್ಲಿ ಒಂದು ಮಾತ್ರ ಮತ್ತೊಂದರ ಪ್ರತಿಬಿಂಬ)

ಹೀಗೆ ರಚಿಸಿದ ಏಳು ಆಕೃತಿಗಳಲ್ಲಿರುವ ಘನಗಳ ಒಟ್ಟು ಸಂಖ್ಯೆ ೩ + (೬ x೪) = ೨೭.

ಸ್ವಾರಸ್ಯಕರವಾದ ವಿಷಯವೆಂದರೆ ಒಂದೊಂದು ಬದಿಯಲ್ಲೂ ಮೂರು ಘನಗಳು ಬರುವಂತೆ ಜೋಡಿಸಿ ರಚಿಸಿದ ಒಂದು ದೊಡ್ಡ ಘನದಲ್ಲಿ ಇರುವ ಚಿಕ್ಕ ಘನಗಳ ಸಂಖ್ಯೆಯೂ ೩ x ೩ x ೩ = ೨೭. ಆದ್ದರಿಂದ ಆ ಏಳು ಆಕೃತಿಗಳಿಂದ ದೊಡ್ಡ ಘನವೊಂದನ್ನು ರಚಿಸಲು ಸಾಧ್ಯವಾಗಬೇಕು ಎಂಬುದನ್ನು ಪೀಟ್ ಹೈನ್ ಅವರ ಸೂಕ್ಷ್ಮದೃಷ್ಟಿ ಗ್ರಹಿಸಿತು. ಅದು ನಿಜವಾಗಿಯೂ ಸಾಧ್ಯ ಎಂಬುದು ಮುಂದೆ ಸಾಬೀತಾಯಿತಲ್ಲದೆ, ಆ ಆಕೃತಿಗಳನ್ನು ೨೪೦ ವಿವಿಧ ರೀತಿಗಳಲ್ಲಿ ಜೋಡಿಸಿ ದೊಡ್ಡ ಘನವನ್ನು ಮಾಡಬಹುದು ಎಂದು ಗಣಿತ ಶಾಸ್ತ್ರದಿಂದಲೂ ಸಾಕ್ಷ್ಯಾಧಾರ ದೊರಕಿತು.

ಈ ಘನವನ್ನು ಪೀಟ್ ಹೈನ್ ಅವರು 'ಸೋಮಾ ಕ್ಯೂಬ್' ಎಂದು ಕರೆದರು. (ಆಲ್ಡಸ್ ಹಕ್ಸ್‌ಲಿ ಅವರ 'ಬ್ರೇವ್ ನ್ಯೂ ವರ್ಲ್ಡ್' ಎಂಬ ಕಾದಂಬರಿಯಲ್ಲಿ ಬರುವ 'ಸೋಮ' ಎಂಬ ಮಾದಕ ವಸ್ತುವಿನ ಹೆಸರನ್ನು ಪೀಟ್ ಹೈನ್ ಅವರು ಉಪಯೋಗಿಸಿದ್ದಾರೆ. ಹಕ್ಸ್‌ಲಿಯವರೋ, ನಮ್ಮ ವೇದಗಳಲ್ಲಿ ಹೆಸರಿಸಿರುವ ಸೋಮ ರಸದ ಹೆಸರನ್ನು ಎರವಲು ಪಡೆದಿದ್ದಾರೆ!) ರೂಬಿಕ್ ಕ್ಯೂಬ್ ಆಟವನ್ನು ಆಡುವಂತೆ ಸೋಮಾ ಕ್ಯೂಬನ್ನೂ ಈಗಲೂ ಆಡುವುದುಂಟು. ಸದ್ಯದಲ್ಲಿ ಪ್ರಪಂಚದಲ್ಲೇ ಎಲ್ಲರಿಗಿಂತ ವೇಗವಾಗಿ ಇದನ್ನು ಜೋಡಿಸುವವರು ಭಾರತದವರೇ ಆದ ಕೃಷ್ಣಮ್ ರಾಜು ಗಡಿರಾಜು ಎಂಬುವವರು.

ಪೀಟ್ ಹೈನ್ ಮತ್ತೊಂದು ಸುಂದರವಾದ ಆಟವನ್ನು ಕಂಡುಹಿಡಿದಿದ್ದಾರೆ. ಯಾವುದೇ ಚೌಕದ ನಾಲ್ಕು ಭುಜಗಳಲ್ಲಿ ಒಂದು ಭುಜದಿಂದ ಅದರ ಎದುರಿನ ಭುಜಕ್ಕೆ ಒಂದು ರೇಖೆಯನ್ನು ಎಳೆದರೆ, ಅದು ಮಿಕ್ಕೆರಡು ಭುಜಗಳ ಮಧ್ಯೆ ಎಳೆದ ರೇಖೆಯನ್ನು ದಾಟಲೇಬೇಕು ಎಂಬ ಒಂದು ಸಣ್ಣ ನಿಜಾಂಶದಿಂದ ಹುಟ್ಟಿದ ಆಟ ಇದು. ಆಟಕ್ಕೆ ಇಬ್ಬರು ಆಟಗಾರರು ಬೇಕು. ಒಂದೇ ಸಮತಲದ ಮೇಲೆ ಚೌಕಗಳ ಒಂದು ಬಲೆಯನ್ನು ಬಿಡಿಸಿದೆ ಅಂದುಕೊಳ್ಳೋಣ. ಪ್ರತಿ ಆಟಗಾರನೂ ಎದುರಾಳಿಯು ತನಗೆ ಅಡ್ಡಬರುವುದಕ್ಕೆ ಬಿಡದೆ, ಚೌಕಗಳನ್ನು ಸೇರಿಸಿ ಗೆರೆ ಎಳೆದು, ತಾನಿರುವೆಡೆಯಿಂದ ಎದುರೆಡೆಗೆ ಸೇರುವ ಚಾತುರ್ಯದ ಆಟ ಇದು.





ಇದಕ್ಕೆ ಚೌಕಗಳ ಬದಲು ಷಡ್ಭುಜಗಳನ್ನು ಉಪಯೋಗಿಸಿದರೆ ಆಟದ ವೈವಿಧ್ಯತೆಗೆ ಹೆಚ್ಚು ಆಸ್ಪದ ಸಿಗುತ್ತದೆ ಎಂದು ತೀರ್ಮಾನಿಸಿ ಪೀಟ್ ಹೈನ್ ಅವರು ಷಡ್ಭುಜಗಳನ್ನೊಳಗೊಂಡ ರಾಮ್ಬಸ್ ಆಕಾರದ ಬಲೆಯನ್ನು ತಯಾರು ಮಾಡಿ, ಆ ಆಟಕ್ಕೆ ಕಾನ್–ಟಾಕ್–ಟಿಕ್ಸ್ ಎಂದು ಹೆಸರಿಟ್ಟರು. ಸೋಜಿಗದ ಸಂಗತಿಯೆಂದರೆ, ಇದಾದ ಕೆಲವೇ ವರ್ಷಗಳ ನಂತರ ಅಮೆರಿಕಾದ ಖ್ಯಾತ ಗಣಿತ ಶಾಸ್ತ್ರಜ್ಞ ಜಾನ್ ನ್ಯಾಶ್ ಅವರೂ ಇದೇ ಆಟವನ್ನು ಕಂಡುಹಿಡಿದರು. ಅಮೆರಿಕಾದಲ್ಲಿ ಹೆಕ್ಸ್ ಎಂಬ ಹೆಸರಿನಿಂದ ಈ ಆಟ ಮಾರಾಟವಾಗಲು ಪ್ರಾರಂಭವಾಯಿತು.

ಈ ಆಟವನ್ನು ಆಡುವುದೇನೋ ಸುಲಭ. ಆದರೆ ಚೆನ್ನಾಗಿ ಆಡಲು ಅತ್ಯಂತ ಕೌಶಲ್ಯ ಬೇಕು. ಕ್ರೀಡಾ ಸಿದ್ಧಾಂತ ಮತ್ತು ಗ್ರಾಫ್ ಸಿದ್ಧಾಂತವನ್ನು ಅಧ್ಯಯನ ಮಾಡುವ ಗಣಿತಶಾಸ್ತ್ರಜ್ಞರು ಇದನ್ನು ಆಳವಾಗಿ ಸಂಶೋಧಿಸಿದ್ದಾರೆ. ಕಂಪ್ಯೂಟರ್‌ಗೆ ಹೆಕ್ಸ್ ಆಟವನ್ನು ಹೇಳಿಕೊಟ್ಟು ಅದರ ಆಟವನ್ನು ಉತ್ತಮಗೊಳಿಸುವ ಪ್ರಯತ್ನಗಳು ನಡೆಯುತ್ತಲೇ ಇವೆ.

ಪೀಟ್ ಹೈನ್ ಅವರು ಹಲವಾರು ನಿತ್ಯ ಉಪಯೋಗಿ ವಸ್ತುಗಳ ರಚನೆಗೆ ಗಣಿತದ ಸಮೀಕರಣಗಳನ್ನೂ, ವಿಜ್ಞಾನದ ವಿಚಾರಗಳನ್ನೂ ಉಪಯೋಗಿಸಿರುವುದುಂಟು. ಸೂಪರ್ ಎಲಿಪ್ಸ್ ಆಕಾರದ ಮೇಜು, ಕುರ್ಚಿಗಳು, ತಟ್ಟೆಗಳು, ಪಾತ್ರೆಗಳು ಮುಂತಾದುವನ್ನು ಅವರು ವಿನ್ಯಾಸಿಸಿದರು. ಅವೂ ಸ್ಕ್ಯಾಂಡಿನೇವಿಯ ದೇಶಗಳಲ್ಲಿ ಬಹಳ ಜನಪ್ರಿಯ ವಾದವು. ಎರಡು ಸೈನ್ ವಕ್ರಗಳ ಜೋಡಣೆಯಿಂದ ಉಂಟಾಗುವ ಆಕಾರದಲ್ಲಿ ತಯಾರಿಸಿದ 'ಸೈನಸ್' ದೀಪದ ಮುಸುಕು, ಮತ್ತೊಂದು ಗಣಿತದ ಸಮೀಕರಣವನ್ನು ಉಪಯೋಗಿಸಿ ತಯಾರಿಸಿದ 'ರಾ' ದೀಪದ ಮುಸುಕು ಎರಡೂ ಈಗಲೂ ಜನಪ್ರಿಯವಾಗಿವೆ. ಸೂಪರ್ ಎಲಿಪ್ಸ್‌ನ ಪ್ರಧಾನ ಅಕ್ಷದ ಸುತ್ತ ಆ ಆಕಾರವನ್ನು ೩೬೦ ಡಿಗ್ರಿ ತಿರುಗಿಸಿದಾಗ ಉಂಟಾಗುವ ಮೂರು ಆಯಾಮದ ವಸ್ತುವೇ 'ಸೂಪರ್ ಎಗ್'. ಮೊಟ್ಟೆಯಾಕಾರದ ವಸ್ತುವನ್ನು ಯಾವುದೇ ತುದಿಯ ಮೇಲೆ ನಿಲ್ಲಿಸಲು ಸಾಧ್ಯವಿಲ್ಲ, ಅಲ್ಲವೇ? ಆದರೆ ಈ 'ಸೂಪರ್ ಎಗ್' ಮೊಟ್ಟೆಯಂತೆ ಕಂಡರೂ ಎರಡೂ ತುದಿಗಳ ಮೇಲೆ ಭದ್ರವಾಗಿ ನಿಲ್ಲುತ್ತದೆ. ಸೂಪರ್ ಎಗ್ ಆಕಾರದ ಉಪ್ಪು ಮತ್ತು ಮೆಣಸನ್ನು ಉದುರಿಸುವ ಡಬ್ಬಿಗಳನ್ನು, ಪೇಪರ್ ವೇಯ್ಟ್‌ಗಳನ್ನು ಈಗಲೂ ಉಪಯೋಗಿಸುತ್ತಾರೆ. ಈ ಆಕಾರದ ಶಿಲ್ಪಕೃತಿಯನ್ನು ಡೆನ್ಮಾರ್ಕ್‌ನ ಸ್ಕೆರ್ನ್ ನಗರದಲ್ಲಿ ಸ್ಥಾಪಿಸಲಾಗಿದೆ.

ಅವರು ರಚಿಸಿದ ಮತ್ತೊಂದು ಕುತೂಹಲಕಾರಿ ವಸ್ತುವೆಂದರೆ ಏಳು ಮೋಂಬತ್ತಿಗಳನ್ನು ನಿಲ್ಲಿಸ ಬಹುದಾದ ಕ್ಯಾಂಡಲ್ ಸ್ಟಾಂಡ್. ಅದರಲ್ಲಿ ಒಂದೇ ಉದ್ದದ ಏಳು ಮೊಂಬತ್ತಿಗಳನ್ನು ಹಚ್ಚಿಸಿ ನಿಲ್ಲಿಸಿದರೆ, ಅದು ಕತ್ತಲಲ್ಲಿ ಸಪ್ತರ್ಷಿ ಮಂಡಲದಂತೆ ಕಾಣುತ್ತದೆ!

ಎಗೆಸ್ಕೊವ್ ಎಂಬ ಊರಿನ ಉದ್ಯಾನ ವೊಂದರಲ್ಲಿ ಪೀಟ್ ಹೈನ್ ರಚಿಸಿದ ಅನನ್ಯವಾದ ನೆರಳು ಗಡಿಯಾರವಿದೆ. ಅದರ ವೈಶಿಷ್ಟ್ಯವೇನೆಂದರೆ, ನೆರಳನ್ನು ಉಂಟುಮಾಡುವ ಭಾಗ ಮತ್ತು ನೆರಳನ್ನು ಹಿಡಿಯುವ ಭಾಗಗಳೆರಡೂ ಒಂದೇ. ರಂಧ್ರಗಳುಳ್ಳ ಸಣ್ಣನೆಯ ಲೋಹದ ಪಟ್ಟಿಯನ್ನು ಅನುಲಂಬವಾಗಿ ತಿರುಚಿ ಮಾಡಿರುವ ಇದರಲ್ಲಿ ಪಟ್ಟಿಯ ಒಂದು ಭಾಗದ ನೆರಳು ಇನ್ನೊಂದು ಭಾಗದ ಮೇಲೆ ಬೀಳುತ್ತದೆ. ಆ ನೆರಳಿನ ಅಂಚು ಯಾವ ರಂಧ್ರದ ಮೇಲೆ ಇದೆ ಎನ್ನುವುದನ್ನು ನೋಡಿ ಸಮಯವನ್ನು ಕಂಡುಹಿಡಿಯಬಹುದು.

ಅದೇ ಉದ್ಯಾನದಲ್ಲಿ ಅವರು ಒಂದು ಚಕ್ರವ್ಯೂಹ ವನ್ನು ಸೃಷ್ಟಿಸಿದ್ದಾರೆ. ವ್ಯೂಹದ ಹೊರಗಿನಿಂದ ಕೇಂದ್ರವನ್ನು ತಲುಪಲು ಕನಿಷ್ಠ ಹದಿನೈದು ನಿಮಿಷಗಳಾದರೂ ಬೇಕು.

ಪ್ರಾರಂಭದಲ್ಲಿ ಓದಿದ 'ಸಾಂತ್ವನದ ಗ್ರೂಕ್' ಅಲ್ಲದೆ ತಮ್ಮ ಜೀವಮಾನದಲ್ಲಿ ಪೀಟ್ ಹೈನ್ ಅವರು ನೂರಾರು ಗ್ರುಕ್‌ಗಳನ್ನು ಬರೆದಿದ್ದಾರೆ (ಹತ್ತು ಸಾವಿರಕ್ಕೂ ಹೆಚ್ಚು ಎಂದು ಕೆಲವರು ಹೇಳುವುದುಂಟು). ಅದರಲ್ಲಿ ಕೆಲವು ಸರಳವಾದವು, ವಿನೋದವಾದವು. ಮತ್ತೆ ಕೆಲವು ನಮಗೆ ತಿಳಿದಿರುವ ವಿಷಯವನ್ನೇ ಹೊಸ ದೃಷ್ಟಿಯಿಂದ ನೋಡುವಂತೆ ಮಾಡುವಂಥವು. ನಮ್ಮ ಸಾಮಾನ್ಯ ಅನುಭವಗಳಲ್ಲಿ ಹಾಗೂ ಪರಿಚಿತ ಸಂದರ್ಭಗಳಲ್ಲಿ ಕಾಣುವ ವಿರೋಧಾಭಾಸ ಮತ್ತು ವಿಪರ್ಯಾಸಗಳನ್ನು ಎತ್ತಿ ತೋರಿಸುವಂಥವು ಹಲವು. ಕೆಲವು 'ಗ್ರುಕ್'ಗಳೋ ಜೀವನಕ್ಕೆ ಉಪಯುಕ್ತವಾದ ಸೂತ್ರಗಳನ್ನು ಬೋಧಿಸುತ್ತವೆ. ಇವೆಲ್ಲವನ್ನೂ ಪೀಟ್ ಹೈನ್ ನಿಖರವಾಗಿ, ಸಂಕ್ಷಿಪ್ತವಾಗಿ, ಕೆಲವೇ ಪದಗಳನ್ನು ಉಪಯೋಗಿಸಿ, ಸಾಮಾನ್ಯವಾಗಿ ಪ್ರಾಸಬದ್ಧವಾಗಿ ಬರೆಯುವುದು ಅದ್ಭುತವೆನಿಸುತ್ತದೆ. ಹಲವಾರು 'ಗ್ರುಕ್'ಗಳಿಗೆ ಅವರು ಸರಳ ಸುಂದರ ಚಿತ್ರಗಳನ್ನು ಬಿಡಿಸಿರುವುದೂ ಉಂಟು. 'ಗ್ರುಕ್'ಗಳ ಮೂರು ಉದಾಹರಣೆಗಳನ್ನು ಓದಿ:



*ನಿನ್ನ ದಿನಗಳು*
*ಮುಗಿಯುವ ಮುನ್ನ*
*ನಿನ್ನ ನಡತೆಯ ಕುರಿತು*
*ಕಲಿ ಈ ಪಾಠ:*
*ನಿನ್ನ ನಡತೆಯ ಸಮರ್ಥಿಸಲು*
*ಪ್ರಯತ್ನಿಸುವ ಸಮಯವ,*
*ನಿನ್ನ ನೀ ತಿದ್ದಲು*
*ಬಳಸುವುದೇ ಲೇಸು*

*ಯಾವ ಹಸುವೂ ಕುದುರೆಯಂತಿಲ್ಲ*
*ಯಾವ ಕುದುರೆಯೂ ಹಸುವಿನಂತಿಲ್ಲ*
*ಈ ಒಂದು ಟೀಕೆ*
*ಅವುಗಳ ನಡುವಿನ ಹೋಲಿಕೆ*

*ವಿವೇಕಕ್ಕೆ ದಾರಿಯೋ – ವಿವರಿಸಲು ಸುಲಭ*
*ಮುಗ್ಗರಿಸು*
*ಮುಗ್ಗರಿಸು*
*ಮತ್ತೆ ಮುಗ್ಗರಿಸು*
*ಆದರೆ*
*ಮುಂದೆ ಹೋದಂತೆ*
*ಕಡಿಮೆ ಮಾಡು*
*ಕಡಿಮೆ*
*ಕಡಿಮೆ*
*ಮತ್ತೂ ಕಡಿಮೆ*

ಪೀಟ್ ಹೈನ್ ಅವರು ಒಬ್ಬ ಮಾನವತಾವಾದಿ. ಎರಡನೆಯ ಜಾಗತಿಕ ಯುದ್ಧದ ಬಳಿಕ ಎಲ್ಲಾ ದೇಶಗಳ ಮೇಧಾವಿಗಳು ಒಟ್ಟುಗೂಡಿ ಜಗತ್ತಿನ ಒಟ್ಟಾರೆ ಸಮಸ್ಯೆಗಳಿಗೆ ಪರಿಹಾರ ತಂದುಕೊಡಲು ಪ್ರಯತ್ನಿಸಬೇಕು ಎಂಬ ಉದ್ದೇಶದಿಂದ ಕಟ್ಟಿದ ಹಲವಾರು ಸಂಘ–ಸಂಸ್ಥೆಗಳಿಗೆ ಸದಸ್ಯರಾಗಿ ಕೆಲಸ ಮಾಡಿದರು. ಇವುಗಳಲ್ಲಿ ವರ್ಲ್ಡ್ ಮೂವ್‌ಮೆಂಟ್ ಫಾರ್ ವರ್ಲ್ಡ್ ಫೆಡರಲ್ ಗವರ್ನ್‌ಮೆಂಟ್, ಲೀಗ್ ಆಫ್ ಟಾಲರೆನ್ಸ್ ಇವುಗಳೂ ಸೇರಿದ್ದವು. ಮಾನವತಾವಾದವನ್ನು ಎತ್ತಿ ಹಿಡಿಯುವ ಸಂಘವಾದ ಹ್ಯೂಮನಿಸ್ಟ್ ಯೂನಿಯನ್ನಿಗೂ ಅವರು ಸದಸ್ಯರಾಗಿದ್ದರು. ಕಲೆ, ಆಟ, ಸಾಹಿತ್ಯ, ಗಣಿತ ಶಾಸ್ತ್ರ, ಮಾನವತಾವಾದದಂತಹ – ಎಲ್ಲ ಕ್ಷೇತ್ರಗಳಿಗೂ ಪೀಟ್ ಹೈನ್ ಅವರ ಕೊಡುಗೆ ಅಪಾರವಾದುದು.

**ಅನುರಾಧ ಜಗಳೂರು**
email : anuradhajl@gmail.com

# ಮನಸಿದ್ದರೆ ನೀರ ನೆಮ್ಮದಿ

**ರೂಪ ಹಾಸನ**

**ಈಗ ಜನರು ನೀರಿನ ಸಂರಕ್ಷಣೆಗಾಗಿ ಸರ್ಕಾರವನ್ನು ಪಕ್ಕಕ್ಕಿಟ್ಟು ತಾವೇ ತಮ್ಮ ನೀರಿನ ಮೂಲಗಳನ್ನು ಹೂಳೆತ್ತಿ ಪುನಶ್ಚೇತನಗೊಳಿಸಿಕೊಳ್ಳುವ ವಾತಾವರಣ ನಿರ್ಮಾಣವಾಗುತ್ತಿದೆ. ಜನಾಂದೋಲನದ ಮೂಲಕ ಜಲ ಮಾದರಿಯನ್ನು ನಿರ್ಮಿಸಲು ಹಾಸನ ಜಿಲ್ಲೆಯಾದ್ಯಂತ ಇಂದು ಅವಿರತ ಪ್ರಯತ್ನಗಳು ನಡೆಯುತ್ತಿರುವುದು ಹಸಿರುಭೂಮಿ ಪ್ರತಿಷ್ಠಾನದ ತಂಡಕ್ಕೆ ಸಂತಸ ತಂದಿದೆ. ಈ ಪ್ರಯತ್ನಗಳು ರಾಜ್ಯಾದ್ಯಂತ ಇನ್ನಷ್ಟು ವ್ಯಾಪಕವಾಗಿ ಪಸರಿಸಿ, ಜನರು ಸ್ವಯಂ ನೀರಿನ ದಾರಿಗಳನ್ನು, ತನ್ಮೂಲಕ ನೆಮ್ಮದಿಯನ್ನು ಕಂಡುಕೊಳ್ಳುವ ಮೂಲಕ ರಾಜ್ಯವನ್ನು ಸಂಪೂರ್ಣ ಬರಮುಕ್ತಗೊಳಿಸ ಬೇಕೆಂಬುದು ನಮ್ಮ ಆಶಯವಾಗಿದೆ.**

ಒಂದು ಮುಸ್ಸಂಜೆ ದೊಡ್ಡಕೊಂಡಗೊಳ ಗ್ರಾಮಪಂಚಾಯಿತಿ ಸದಸ್ಯ, ಕೆರೆ ಕೆಲಸದ ಮೇಲ್ವಿಚಾರಣೆ ಹೊತ್ತಿದ್ದ ಯುವಕ ವಾಸು ವಾಟ್ಸಆಪ್ ಮೂಲಕ ಪುಟ್ಟದೊಂದು ವೀಡಿಯೋ ಕಳಿಸಿದರು. ಅದನ್ನು ನೋಡಿ ನಮಗೆ ಸಂಭ್ರಮಾಶ್ಚರ್ಯ. ಕಳೆದ ಹದಿನೈದು ವರ್ಷಗಳಿಂದ ಒಣಗಿ ನಿಂತಿದ್ದ ಕೆರೆಯ ಮಧ್ಯಭಾಗದಲ್ಲಿ ವೃತ್ತಾಕಾರವಾಗಿ ನೀರು ಉಕ್ಕುತ್ತಿರುವ ದೃಶ್ಯ! ಅದು ಸುತ್ತ ತೆರೆಗಳನ್ನೆಬ್ಬಿಸಿ ಹರಡುತ್ತಿತ್ತು. 'ಹೀಗೇ ಕೆರೆಯಿಂದ ನೀರು ಉಕ್ತಾನೇ ಇದೆ ಮೇಡಂ. ಇನ್ನೂ ೩-೪ ಅಡಿ ಬಗ್ದಿದ್ದೀವಷ್ಟೆ' ಅಂದಾಗ ನಮಗಾದ ಕನಸು ಇಷ್ಟು ಬೇಗ ಸಾಕಾರವಾಗಿದ್ದನ್ನು ನೋಡಿ ನಮ್ಮ ಸಂತೋಷಕ್ಕೆ ಪಾರವೇ ಇರಲಿಲ್ಲ. ೨೦೧೭ರ ಮೇ ೧ರಂದು ಹಾಸನದ ಬಳಿಯ ದೊಡ್ಡಕೊಂಡಗೊಳ ಗ್ರಾಮದ ಮೂರು ಕಲ್ಯಾಣಿಗಳನ್ನು ಪುನಶ್ಚೇತನಗೊಳಿಸಿ, ಅಂದು ಸಂಜೆಯೊಳಗೆ ಕಲ್ಯಾಣಿಗಳಲ್ಲಿ ನೀರು ಕಂಡಾಗ ನಮ್ಮೆಲ್ಲರಲ್ಲೂ ಉತ್ಸಾಹ ನೂರ್ಮಡಿಸಿತ್ತು. ನಂತರ ಅದೇ ಊರಿನ ಕೆರೆಯನ್ನು ಪುನಶ್ಚೇತನಗೊಳಿಸಲು ನಿರ್ಧರಿಸಿ, ವೈಜ್ಞಾನಿಕ ಅಧ್ಯಯನದ ಮೂಲಕ ಅಲ್ಲಿ ನೀರು ಬರುವ ಸಾಧ್ಯತೆಯನ್ನು ಕಂಡುಕೊಂಡೆವು. ಮೇ ಮಧ್ಯಭಾಗದಲ್ಲಿ ಯಂತ್ರಗಳಿಂದ ಕೆಲಸ ಪ್ರಾರಂಭಿಸಿ ೭-೮ ದಿನಗಳಾಗಿತ್ತಷ್ಟೇ... ಭೂಮಿಯಲ್ಲಿ ಹುದುಗಿದ್ದ ಜಲದೇವತೆ ಮೇಲೆದ್ದು ಬಂದಿದ್ದಳು!

ಹಾಸನದಂತಹ ಅರೆಮಲೆನಾಡಿನಲ್ಲೂ ಕಳೆದೆರಡು ಮೂರು ವರ್ಷಗಳಿಂದ ತೀವ್ರ ಬರ ಆವರಿಸಿ ಕುಡಿಯುವ ನೀರಿಗೂ ತತ್ವಾರವಾಗಿರುವಾಗ, ೨೦೧೭ರ ಜನವರಿಯಲ್ಲಿ ಕೇಂದ್ರದ ಬರ ಅಧ್ಯಯನ ತಂಡ ರಾಜ್ಯದ ೧೬ ಜಿಲ್ಲೆಗಳನ್ನು ಶಾಶ್ವತ ಬರಪೀಡಿತ ಜಿಲ್ಲೆಗಳೆಂದು ಘೋಷಿಸಿದ ಪಟ್ಟಿಯಲ್ಲಿ ಹಾಸನ ಜಿಲ್ಲೆಯೂ ಸೇರ್ಪಡೆಗೊಂಡಿದ್ದನ್ನು ಕಂಡಾಗ, ಈ ಜಲಕ್ಷಾಮವನ್ನು ಎದುರಿಸುವುದು ಹೇಗೆಂದು ತಳಮಳಿಸಿದ ನಾವು ಒಂದಿಷ್ಟು ಪರಿಸರ ಕಾಳಜಿಯುಳ್ಳ ಸಮಾನಮನಸ್ಕರು, ನಿರಂತರವಾಗಿ ಚರ್ಚಿಸಲಾರಂಭಿಸಿದ್ದೆವು. ಹಾಗೆ ಪರಿಸರ ಸಂಬಂಧಿತ ಕೆಲಸ, ಚಟುವಟಿಕೆ, ಬರವಣಿಗೆ, ನ್ಯಾಯಾಲಯ ಹೋರಾಟಗಳಲ್ಲಿ ನಮ್ಮಲ್ಲನೇಕರು ವೈಯಕ್ತಿಕ ನೆಲೆಯಲ್ಲಿ, ಸಂಸ್ಥೆಗಳ ಮೂಲಕ ಅಲ್ಲಿಲ್ಲಿ ತೊಡಗಿಕೊಂಡಿದ್ದೆವು. ಆದರೆ ಸಮುದಾಯವನ್ನು ಒಟ್ಟು ಸೇರಿಸಿ ಕೆಲಸ ಮಾಡಲು ಅನೇಕ ಬಾರಿ ಪ್ರಯತ್ನಿಸಿ ವಿಫಲರಾಗಿದ್ದೆವು. ಬರದ ಬೇಗೆ ತಾಳಲಾಗದೆ, ಕೃಷಿಸಾಲ ತೀರಿಸಲಾಗದೆ, ತೆಂಗಿನಮರಗಳು ಬಿಸಿಲಿಗೆ ಸುಟ್ಟು ಕರಕಲಾದಾಗ, ರೈತರು ನಿತ್ಯ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದನ್ನು ಕಾಣುವಾಗ, ನಾವೆಲ್ಲಾ ರೈತರ ಬೆಂಬಲಕ್ಕೆ ಏನೂ ಮಾಡಲಾಗುತ್ತಿಲ್ಲ ಎಂಬ ಅಪರಾಧಿಭಾವದ ಒಳಒತ್ತಡ ರಚನಾತ್ಮಕ ಕೆಲಸಕ್ಕೆ ನಮ್ಮನ್ನು ಒಗ್ಗೂಡಿಸಿತು.

ಕೊಂಚ ಶ್ರಮವಾದರೂ ಕೆರೆ, ಕಲ್ಯಾಣಿಗಳ ಪುನಶ್ಚೇತನ, ಮಳೆ ನೀರಿನ ಸಮರ್ಪಕ ಸಂಗ್ರಹಣೆಗೆ ಅಣಿಯಾಗುವ ಶಾಶ್ವತವಾದ ಕೆಲಸಗಳೇ ಮುಖ್ಯ ಎಂದು ಪರಿಸರವಿಜ್ಞಾನ ಲೇಖಕರಾದ ನಾಗೇಶ್ ಹೆಗಡೆ, ಕೆರೆ ಪುನಶ್ಚೇತನ ತಜ್ಞರಾದ ಶಿವಾನಂದ ಕಳವೆ, ಜಲತಜ್ಞ ಶ್ರೀಪಡ್ರೆ, ಹಿರಿಯ ಭೂ ಮತ್ತು ಅಂತರ್ಜಲ ವಿಜ್ಞಾನಿ ಎಸ್. ಜಿತೇಂದ್ರಕುಮಾರ್ ಮುಂತಾದವರೊಂದಿಗಿನ ನಿರಂತರ ಚರ್ಚೆಯಿಂದ ಮನದಟ್ಟಾಗಿತ್ತು. ಅಧ್ಯಯನದೊಂದಿಗೇ ನಮ್ಮ ಸುತ್ತಮುತ್ತಲ ಕೆರೆ, ಕಟ್ಟೆಗಳು, ಕಲ್ಯಾಣಿಗಳ ಕ್ಷೇತ್ರಾಧ್ಯಯನವೂ ಸಾಗಿತ್ತು. ಹಾಸನ ಜಿಲ್ಲೆಯಾದ್ಯಂತ ಹೊಯ್ಸಳರ ಕಾಲದ ಪಾಳುಬಿದ್ದ, ಒಣಗಿದ್ದ ಅನೇಕ



ಕಲ್ಯಾಣಿಗಳಿರುವುದು, ಅವು ಹೂಳು ತುಂಬಿ ತಿಪ್ಪೆಗುಂಡಿಗಳಾಗಿರುವುದು ತಿಳಿದುಬಂತು. ಆದರೆ ಕೆಲಸ ಪ್ರಾರಂಭಿಸಲು ಬೇಕಾದ ಸಾರ್ವಜನಿಕ ಒತ್ತಡವನ್ನು ನಿರ್ಮಾಣಮಾಡಿದ್ದು ಮಾತ್ರ ಮಹಾರಾಷ್ಟ್ರದಲ್ಲಿ ಅಮೀರ್‌ಖಾನ್ ನೇತೃತ್ವದ ಪಾನಿ ಫೌಂಡೇಶನ್ ಕೆಲಸಗಳ 'ದಿ ಬ್ಯಾಟಲ್ ಅಗೆನೆಸ್ಟ್ ಡ್ರಾಟ್' [The Battle against Drought] ಸಾಕ್ಷ್ಯಚಿತ್ರ. ಅದನ್ನು ಆಸಕ್ತರೆಲ್ಲಾ ಒಗ್ಗೂಡಿ ೨೦೧೭ರ ಏಪ್ರಿಲ್ ೧೯ರಂದು ವೀಕ್ಷಿಸಿದ ನಂತರ, ಅನೇಕ ಸಾಧ್ಯತೆಗಳನ್ನು ಅದು ನಮ್ಮ ಮುಂದೆ ತೆರೆಯಿತು. ಎಲ್ಲರೂ ಸೇರಿ ಮುಂದೇನು ಮಾಡಬಹುದೆಂಬ ಹಲವು ಸುತ್ತಿನ ಚರ್ಚೆಗಳಾದವು. ಕೆರೆ, ಕಲ್ಯಾಣಿಗಳ ಪುನಶ್ಚೇತನ, ಅರಣ್ಯೀಕರಣಗಳನ್ನು ಪ್ರಮುಖವಾಗಿಟ್ಟುಕೊಂಡು ಪರಿಸರ ಸಂಬಂಧಿತ ಚಟುವಟಿಕೆಯಲ್ಲಿ ನಿರಂತರವಾಗಿ ಸಂಘಟಿತವಾಗಿ ತೊಡಗಿಕೊಳ್ಳಲು 'ಹಸಿರುಭೂಮಿ ಪ್ರತಿಷ್ಠಾನ' ಸ್ಥಾಪನೆಯಾಯ್ತು. ಮೇ ೧ರಿಂದ ನೀರಿನ ಕೆಲಸಕ್ಕೆ ಸಂಕಲ್ಪ ತೊಟ್ಟು ನಮ್ಮ ನಮ್ಮಲ್ಲೇ ನಮಗೆ ಸಾಧ್ಯವಿರುವ ಕೆಲಸಗಳನ್ನು ಹಂಚಿಕೊಂಡು, ಸಲಹಾ ಸಮಿತಿ, ತರಬೇತಿ ಸಮಿತಿ, ತಾಂತ್ರಿಕ ಸಮಿತಿ, ಸಾಂಸ್ಕೃತಿಕ ಸಮಿತಿ, ಹಣಕಾಸು ಸಮಿತಿ..... ಇತ್ಯಾದಿ ವಿಭಾಗಿಸಿಕೊಂಡು ಹೆಜ್ಜೆ ಮುಂದಿಟ್ಟೆವು. ಹಾಸನದ ಕ್ರಿಯಾಶೀಲ ಉಪವಿಭಾಗಾಧಿಕಾರಿಗಳಾದ ಡಾ॥ ಎಚ್. ಎಲ್. ನಾಗರಾಜ್ ಅವರು ವಿಶೇಷ ಆಸಕ್ತಿಯಿಂದ ಈ ಕೆಲಸದ ನೇತೃತ್ವ ವಹಿಸಿದ್ದರಿಂದಾಗಿ ಇದೊಂದು ಸರ್ಕಾರಿ ಹಾಗೂ ಸಾರ್ವಜನಿಕ ಸಹಭಾಗಿತ್ವದ ಚಟುವಟಿಕೆಯಾಗಿ ಮುಂದುವರೆಯಿತು. ಶ್ರಮದಾನ ಹಾಗೂ ಯಂತ್ರಗಳ ನೆರವು, ಎರಡೂ ರೀತಿಯಲ್ಲೂ ಕೆಲಸಗಳು ನಿರಂತರವಾಗಿ ಸಾಗಿವೆ.

ಈಗ ನೀರಿನ ಕೆಲಸಗಳು ಹಾಸನದಲ್ಲಿ ಪ್ರಾರಂಭವಾಗಿ ಎರಡು ವರ್ಷಗಳಾದವು. ಹಿಂದಿರುಗಿ ನೋಡಿದರೆ ನಿಜಕ್ಕೂ ಜನರ ಸಂಘಟಿತ ಪ್ರಯತ್ನಕ್ಕೆ ಎಷ್ಟೆಲ್ಲಾ ಶಕ್ತಿಯಿದೆ ಎಂಬುದಕ್ಕೆ ಉದಾಹರಣೆಯಾಗಿ ಜಿಲ್ಲೆಯ ೧೧ ಕೆರೆ, ೪೦ ಕಲ್ಯಾಣಿಗಳು ಹಸಿರುಭೂಮಿ ಪ್ರತಿಷ್ಠಾನದಿಂದ ನೇರವಾಗಿ ಮತ್ತು ಜನಸಮುದಾಯಕ್ಕೆ ಪ್ರೇರಣೆ ನೀಡಿ ಮಾಡಿಸಿದ್ದರಿಂದ ಪುನಶ್ಚೇತನಗೊಂಡು ನಳನಳಿಸುತ್ತಿವೆ. ನಾವು ಮೊದಲ ದಿನ ಪುನಶ್ಚೇತನಕ್ಕೆ ಕೈಗೆತ್ತಿಕೊಂಡ ದೊಡ್ಡಕೊಂಡಗೊಳದ ಒಣಗಿದ್ದ ಮೂರು ಕಲ್ಯಾಣಿಗಳಲ್ಲೂ ಮೊದಲ ದಿನವೇ ನೀರು ಕಾಣಿಸಿಕೊಂಡಿತ್ತು. ಅದೇ ಊರಿನ ಒಣಗಿದ ಒಂದು ಕೆರೆ, ತಿರುಪತಿಹಳ್ಳಿಯ ಒಂದು ಕೆರೆ, ಒಂದು ಗೋಕಟ್ಟೆಗಳನ್ನು ನಾವೊಂದಿಷ್ಟು ದುಡ್ಡು ಹಾಕಿ, ಸಹೃದಯರಿಂದ ಚಂದಾ ಹಣ ಸಂಗ್ರಹಿಸಿ, ಈ ಕೆಲಸಗಳ ಸಹಾಯಾರ್ಥವಾಗಿ 'ರಕ್ತವರ್ಣೆ' ಎಂಬ ನಾಟಕ ಪ್ರದರ್ಶನ ಮಾಡಿ, ಒಂದೂವರೆ ಲಕ್ಷ ರೂಪಾಯಿಗಳನ್ನು ಸಂಗ್ರಹಿಸಿ, ಸುಮಾರು ಎಂಟು ಲಕ್ಷ ರೂ.ಗಳನ್ನು ಖರ್ಚುಮಾಡಿ ಪುನಶ್ಚೇತನ ಮಾಡಿದ್ದು, ಕಳೆದ ಎರಡು ವರ್ಷದ ಬಿರುಬೇಸಗೆಯಲ್ಲೂ ಅದರಲ್ಲಿ ತುಂಬಿರುವ ನೀರು ನಾವು ಮಾಡಿದ ಕೆಲಸಕ್ಕೆ ಧನಾತ್ಮಕ ಮಾದರಿಯಾಗಿದೆ.

ಅವುಗಳ ಸುತ್ತಮುತ್ತಲ ಐದು ಕಿಲೋ ಮೀಟರ್ ವ್ಯಾಪ್ತಿಯ ಒಣಗಿ ನಿಂತಿದ್ದ ಕೊಳವೆ ಬಾವಿಗಳು ತಾವಾಗಿಯೇ ಪುನಶ್ಚೇತನಗೊಂಡಿವೆ! ಕೆರೆ ಕಲ್ಯಾಣಿಗಳಲ್ಲಿ ದಿನವೊಂದಕ್ಕೆ ಸುಮಾರು ೪೦೦-೫೦೦ ಜಾನುವಾರುಗಳು ನೀರು ಕುಡಿಯುತ್ತಿವೆ. ವಿವಿಧ ಪಕ್ಷಿಗಳೂ ಅಲ್ಲಿ ಸಂಸಾರ ಹೂಡಿವೆ. ಗ್ರಾಮಸ್ಥರು ೧೫,೦೦೦ ಮೀನಿನ ಮರಿಗಳನ್ನು ಕೆರೆಗೆ ಬಿಟ್ಟು ಮೀನುಸಾಕಣೆ ಪ್ರಾರಂಭಿಸಿದ್ದಾರೆ. ಈಗಾಗಲೇ ಮೀನು ಮಾರಾಟದಿಂದ ಒಂದೂವರೆ ಲಕ್ಷದಷ್ಟು ಲಾಭವನ್ನೂ ಮಾಡಿಕೊಂಡು ಅದನ್ನು ಊರಿನ ಅಭಿವೃದ್ಧಿಗಾಗಿಯೇ ಬಳಸುತ್ತಿದ್ದಾರೆ. ಗಿಡ, ಗಂಟಿ, ಬಳ್ಳಿ, ಹುಳು, ಹುಪ್ಪಟೆ, ಕಪ್ಪೆ, ಹಾವು, ಮೀನು, ಜಲಚರ, ಪಕ್ಷಿ...... ಹೀಗೆ ಸತ್ತುಹೋಗಿದ್ದ ಇಡೀ ಪರಿಸರ ವ್ಯವಸ್ಥೆ ನಿಧಾನಕ್ಕೆ ಸಮಸ್ಥಿತಿಗೆ ವಾಪಸಾಗಿರುವುದನ್ನು, ಅಲ್ಲಿ ಜೀವಗಳ ಮಿಡಿತವನ್ನು ಕಾಣುವಾಗ ನಿಜಕ್ಕೂ ನಮ್ಮ ಶ್ರಮ ಸಾರ್ಥಕ ಎಂದೆನಿಸುತ್ತದೆ. ಅದೇ ಹೂಳೆತ್ತಿಲ್ಲದ ಅಕ್ಕಪಕ್ಕದ ಹಳ್ಳಿಯ ಕೆರೆ, ಕಲ್ಯಾಣಿಗಳಲ್ಲಿ ಮಳೆ ಬಂದ ನಂತರ ಒಂದೆರಡು ತಿಂಗಳು ನೀರು ನಿಂತಿದ್ದು, ಈಗ ಮತ್ತೆ ಒಣಗಿ ಬರಗುಟ್ಟುತ್ತಿವೆ! ಹೂಳೆತ್ತಿ ಪುನಶ್ಚೇತನಗೊಳಿಸಿದ ಅನೇಕ ಕೆರೆ ಕಲ್ಯಾಣಿಗಳಲ್ಲಿ ಅಂತರ್ಜಲ ಉತ್ಪತ್ತಿಯಾಗಿ, ಮೇಲಿನ ನೀರೂ ಆರದೆ ಜೀವಜಲಕ್ಕೆ ಜೀವ ನೀಡುತ್ತಿರುವುದು ಸಂತಸದ ವಿಷಯ. ಜೊತೆಗೆ, ನಮಗೆ ನೀರಿನ ನಿಜವಾದ ಪಾಠವನ್ನೂ ಇದು ಕಲಿಸುತ್ತಿದೆ.

ನೀರುಕ್ಕಿಸುವ ಈ ಮಾದರಿ ಜಿಲ್ಲೆಯಾದ್ಯಂತ ಪ್ರಚಾರ ಪಡೆದು ತನ್ನಷ್ಟಕ್ಕೇ ಅಲ್ಲಲ್ಲಿ ಕೆರೆ, ಕಲ್ಯಾಣಿಗಳ ಹೂಳೆತ್ತಿ ಪುನಶ್ಚೇತನಗೊಳಿಸಿಕೊಳ್ಳುವ ಕೆಲಸಗಳೂ ವ್ಯಾಪಕವಾಗಿ ನಡೆಯುತ್ತಿವೆ. ಹಲವು ಕಡೆಗಳಲ್ಲಿ ತಕ್ಷಣಕ್ಕೇ ನೀರು ಕಾಣಿಸಿಕೊಂಡಿದೆ. ಕೆಲವದರಲ್ಲಿ, ೨-೩ ದಿನಗಳ ನಂತರ ಅಥವಾ ಮಳೆ ಬಂದ ನಂತರ ನೀರು ತುಂಬಿಕೊಂಡಿದೆ. ಮಳೆಯೇ ಇಲ್ಲದ ಕೆಲವೆಡೆ ನೀರು ಬಂದಿಲ್ಲದಿರುವುದೂ ಇದೆ. ಒಟ್ಟಾರೆ ನೀರಿನ ಮೂಲಗಳನ್ನು ಹೂಳೆತ್ತಿ, ಮುಚ್ಚಿರುವ ಅವುಗಳ ಕಣ್ಣು ತೆಗೆದು ಸ್ವಚ್ಛ ಮಾಡಿಟ್ಟುಕೊಂಡರೆ, ಮಳೆ ಬಂದಾಗ ತುಂಬಿಕೊಳ್ಳುವ ನೀರು ವರ್ಷಗಳು ಕಳೆದರೂ ಆರುವುದಿಲ್ಲ ಎಂಬ ಅರಿವು ನಿಧಾನವಾಗಿ ಜನರಲ್ಲಿ ಮೂಡುತ್ತಿದೆ.

ಕಾಲೇಜಿನ ಎನ್‌ಎಸ್‌ಎಸ್ ಕ್ಯಾಂಪುಗಳನ್ನು ಕಲ್ಯಾಣಿ ಇರುವ ಊರುಗಳನ್ನೇ ಹುಡುಕಿ ಆಯೋಜಿಸುವಂತೆಯೂ ನೋಡಿಕೊಳ್ಳಲಾಗುತ್ತಿದೆ. ತನ್ಮೂಲಕ ಕಾರ್ಯಕರ್ತರ ವಾಸ್ತವ್ಯದ ಒಂದು ವಾರದಲ್ಲಿ ಶ್ರಮದಾನದ ಮೂಲಕವೇ ಮುಚ್ಚಿದ್ದ ಜಲಮೂಲಗಳನ್ನು ಹುಡುಕಿ ಪುನಶ್ಚೇತನಗೊಳಿಸುವ ಕೆಲಸಗಳು ನಡೆಯುತ್ತಿವೆ. ಕೆಲವು ಗ್ರಾಮಸ್ಥರು ತಾವಾಗಿಯೇ, 'ನಮ್ಮೂರಿನ ಕಲ್ಯಾಣಿ ಪುನಶ್ಚೇತನಕ್ಕೆ ಬನ್ನಿ' ಎಂದು ಆಹ್ವಾನಿಸುತ್ತಿದ್ದಾರೆ. ಪ್ರತಿ ವಾರವೂ ಒಂದು ಕಲ್ಯಾಣಿಯನ್ನು ಮೊದಲೇ ಹುಡುಕಿ, ಊರಿನ ಜನರಲ್ಲಿ ಜಾಗೃತಿ ಮೂಡಿಸಿ, ನಾಡಿನಾದ್ಯಂತ ಇರುವ ನೀರಿನ ಸಂಕಷ್ಟ, ನೀರಿನ ಸಂರಕ್ಷಣೆಯ ಮಾದರಿಗಳು, ಹಸಿರುಭೂಮಿ ವತಿಯಿಂದ ನಾವು ಇದುವರೆಗೆ



ಮಾಡಿದ ಕೆಲಸಗಳನ್ನೊಳಗೊಂಡ ಸಾಕ್ಷ್ಯಚಿತ್ರ ಪ್ರದರ್ಶನವನ್ನು ಮೊದಲೇ ಮಾಡುವ ಮೂಲಕ ಗ್ರಾಮಸ್ಥರಲ್ಲಿ ತಮ್ಮ ಹಳ್ಳಿಯಲ್ಲಿ ಬೀಳುವ ಮಳೆ ನೀರನ್ನು ತಮ್ಮ ಊರಲ್ಲೇ ಹಿಡಿದಿಡುವ ಮಹತ್ವದ ಕುರಿತು ಕೆಲಸದ ಮೂಲಕವೇ ಜಾಗೃತಿ ಮೂಡಿಸುತ್ತಾ ಬಂದಿದ್ದೇವೆ. ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಳಿಯವರು ೩-೪ ವರ್ಷಗಳ ಹಿಂದೆ ಅಧ್ಯಯನ ಮಾಡಿ ಹಾಸನ ಜಿಲ್ಲೆಯಾದ್ಯಂತ ಇರುವ ೨೫೩ ಕಲ್ಯಾಣಿಗಳನ್ನು ಗುರುತಿಸಿ ಜಿಲ್ಲಾ ಪಂಚಾಯಿತಿಗೆ ಕೊಟ್ಟಿದ್ದ ವರದಿ ಕೂಡ ನಮಗೆ ದಿಕ್ಸೂಚಿಯಾಗಿದೆ.

ಇದರೊಂದಿಗೆ ಹಾಸನದ ಮೂರು ಮುಖ್ಯ ಕೆರೆಗಳಾದ ಚನ್ನಪಟ್ಟಣ ಕೆರೆ, ಹುಣಸಿನ ಕೆರೆ, ಸತ್ಯಮಂಗಲ ಕೆರೆಗಳನ್ನೂ ವಿವಿಧ ಕಟ್ಟಡ, ದಾರಿ, ಚರಂಡಿ, ಕಾಮಗಾರಿಗಳಿಗಾಗಿ ಒತ್ತುವರಿ ಮಾಡಿಕೊಳ್ಳಲಾಗಿದ್ದು, ಅದರ ಅಳತೆ, ಪುನಶ್ಚೇತನಕ್ಕೆ ಬೇಕಾದ ಅಂದಾಜು ವೆಚ್ಚ, ಬೇಲಿ ನಿರ್ಮಾಣ... ಇತ್ಯಾದಿಗಳನ್ನು ಮಾಡಿಸಿ, ಮಾದರಿಯೆಂಬಂತೆ ಅಭಿವೃದ್ಧಿಪಡಿಸಲು, ಹಿಂದಿನ ಮುಖ್ಯಮಂತ್ರಿಯವರ ಮೇಲೆ ಒತ್ತಡವನ್ನೂ ಹೇರಲಾಗಿತ್ತು. ಕಳೆದ ಬಾರಿಯ ಬಜೆಟ್‌ನಲ್ಲಿ ಈ ಕೆಲಸಗಳಿಗೆ ೨೦ ಕೋಟಿ ರೂ.ಗಳನ್ನು ಮೀಸಲಿರಿಸಲಾಗಿದೆ. ಇದಲ್ಲದೆ ಖಾಸಗಿ ಸಂಘಸಂಸ್ಥೆಯವರೂ, ಆಸ್ಪತ್ರೆಯ ಮುಖ್ಯಸ್ಥರೂ ತಾವೇ ವೈಯಕ್ತಿಕವಾಗಿ ಕೆರೆಗಳನ್ನು ಪುನಶ್ಚೇತನ ಮಾಡಿಸುವುದಾಗಿ ಮುಂದೆ ಬರುತ್ತಿದ್ದಾರೆ. ಅದರಲ್ಲಿ ಪ್ರಮುಖವಾಗಿ ಎಚ್.ಪಿ.ಸಿ.ಎಲ್. ಕಂಪನಿಯವರು ನಗರಕ್ಕೆ ಹೊಂದಿಕೊಂಡಂತಿರುವ ಗವೇನಹಳ್ಳಿ ಕೆರೆಯ ನಾಲ್ಕೆಕರೆಯನ್ನು ತಮ್ಮ ಸಿಎಸ್‌ಆರ್ ನಿಧಿಯಿಂದ ಪುನಶ್ಚೇತನಗೊಳಿಸಿದ್ದಾರೆ. ಹಸಿರುಭೂಮಿ ಪ್ರತಿಷ್ಠಾನದ ಕೆಲಸಗಳಿಂದ ಪ್ರೇರಣೆ ಪಡೆದು ಸಕಲೇಶಪುರದ ಬ್ಯಾಕರವಳ್ಳಿಯ ಕೆರೆಯನ್ನು ಎರಡು ವರ್ಷಗಳ ಹಿಂದೆ ಅಲ್ಲಿನ ಗ್ರಾಮಪಂಚಾಯಿತಿ ಅಧ್ಯಕ್ಷ ಸಂಪೂರ್ಣವಾಗಿ ಪುನಶ್ಚೇತನಗೊಳಿಸಿದ್ದು, ಅದು ಈಗ ನೀರಿನಿಂದ ತುಂಬಿ ನಿಂತಿದೆ. ಹಾಸನ ನಗರಕ್ಕೆ ಹೊಂದಿಕೊಂಡಂತಿರುವ ಚಿಕ್ಕಹೊನ್ನೇನಹಳ್ಳಿ ಕೆರೆಯನ್ನೂ ಪುನಶ್ಚೇತನಗೊಳಿಸುವ ಕಾರ್ಯಕ್ಕೂ ಪ್ರತಿಷ್ಠಾನದ ಪ್ರೇರಣೆಯಿಂದ ಅಲ್ಲಿನ ಆಸಕ್ತ ಜನರ ಗುಂಪು ನಾಂದಿ ಹಾಡಿದೆ. ಹಾಸನ ನಗರದ ಹೃದಯಭಾಗದಲ್ಲಿರುವ ಜವೇನಹಳ್ಳಿ ಕೆರೆಯನ್ನೂ ಪುನಶ್ಚೇತನಗೊಳಿಸಲು ಹಸಿರುಭೂಮಿ ಪ್ರತಿಷ್ಠಾನದ ನಿರಂತರ ಪ್ರೇರಣೆ ಒತ್ತಾಸೆಯಿಂದಾಗಿ ಆ ಬಡಾವಣೆಯ ಜನರು ಒಗ್ಗೂಡಿ ಮಾಡುತ್ತಿರುವ ಕೆಲಸ ತ್ವರಿತಗತಿಯಲ್ಲಿ ನಡೆಯುತ್ತಿದೆ. ಬಿ. ಕಾಟಿಹಳ್ಳಿಕೆರೆ, ಹರಳಹಳ್ಳಿಕೆರೆ,



ಚಿಕ್ಕಟ್ಟೆ,.... ಹೀಗೆ ಹಾಸನ ನಗರಕ್ಕೆ ಹೊಂದಿಕೊಂಡಂತಿರುವ ಮೂರ್‍ನಾಲ್ಕು ಕೆರೆಗಳ ಪುನಶ್ಚೇತನ ಕೆಲಸವನ್ನೂ ಕೈಗೆತ್ತಿಕೊಂಡಿದ್ದೇವೆ. ಈ ಕೆಲಸಕ್ಕಾಗಿ ೧೩-೧-೨೦೧೯ರಂದು ಖ್ಯಾತ ಸಂಗೀತ ವಿದ್ವಾನ್ ಆರ್. ಕೆ. ಪದ್ಮನಾಭ ಅವರ ಶಾಸ್ತ್ರೀಯ ಸಂಗೀತ ಸುಧೆ ಕಾರ್ಯಕ್ರಮವನ್ನೂ ಸಹಾಯಾರ್ಥ ನಿಧಿಯ ಸಂಗ್ರಹಕ್ಕಾಗಿ ಮಾಡಿದ್ದೇವೆ. ಜನರಿಂದ ಪಡೆದ ಪ್ರತಿ ಪೈಸೆಯೂ ದುಂದುವೆಚ್ಚವಾಗದೆ, ನಷ್ಟವಾಗದೆ ಸದ್ವಿನಿಯೋಗವಾಗುವಂತೆ ಅತ್ಯಂತ ಎಚ್ಚರಿಕೆಯಿಂದ ಖರ್ಚುಮಾಡುವುದಷ್ಟೇ ಅಲ್ಲ, ಲೆಕ್ಕಾಧಿಕಾರಿಗಳಿಂದ ಲೆಕ್ಕಪರಿಶೋಧನೆ ಮಾಡಿಸಿ ಇಡುತ್ತಿದ್ದೇವೆ. ನಮ್ಮ ಪ್ರತಿಷ್ಠಾನದಲ್ಲಿ ಅಧಿಕಾರಿಗಳು, ಬರಹಗಾರರು, ವೈದ್ಯರು, ಇಂಜಿನಿಯರ್‌ಗಳು, ಉಪನ್ಯಾಸಕರು, ಶಿಕ್ಷಕರು, ಕಲಾವಿದರು.... ಹೀಗೆ ಜವಾಬ್ದಾರಿಯುತ ನಾಗರಿಕರು ಸೇರಿಕೊಂಡಿದ್ದು, ನಮ್ಮ ಪ್ರತಿ ಹೆಜ್ಜೆಯನ್ನೂ ಅತ್ಯಂತ ಎಚ್ಚರಿಕೆಯಿಂದ ಇರಿಸುತ್ತಿದ್ದೇವೆ.

ಈ ನೀರಿನ ಕೆಲಸಗಳನ್ನು ಪ್ರತೀ ತಾಲ್ಲೂಕಿಗೂ ವಿಸ್ತರಿಸುವ ಪ್ರಯತ್ನಗಳು ನಿರಂತರವಾಗಿ ಸಾಗಿದ್ದು, ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಇಂದಿರಾ ಪ್ರಿಯದರ್ಶಿನಿ ರಾಷ್ಟ್ರೀಯ ಪರಿಸರ ಪ್ರಶಸ್ತಿ ವಿಜೇತ ಹಾಗೂ ನಮ್ಮ ಟ್ರಸ್ಟಿಗಳಲ್ಲಿ ಒಬ್ಬರಾದ ಚ. ನಾ. ಅಶೋಕ್ ಅವರ ನೇತೃತ್ವದಲ್ಲಿ ಮೊದಲಿಂದಲೂ ನಡೆಯುತ್ತ ಬಂದಿದೆ. ಹಾಗೇ ಅರಕಲಗೂಡು ತಾಲ್ಲೂಕಿನಲ್ಲಿ ಖ್ಯಾತ ಸಂಗೀತ ವಿದುಷಿಗಳಾದ ಆರ್. ಕೆ. ಪದ್ಮನಾಭ ಅವರ ನೇತೃತ್ವದಲ್ಲಿ, ಅವರ ಅಭಿಮಾನಿಗಳ ತಂಡದಿಂದ ಕಲ್ಯಾಣಿಗಳ ಪುನಶ್ಚೇತನ ಕೆಲಸಗಳು ನಡೆಯುತ್ತಿವೆ. ಬೇಲೂರು ತಾಲ್ಲೂಕಿನಲ್ಲಿ ಹಳೇಬೀಡು ಹೋಬಳಿಯಲ್ಲಿ ಕಲ್ಯಾಣಿ ಪುನಶ್ಚೇತನ ಕೆಲಸಗಳನ್ನು ಪ್ರಾರಂಭಿಸಲು ಪುಷ್ಪಗಿರಿ ಸ್ವಾಮೀಜಿಯ ನೇತೃತ್ವದಲ್ಲಿ ಹಸಿರುಭೂಮಿ ಪ್ರತಿಷ್ಠಾನ ಜಲ ಕಾರ್ಯಕರ್ತರಿಗೆ ತರಬೇತಿಯನ್ನೂ ನೀಡಿದೆ. ಕೆಲಸಗಳೂ ಪ್ರಾರಂಭವಾಗಿವೆ. ಹಾಸನ ತಾಲ್ಲೂಕಿನ ಕೆಲಸಗಳನ್ನು ಮಾಡಲು ಹಸಿರುಭೂಮಿ ಬಳಗವೆಂಬ ಯುವ ತಂಡವನ್ನು ಭಾನುವಾರಗಳಂದು ನಿಗದಿಯಾದ ಕಲ್ಯಾಣಿಯ ಪುನಶ್ಚೇತನಕ್ಕೆ ಬಸ್ ವ್ಯವಸ್ಥೆ ಮಾಡಿ ಕರೆದೊಯ್ಯಲಾಗುತ್ತಿತ್ತು. ತಿಂಡಿ ವ್ಯವಸ್ಥೆಯನ್ನು ಗ್ರಾಮಸ್ಥರು ಉತ್ಸಾಹದಿಂದ ಮಾಡಿಸುತ್ತಿದ್ದರು. ಈ ವರ್ಷ ಕಲ್ಯಾಣಿ ಪುನಶ್ಚೇತನ ಕೆಲಸ ಇನ್ನಷ್ಟೇ ಪ್ರಾರಂಭಿಸಬೇಕಿದೆ. ಇತರ ಪ್ರತೀ ತಾಲ್ಲೂಕಿನಲ್ಲೂ ಒಂದೋ, ಎರಡೋ ಕಲ್ಯಾಣಿ, ಕೆರೆಗಳು ಪುನಶ್ಚೇತನಗೊಂಡಿದ್ದರೂ, ಅಲ್ಲಿ ಈ ಕೆಲಸಗಳು ಇನ್ನೂ ವ್ಯಾಪಕತೆಯನ್ನು ಪಡೆದಿಲ್ಲ. ಅಲ್ಲಿಯೂ ಈ ಕೆಲಸಗಳನ್ನು ಕೈಗೆತ್ತಿಕೊಳ್ಳುವ ಒಳ್ಳೆಯ ತಂಡವನ್ನು ನಿರ್ಮಾಣಮಾಡುವ ಪ್ರಯತ್ನಗಳು ಪ್ರತಿಷ್ಠಾನದಿಂದ ನಡೆಯುತ್ತಲೇ ಇವೆ.

ಕಾಲೇಜಿನ ಪರಿಸರಪ್ರಿಯ ಯುವಜನರ ನೆರವಿನೊಂದಿಗೆ ದೊಡ್ಡ ಕಟ್ಟಡಗಳ ಮೇಲೆ ಬೀಳುವ ಮಳೆನೀರು ಕೊಯ್ಲು ಕುರಿತು ಬೃಹತ್ ಜಾಗೃತಿ ಜಾಥಾ ಹಮ್ಮಿಕೊಂಡಿದ್ದು, ಅನೇಕ ಶಾಲೆ, ಕಾಲೇಜುಗಳಲ್ಲಿ ಹಸಿರುಭೂಮಿ ವಿದ್ಯಾರ್ಥಿ ಬಳಗವನ್ನು ಹುಟ್ಟುಹಾಕಿದ್ದು, ಹುಣಸಿನಕೆರೆ ಉಳಿಸಿ, ಜಾಗೃತಿ ಆಂದೋಲನ ರೂಪಿಸಿದ್ದು, ಜಿಲ್ಲೆಯಾದ್ಯಂತ 'ಗಿಡ ನೆಡೋಣ, ಉಸಿರು ಉಳಿಸಿಕೊಳ್ಳೋಣ' ಎಂಬ ಆಂದೋಲನವನ್ನು ರೂಪಿಸಿ ಮೊದಲ ವರ್ಷ ೫೦೦೦ ಗಿಡಗಳನ್ನು ನೆಡುವ, ನೆಡಿಸುವ ಕಾರ್ಯವಾಗಿದ್ದು, ಕಳೆದ ವರ್ಷ ೧೦,೦೦೦ ಗಿಡಗಳನ್ನು ನೆಡಿಸುವ ಕೆಲಸ ಜಿಲ್ಲೆಯಾದ್ಯಂತ ವ್ಯಾಪಕವಾಗಿ ನಡೆಯುತ್ತಿದೆ. ಈ ವರ್ಷವೂ ಅದನ್ನು ಸಾವಿರ ಸಂಖ್ಯೆಗಳಲ್ಲಿ ನೆಡುವ ಕೆಲಸವನ್ನು ಯೋಜಿಸಲಾಗಿದೆ. ಗಿಡಗಳನ್ನು ನೆಡುವುದಷ್ಟೇ ಅಲ್ಲ, ನೆಟ್ಟದ್ದನ್ನು ಪ್ರೀತಿಯಿಂದ ನೋಡಿಕೊಳ್ಳುವ ಮತ್ತು ಉಳಿಸಿಕೊಳ್ಳುವ ಕೆಲಸಗಳೂ ಅಷ್ಟೇ ಚೆನ್ನಾಗಿ ನಡೆಯುತ್ತಿವೆ. ಅರಣ್ಯ ಇಲಾಖೆಯ ಜೊತೆಗೂಡಿ ಬೀಜದುಂಡೆ ತಯಾರಿಸಿದ್ದು, ಆಯ್ದ ನೂರು ಮಕ್ಕಳಿಗೆ 'ಮಗು-ಪರಿಸರ ಕಾರ್ಯಾಗಾರ' ಏರ್ಪಡಿಸಿ ಅವರಲ್ಲಿ ಪರಿಸರದ ಬಗ್ಗೆ ಆಳವಾದ ಪ್ರೀತಿ ಹುಟ್ಟಿಸಿದ್ದು, ರಾಜಾಸ್ಥಾನದ ಜಲತಜ್ಞ ರಾಜೇಂದ್ರಸಿಂಗ್ ಅವರನ್ನು ಹಾಸನಕ್ಕೆ ಕರೆಸಿ, ಅವರ ನೀರಿನ ಅನುಭವ ಕಥನ ಕೇಳಿದ್ದು, ದೊಡ್ಡಕೊಂಡಗೊಳವನ್ನು ಮಾದರಿ ಗ್ರಾಮವನ್ನಾಗಿ ರೂಪಿಸಿ, ಅಲ್ಲಿ ರಚನಾತ್ಮಕ ಕೆಲಸವಾಗುವಂತಾಗಲು ಗ್ರಾಮಸ್ವರಾಜ್ ಸಮಿತಿ ಸ್ಥಾಪನೆ ಮಾಡಿ ನಿರಂತರ ಸಾಂಸ್ಕೃತಿಕ ಕಾರ್ಯಕ್ರಮಗಳ, ಆಟೋಟಗಳ, ಇಲಾಖೆಗಳ ಯೋಜನೆ ಕುರಿತ ಮಾಹಿತಿ ಕಾರ್ಯಕ್ರಮ ಆಯೋಜನೆ, ರಾಜ್ಯೋತ್ಸವ, ಗಣರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿ, ಹಿರಿಯ ಅಧಿಕಾರಿಗಳನ್ನು, ಸಾಲುಮರದ ತಿಮ್ಮಕ್ಕನನ್ನು ಕರೆದು ಕಾರ್ಯಕ್ರಮ ರೂಪಿಸಿದ್ದು, ಸ್ವೀಡನ್‌ನ ಗ್ರೆಟ್ಟಾ ಎಂಬ ಬಾಲೆ ಶಾಲೆ ತ್ಯಜಿಸಿ ಪರಿಸರದ ಆಪತ್ತಿನೆಡೆಗೆ ಜಾಗತಿಕ ಗಮನ ಸೆಳೆಯುತ್ತಿರುವ ಆಂದೋಲನಕ್ಕೆ ಪೂರಕವಾಗಿ "ಹವಾಮಾನ ವಿಪತ್ತು ಘೋಷಣೆ" ಜಾಥಾ ನಡೆಸಿದ್ದು, ಸದ್ಯ ಏಪ್ರಿಲ್ ೨೨ರಂದು ವಿಶ್ವ ಭೂದಿನದ ಆಚರಣೆಗಾಗಿ "ವಾಹನಕ್ಕೆ ರಜೆ ಕೊಡೋಣ, ಭೂ ಬಿಸಿ ತಗ್ಗಿಸೋಣ" ಎಂಬ ಬೃಹತ್ ಕಾರ್ಯಕ್ರಮವನ್ನು ನಡೆಸಿದ್ದು...... ಹೀಗೆ ಕಳೆದೆರಡು ವರ್ಷಗಳಿಂದ ನೀರನ್ನು ಕೇಂದ್ರೀಕರಿಸಿ ಪರಿಸರದ ಅನೇಕ ಚಟುವಟಿಕೆಗಳು ಹಾಸನ ಜಿಲ್ಲೆಯಾದ್ಯಂತ ಹಸಿರುಭೂಮಿ ಪ್ರತಿಷ್ಠಾನದಿಂದ ಎಡೆಬಿಡದೆ ನಡೆದಿವೆ. ಮತ್ತಷ್ಟು ವಿಸ್ತರಿಸಿಕೊಂಡು ನಡೆಯುತ್ತಿವೆ. ಇವು ಜನರಲ್ಲಿ ಪರಿಸರದ ಕುರಿತು, ನೀರಿನ ಸಂರಕ್ಷಣೆಯ ಕುರಿತು ವ್ಯಾಪಕವಾಗಿ ಜಾಗೃತಿ ಮೂಡಿಸಲು ಪ್ರೇರಕವಾಗಿವೆ. ಹೀಗಾಗೇ ಇತರ ಸಂಘಸಂಸ್ಥೆಗಳ ಮೂಲಕವೂ ನಿತ್ಯ ಇಂತಹ ಕೆಲಸಗಳ ಸುದ್ದಿ ಪತ್ರಿಕೆಗಳಲ್ಲಿ ಕಾಣುವಂತಾಗಿದೆ.

ನಿಧಾನಕ್ಕೆ ಈಗ ಜನರು ನೀರಿನ ಸಂರಕ್ಷಣೆಗಾಗಿ ಸರ್ಕಾರವನ್ನು ಪಕ್ಕಕ್ಕಿಟ್ಟು ತಾವೇ ತಮ್ಮ ನೀರಿನ ಮೂಲಗಳನ್ನು ಹೂಳೆತ್ತಿ ಪುನಶ್ಚೇತನಗೊಳಿಸಿಕೊಳ್ಳುವ ವಾತಾವರಣ ನಿರ್ಮಾಣವಾಗುತ್ತಿದೆ. ಜನಾಂದೋಲನದ ಮೂಲಕ ಜಲಮಾದರಿಯನ್ನು ನಿರ್ಮಿಸಲು ಹಾಸನ ಜಿಲ್ಲೆಯಾದ್ಯಂತ ಇಂದು ಅವಿರತ ಪ್ರಯತ್ನಗಳು ನಡೆಯುತ್ತಿರುವುದು ಹಸಿರುಭೂಮಿ ಪ್ರತಿಷ್ಠಾನದ ತಂಡಕ್ಕೆ ಸಂತಸ ತಂದಿದೆ. ಈ ಪ್ರಯತ್ನಗಳು ರಾಜ್ಯಾದ್ಯಂತ ಇನ್ನಷ್ಟು ವ್ಯಾಪಕವಾಗಿ ಪಸರಿಸಿ ಜನರು ಸ್ವಯಂ ನೀರಿನ ದಾರಿಗಳನ್ನು, ತನ್ಮೂಲಕ ನೆಮ್ಮದಿಯನ್ನು ಕಂಡುಕೊಳ್ಳುವ ಮೂಲಕ ರಾಜ್ಯವನ್ನು ಸಂಪೂರ್ಣ ಬರಮುಕ್ತಗೊಳಿಸಬೇಕೆಂಬುದು ನಮ್ಮ ಆಶಯವಾಗಿದೆ. ಇದಕ್ಕಾಗಿ ಸರ್ಕಾರದ ವತಿಯಿಂದ ಯೋಜಿಸಲಾಗುತ್ತಿರುವ 'ಜಲಾಮೃತ'-ಸಾಕ್ಷರತಾ ಮಾದರಿಯ ಜಂಟಿ ಆಂದೋಲನಕ್ಕೆ ನಮ್ಮ ಪ್ರತಿಷ್ಠಾನದ ಹುರಿಯಾಳುಗಳು ನೀಲನಕ್ಷೆ ಸಿದ್ಧಪಡಿಸಿ, ಯೋಜನೆಯ ಅನುಷ್ಠಾನದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದಾರೆ. ಒಟ್ಟಾರೆ... ಮನಸಿದ್ದರೆ... ಅದಕ್ಕಾಗಿ ಅವಿರತ ಶ್ರಮ ವಹಿಸಿದರೆ... ಖಂಡಿತಾ ನೀರ ನೆಮ್ಮದಿಯನ್ನು ಕಾಣಲು ಸಾಧ್ಯವಿದೆ.

**ರೂಪ ಹಾಸನ**
'ಪ್ರೇರಣ', ಸೇಂಟ್ ಜೋಸೆಫ್ ಶಾಲೆ ರಸ್ತೆ
ಉತ್ತರ ಬಡಾವಣೆ, ಹಾಸನ – ೫೭೩ ೨೦೧
email : rupahassan@gmail.com

# ಉದ್ಯಮಿಯ ಹೃದಯದಲ್ಲಿತ್ತು ಸಾಂಸ್ಕೃತಿಕ ಮಿಡಿತ

ಆರ್. ಜಿ. ಹಳ್ಳಿ ನಾಗರಾಜ

ಉದ್ಯಮಿ, ವ್ಯಾಪಾರಿಯೊಬ್ಬ ಕಲಾರಾಧಕ, ಕಲಾಪೋಷಕ, ನಾಟಕಕಾರ, ಸಂಸ್ಕೃತಿ ಚಿಂತಕನಾಗಿ ಗುರುತಿಸಿಕೊಳ್ಳುವುದು ಬಹು ಅಪರೂಪ. ಹಣಗಳಿಕೆ, ಅದರಿಂದ ಪಡೆದ ಸ್ಥಾನಮಾನವೇ ತನ್ನ ಗುರಿ ಆಗಿದ್ದಾಗ ಮಿಕ್ಕೆಲ್ಲ ಲೌಕಿಕ ಜ್ಞಾನಗಳು ಉಪೇಕ್ಷೆಗೆ ಒಳಗಾಗುತ್ತವೆ. ದೂರದ ದೇಶದಲ್ಲಿದ್ದು, ಉದ್ಯಮ ಸ್ಥಾಪಿಸಿ, ಅಲ್ಲಿನ ಸ್ಥಳೀಯರಿಗೆ ಕೈತುಂಬಾ ಕೆಲಸ ನೀಡಿ, ತಾನೂ ದುಡಿದು; ಗಳಿಸಿದ್ದ ಲಾಭದಲ್ಲಿ ಒಂದಷ್ಟನ್ನು ಆ ದೇಶದ ಶ್ರಮಿಕ ವರ್ಗಕ್ಕೆ ನೀಡಿ; ತನ್ನ ದೇಶಕ್ಕೆ ಮರಳಿ ಬಂದು, ಇಲ್ಲಿಯೂ ಅಂಥದ್ದೇ ಉದ್ಯಮ / ವ್ಯಾಪಾರ ಶುರು ಮಾಡಿ ಬಾಲ್ಯದಲ್ಲೇ ತನ್ನೊಳಗೆ ಹುದುಗಿದ್ದ ಸಾಂಸ್ಕೃತಿಕ ಬೇರನ್ನು ಹುಡುಕಿ ಹೊರಟು, ಅಲ್ಲಿಯೂ ಯಶಸ್ವಿಯಾಗಿ 'ಸಾಂಸ್ಕೃತಿಕ ಭೀಮ' ಎನಿಸಿದ (ದೇಹಾಕಾರದಲ್ಲೂ – ಧಾರಾಳಿತನದಲ್ಲೂ ತನ್ನನ್ನೇ ಗೇಲಿ ಮಾಡಿಕೊಂಡ 'ಬಿಳಿ ಆನೆ!') ಡಿ. ಕೆ. ಚೌಟ – ೮೨ನೇ ವಯಸ್ಸಿನಲ್ಲಿ ನಮ್ಮನ್ನಗಲಿದ್ದಾರೆ. ಅವರು ಬಿಟ್ಟುಹೋದ ಸಾಹಿತ್ಯ ಕೃತಿಗಳು, ಹರಡಿಹೋದ ಸಾಂಸ್ಕೃತಿಕ ಸಾಧನೆಗಳು, ಮನದಲ್ಲಿ ಅಚ್ಚೊತ್ತಿದ ಚಿಂತನೆಗಳು, ಸಾಧಿಸ ಬೇಕೆಂದು ಹೊರಟ ಸಂಘಟನೆಯ ಶಿಸ್ತು ನಾಲ್ಕು ಕಾಲ ಉಳಿಯುವಂತಿವೆ.

ದಢೂತಿ ದೇಹದ ದರ್ಬೆ ಕೃಷ್ಣಾನಂದ ಚೌಟರನ್ನು ನೋಡಿದರೆ ಥಟ್ಟನೆ ನೆನಪಾಗುತ್ತಿದ್ದುದು ಅವರ ನೀಳ ಬಿಳಿಗಡ್ಡದಂತೆಯೇ ಕಣ್ಣು ಮುಂದೆ ಸುಳಿಯುತ್ತಿದ್ದವರು ಕವಿ ರವೀಂದ್ರನಾಥ ಠಾಗೋರ್ ಇಲ್ಲವೆ ವಿಚಾರವಾದಿ ಪೆರಿಯಾರ್! ಹುಟ್ಟಿ ಬೆಳೆದ ಸುಂದರ ಪರಿಸರದ ಕಾಸರಗೋಡಿನ (ಒಂದು ಕಾಲಕ್ಕೆ ಕರ್ನಾಟಕದ ಭಾಗವೇ ಆಗಿದ್ದ) ನದಿತೀರ, ಸಮುದ್ರ, ತನ್ನ ಪರಿಸರ ತೊರೆದು ಉದ್ಯೋಗ ಅರಸಿ ಹೊರಟಿದ್ದು ಆಫ್ರಿಕಾ ಖಂಡಕ್ಕೆ! ಘಾನಾ ಎಂಬ ದೇಶದಲ್ಲಿ ಬ್ರಿಟಿಷ್ ಇಂಡಿಯಾ ಇನ್ಶೂರೆನ್ಸ್ ಕಂಪನಿಯಲ್ಲಿ ದೊಡ್ಡ ಹುದ್ದೆಯಲ್ಲಿದ್ದು ತಮ್ಮ ಸಂಸಾರವನ್ನು ಅಲ್ಲಿಗೆ ಕರೆದೊಯ್ದಿದ್ದರು. ಅಲ್ಲಿಯೇ ಹುಟ್ಟಿದ ಮಗ, ಮಗಳಿಗೆ ಸ್ಥಳೀಯ ಭಾಷೆ ಜೊತೆ ಇಂಗ್ಲಿಷ್ ಶಿಕ್ಷಣವನ್ನೂ ನೀಡಿದರು. ತಾವಿದ್ದ ಇನ್ಶೂರೆನ್ಸ್ ಕಂಪನಿ ತೊರೆದು ಆಫ್ರಿಕಾದಲ್ಲಿ ಸ್ವಂತ ಉದ್ಯಮ ಸ್ಥಾಪಿಸಿ ಯಶಸ್ವಿಯಾದರು. ಕೈಯಲ್ಲಿ ಸಾಕಷ್ಟು ಹಣ ಸಂಪಾದನೆ ಆದಾಗ ತನ್ನ ಹುಟ್ಟೂರು, ತನ್ನ ದೇಶದ ಸೆಳೆತದಿಂದ ಬಿಡಿಸಿಕೊಳ್ಳಲಾಗಲಿಲ್ಲ. ವಿದೇಶದಿಂದ ವಾಪಾಸು ಬಂದ ನಂತರ ಹಲವು ಗೊಂದಲದಲ್ಲಿ ಸಿಲುಕಿದರು. ಒಂದಷ್ಟು ಕಾಲ ಮುಂಬೈನಲ್ಲಿದ್ದು ಮಕ್ಕಳ ಶಿಕ್ಷಣ ಮುಂದುವರೆಯಲು ಅನುವು ಮಾಡಿಕೊಂಡು ಹುಟ್ಟೂರಿಗೆ ಬಂದು ಕೃಷಿ ಉದ್ಯಮದಲ್ಲಿ ತೊಡಗಿಕೊಂಡರು. ಸ್ವಲ್ಪ ಕಾಲದ ನಂತರ ಬೆಂಗಳೂರಿನಲ್ಲಿ ನೆಲೆನಿಂತು ಮಾಗಡಿ ರಸ್ತೆಯಲ್ಲಿ 'ಸನ್‌ವ್ಯಾಲಿ ಕ್ಲಬ್' ಸ್ಥಾಪಿಸಿದರು. ಅಲ್ಲಿ ಆರಾಮ ಜೀವನ ಕಳೆಯುವ ಬದಲು ತಮ್ಮ ಬಾಲ್ಯದ ಆಸಕ್ತಿಯ ಯಕ್ಷಗಾನ, ನಾಟಕಗಳ ಪರಂಪರೆಯನ್ನು ಮುಂದುವರೆಸಿದರು. ಈ ಸಂದರ್ಭದಲ್ಲೇ ಬೆಂಗಳೂರಿನಲ್ಲಿ ಬಂಟರ ಸಂಘದ ಮೂಲಕ ಮಹತ್ವದ ಸಾಂಸ್ಕೃತಿಕ ಕಾರ್ಯಕ್ರಮ ರೂಪಿಸಿ, ವಿಶಿಷ್ಟ ಹಾಗೂ ವಿಭಿನ್ನ ಸಮ್ಮೇಳನ ಮಾಡಿ ಸೈ ಎನ್ನಿಸಿಕೊಂಡರು. ಆಗ ರಾಜಕೀಯ ಕ್ಷೇತ್ರದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಡಾ॥ ಜೀವರಾಜ ಆಳ್ವ, ರಂಗಕರ್ಮಿ, ನಿರ್ದೇಶಕ ಪ್ರೊ॥ ಸಿಜಿಕೆ ಅವರುಗಳ ಒಡನಾಟ ಶುರುವಾಯಿತು. ತಮ್ಮೊಳಗಿದ್ದ ನಾಟಕ ಕಲೆಗೆ ಅಲ್ಲಿ ವಿಭಿನ್ನ ಆಯಾಮ ಕಂಡುಕೊಂಡರು. ತಮ್ಮ ಕಲಾಸಕ್ತಿಗೆ ಪೂರಕವಾಗಿ ಅನೇಕ ಯಕ್ಷಗಾನ, ನಾಟಕ ತಂಡಗಳಿಗೆ ಪ್ರೋತ್ಸಾಹಕರಾಗಿ ಧನ ಸಹಾಯ ಮಾಡಿ ಅವು ರಂಗದ ಮೇಲೆ ಪ್ರದರ್ಶನಗೊಳ್ಳಲು ಕಾರಣರಾದರು.

ಈ ಸಂದರ್ಭದಲ್ಲಿ ಅವರ ಸನ್‌ವ್ಯಾಲಿಯಲ್ಲಿ ಪ್ರಮುಖ ವ್ಯಕ್ತಿಯೊಬ್ಬರು ಕಾಣಿಸಿಕೊಂಡರು, ಅವರೇ

ಭಾರತದ ಮಾಜಿ ಪ್ರಧಾನಮಂತ್ರಿ ಚಂದ್ರಶೇಖರ ಅವರು. ಚೌಟರ ಕಲಾತ್ಮಕವಾಗಿ ರೂಪಿಸಿದ್ದ ಸನ್‌ವ್ಯಾಲಿಯ ಕುಟೀರದಲ್ಲಿ ವಿಶ್ರಾಂತಿ ಪಡೆದ ಸಂದರ್ಭಕ್ಕೆ ಚಂದ್ರಶೇಖರ್ ಜೊತೆ ಹಲವು ಯುವಕರು ಸಂವಾದದಲ್ಲಿ ತೊಡಗಿದ್ದರು. ಈ ಕ್ಷಣ ಕಲಾವಿದರು, ಸಾಹಿತಿಗಳು, ಚಿಂತಕರು ಅಲ್ಲಿ ಹಾಜರಿದ್ದು, ಸಮಕಾಲೀನ ರಾಜಕೀಯ ಹಾಗೂ ಸಾಂಸ್ಕೃತಿಕ ವಿಚಾರಗಳಲ್ಲಿ ಇಡಬೇಕಾದ ಹೆಜ್ಜೆಗಳ ಕುರಿತು ಚಿಂತನೆ ನಡೆಸಿದರು. ಚಂದ್ರಶೇಖರ್ ಅವರು ತಾವೇ ಹುಟ್ಟುಹಾಕಿದ 'ಭಾರತ ಯಾತ್ರ ಕೇಂದ್ರ'ದ ಮೂಲಕ ದೇಶದ ಹಲವೆಡೆ ಸಾಂಸ್ಕೃತಿಕವಾಗಿ ಮಾಡಬೇಕಾದ ಕೆಲಸಗಳಿಗೆ ಬೆನ್ನೆಲುಬಾಗಿದ್ದರು. ಕರ್ನಾಟಕದ ಹಲವು ಮಿತ್ರರು ಅವರ ಕೇಂದ್ರದ ಜೊತೆ ಕೈ ಜೋಡಿಸಿದಾಗ ಡಿ. ಕೆ. ಚೌಟರೂ ಭಾಗಿಯಾದರು. 'ದೇಶದ ರಾಜಕಾರಣಕ್ಕೆ ಹೊಸ ಮುಖಗಳು ಪ್ರವೇಶ ಮಾಡಿ ಸೈದ್ಧಾಂತಿಕ ರಾಜಕಾರಣಕ್ಕೆ ಬುನಾದಿ ಹಾಕಬೇಕು, ಸಾಂಸ್ಕೃತಿಕವಾಗಿ ಗುರುತಿಸಿಕೊಂಡು ಶ್ರೀಮಂತ ಪರಂಪರೆಯ ವಾರಸುದಾರರಾಗಬೇಕು' ಎಂದು ಕರೆ ಕೊಟ್ಟಿದ್ದು ನನಗಿನ್ನೂ ನೆನಪಿದೆ. ಸನ್‌ವ್ಯಾಲಿಯಲ್ಲಿ ಚೌಟರೇ ಖುದ್ದು ನಿಂತು ಎಲ್ಲರನ್ನೂ ಉಪಚರಿಸಿದ್ದು ಮಹತ್ವದ್ದಾಗಿತ್ತು.

ಬೆಂಗಳೂರಿನ ರಂಗಭೂಮಿಯಲ್ಲಿ ಹೊಸತನ್ನು ಸಾಧಿಸುತ್ತಿದ್ದ ನಿರ್ದೇಶಕ ಸಿಜಿಕೆ ಅವರ ಎಲ್ಲ ಚಟುವಟಿಕೆಗಳಿಗೂ ಚೌಟರು ಬೆಂಬಲಿಗರಾಗಿದ್ದರು. ಸಿಜಿಕೆ ನಿರ್ದೇಶಿಸಿದ ಆ ಕಾಲದ ದುಬಾರಿ ನಾಟಕ 'ಮಹಾಚೈತ್ರ', ನಂತರದ ಹಲವು ನಾಟಕಗಳಿಗೆ ಚೌಟರ ಸಹಾಯಹಸ್ತ ಇತ್ತು. ಸಿಜಿಕೆ ಅವರು ಬೆಂಗಳೂರು ವಿಶ್ವವಿದ್ಯಾಲಯದ ಗಾಂಧಿಭವನದ ನಿರ್ದೇಶಕರಾಗಿದ್ದಾಗ ಗಾಂಧಿಚರಕವನ್ನು ಹೊರ ಆವರಣದಲ್ಲಿ ಎತ್ತರದ ಸ್ಥಳದಲ್ಲಿ ಸ್ಥಾಪಿಸಿದ್ದರು. ಅದರ ಖರ್ಚನ್ನೆಲ್ಲ ಚೌಟರೇ ಕಾಣಿಕೆಯಾಗಿ ನೀಡಿದ್ದರು. ಸಿಜಿಕೆ ಅವರ ಬೃಹತ್ ಆತ್ಮಚರಿತ್ರೆ 'ಕತ್ತಲ ಬೆಳದಿಂಗಳೊಳಗ' ಕೃತಿಗೆ ಇವರೇ ಪ್ರಾಯೋಜನೆ ಮಾಡಿದರು. ಮುಂದೆ ಸಿಜಿಕೆ ಹಾಗೂ ಸ್ನೇಹಿತರು ಹುಟ್ಟುಹಾಕಿದ 'ರಂಗ ನಿರಂತರ' ತಂಡದ ಪೋಷಕರಾಗಿ ಅದನ್ನು ರಾಷ್ಟ್ರದ ಮಟ್ಟದಲ್ಲಿ ಹೆಸರಾಗುವಂತೆ ಮಾಡಿದರು. ಪ್ರೊ॥ ಸಿಜಿಕೆ ಅವರ ಅಕಾಲ ಮರಣದಿಂದ ಚೌಟರ ರಂಗಕನಸಿಗೆ ಹಿನ್ನಡೆಯಾಯಿತು. ಆದರೂ ಅವರು ಕಟ್ಟಿದ ರಂಗ ತಂಡವನ್ನು ಮುನ್ನಡೆಸಲು ಕಂಕಣ ತೊಟ್ಟರು. ಅವರು ಹೊರಟುಹೋದ ಮೇಲೆ ಅವರ ನೆನಪಿಗಾಗಿ ರಾಷ್ಟ್ರಮಟ್ಟದ ನಾಟಕೋತ್ಸವ ಮಾಡಿದರು. ಭಾರತೀಯ ಹಲವು ಭಾಷೆಗಳ ಅತ್ಯುತ್ತಮ ನಾಟಕಗಳು ಬೆಂಗಳೂರಿನಲ್ಲಿ ಪ್ರದರ್ಶನ ಕಾಣಲು, ವಿಚಾರ ಸಂಕಿರಣ, ಬೀದಿ ನಾಟಕಗಳು ನಡೆಯಲು ಕಾರಣರಾದರು. ಪ್ರಾಮಾಣಿಕ ಹಾಗೂ ಶಿಸ್ತುಬದ್ಧ ಯುವ ಪಡೆಯನ್ನು ಚೌಟರು ಈ ಮೂಲಕ ಕಟ್ಟಿ, ರಂಗಭೂಮಿ ಬೆಳೆಯಲು ಕಾರಣರಾದರು.

* * *

ಚೌಟರ ಮಾತೃಭಾಷೆ ತುಳು. ಅವರಿಗೆ ಆ ಭಾಷೆ ಅಳಿಯುವ ಅಂಚಿನಲ್ಲಿದೆ ಎಂಬ ಆತಂಕ. ಅದಕ್ಕಾಗಿ ಅವರು ಕನ್ನಡ – ಇಂಗ್ಲಿಷ್ ಎಷ್ಟೇ ಚೆನ್ನಾಗಿ ಗೊತ್ತಿದ್ದರೂ ತಮ್ಮ ಮಾತೃಭಾಷೆಯಲ್ಲೇ ಸಾಹಿತ್ಯ ರಚನೆಗೆ ತೊಡಗಿದರು. ಹೀಗಾಗಿ ತುಳು ಭಾಷೆಯಲ್ಲಿ ನಾಟಕಗಳು, ಕಾದಂಬರಿಗಳನ್ನು ಬರೆದರು. ಅವುಗಳನ್ನು ಕನ್ನಡಕ್ಕೂ ಭಾಷಾಂತರಿಸುವ ಕೆಲಸ ಮಾಡಿದರು. ಅವರು ತುಳು ಮೇಲಿನ ಪ್ರೀತಿ–ಅಭಿಮಾನವನ್ನು ಕೃತಿಗಳ ಮೂಲಕ ಅಭಿವ್ಯಕ್ತ ಪಡಿಸುತ್ತಿದ್ದುದು 'ಆನಂದಕೃಷ್ಣ' ಎಂಬ ಕಾವ್ಯನಾಮ ದಿಂದ. ಅವರು ತುಳು ಭಾಷೆಯಲ್ಲಿ 'ಪಿಲಿಪತ್ತಿಗಡಸ್', 'ಮೂಜಿ ಮುತ್ತು ಮೂಜಿ ಲೋಕ', 'ಮಿತ್ತ ಬಯಲು ಯಮುನಕ್ಕ', 'ಕರಿಯಜ್ಜೇಲು ಕತೆಗಳು', 'ಪಾಟ್ ಪಜ್ಜಿಲು' ಮೊದಲಾದ ಕೃತಿಗಳನ್ನು ರಚಿಸಿದರು. ಹಲವು ಕೃತಿಗಳು ರಂಗರೂಪಾಂತರವಾಗಿ ರಂಗದ ಮೇಲೂ ಪ್ರದರ್ಶನಗೊಂಡವು.

ಕಾಸರಗೋಡು ಪ್ರದೇಶದ ಕರಾವಳಿ ಸೀಮೆಯ ಜಮೀನ್ದಾರಿ ಪದ್ಧತಿಯನ್ನು ಹೆಣ್ಣಿನ ಆಳ್ವಿಕೆಯ ಮೂಲಕ ಕಟ್ಟಿಕೊಡುವ 'ಮಿತ್ತ ಬಯಲು ಯಮುನಕ್ಕ' ಕನ್ನಡ ರಂಗಭೂಮಿಯಲ್ಲಿ ಬಹು ಯಶಸ್ವಿ ಪ್ರಯೋಗ ಅನ್ನಿಸಿಕೊಂಡಿತು. ತುಳುನಾಡಿನ ಸಾಂಸ್ಕೃತಿಕ ಬೇರುಗಳನ್ನು ಕನ್ನಡದ ನೆಲಕ್ಕೂ ಒಗ್ಗುವಂತೆ ಮಾಡಿದ ಚೌಟರ ಸಾಧನೆಯನ್ನು ಗುರ್ತಿಸಿ ಕರ್ನಾಟಕ ತುಳು ಅಕಾಡೆಮಿ ಗೌರವ ಪ್ರಶಸ್ತಿ ನೀಡಿ ಪುರಸ್ಕರಿಸಿತು. ಚೌಟರ ಬಹುಮುಖ ವ್ಯಕ್ತಿತ್ವವನ್ನು ಪರಿಗಣಿಸಿ ಮಂಗಳೂರು ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ನೀಡಿ ಅಭಿನಂದಿಸಿದೆ. ತುಳು ಭಾಷೆಯ ಬೆಳವಣಿಗೆಗೆ ಚೌಟರ ಕೊಡುಗೆ ಅಪಾರವಾಗಿದ್ದರೂ ಪ್ರತ್ಯೇಕ 'ತುಳುನಾಡು' ಹೋರಾಟಕ್ಕೆ ಅವರು ಎಂದೂ ಬೆಂಬಲ ಸೂಚಿಸಲಿಲ್ಲ. ಪ್ರತ್ಯೇಕ ತುಳುನಾಡಿಗೆ ಅವರ ವಿರೋಧ ಇತ್ತು. ಕರ್ನಾಟಕ ಸರ್ಕಾರವೂ ಇವರ ಸಾಂಸ್ಕೃತಿಕ ಸೇವೆ ಪರಿಗಣಿಸಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ.

ಡಿ. ಕೆ. ಚೌಟರು ಕಲೆಗೆ ಮೊದಲಿನಿಂದಲೂ ಪ್ರೋತ್ಸಾಹ ಕೊಡುತ್ತ ಬಂದವರಾಗಿದ್ದರು. ಏಕವ್ಯಕ್ತಿ ಕಲಾಕೃತಿಗಳ ಪ್ರದರ್ಶನಕ್ಕೆ ವೈಯಕ್ತಿಕ ಬೆಂಬಲ ಕೊಟ್ಟಿದ್ದಲ್ಲದೆ, ಅನೇಕ ಮೌಲಿಕ ಕಲಾಕೃತಿಗಳನ್ನು ಕೊಂಡು ಪ್ರೋತ್ಸಾಹಿಸುತ್ತಿದ್ದರು. ಹೀಗಾಗಿ ಅವರಲ್ಲಿ ಅತ್ಯಮೂಲ್ಯವಾದ ಕಲಾಕೃತಿಗಳ ಸಂಗ್ರಹವಿತ್ತು. ಅವರ ಈ ಕಾಳಜಿಯೇ ಅವರನ್ನು ಪ್ರತಿಷ್ಠಿತ ಕರ್ನಾಟಕ ಚಿತ್ರಕಲಾ ಪರಿಷತ್ತಿಗೆ ಗೌರವ ಕಾರ್ಯದರ್ಶಿ ಯನ್ನಾಗಿಸಲು ಕಾರಣವಾಯಿತು. ಅವರು ಆ ಸಂಸ್ಥೆಗೆ ಹೆಜ್ಜೆ ಇಟ್ಟ ನಂತರ ಪ್ರಾಮಾಣಿಕವಾಗಿ ಕೆಲಸಮಾಡಿ ಭಾರೀ ಬದಲಾವಣೆ ತಂದರು. ಕುಮಾರಕೃಪಾ ರಸ್ತೆಯ ಚಿತ್ರಕಲಾ ಪರಿಷತ್ತು ಮತ್ತಷ್ಟು ಗೌರವ ಕೀರ್ತಿಗೆ ಪಾತ್ರವಾಯಿತು. ಇಪ್ಪತ್ತು ಕೋಟಿಗಳ ವೆಚ್ಚದಲ್ಲಿ ಕೆಂಗೇರಿ ಬಳಿ ಚಿತ್ರಕಲಾ ಪರಿಷತ್ತಿನ ಅತ್ಯಾಧುನಿಕ ಕಟ್ಟಡ ನಿರ್ಮಾಣ ಮಾಡಿದರು. ಭಾರತದಲ್ಲೇ ಪ್ರತಿಷ್ಠೆಯ ಸಂಸ್ಥೆಯಾಗಿ ಇದು ಬೆಳೆದುನಿಂತಿದೆ.

ದೇಶದಲ್ಲಿ ವಿಶಿಷ್ಟವಾಗಿ ಹೆಸರು ಪಡೆದ 'ಚಿತ್ರಸಂತೆ'ಯ ಪರಿಕಲ್ಪನೆ ಹುಟ್ಟುಹಾಕಿದವರೇ ಚೌಟರು. ಅವರ ದೂರದೃಷ್ಟಿಯ ಈ ಆಲೋಚನೆ ಯಿಂದ ಹಿರಿ–ಕಿರಿ ಚಿತ್ರಕಲಾವಿದರಿಗೆ ಕಲಾಕೃತಿಗಳ ಮಾರುಕಟ್ಟೆಯನ್ನು ನಿರ್ಮಿಸಿದರು. ದೇಶದ ಕಲಾವಿದರೆಲ್ಲ ಒಂದೆಡೆ ಸೇರಿ ತಮ್ಮ ಕಲಾಕೃತಿಗಳ ಬಗ್ಗೆ ಚರ್ಚಿಸುವ ಅವಕಾಶ ಕಲ್ಪಿಸಿದರು.

ಚೌಟರು ಸಾಹಿತ್ಯ – ಕಲೆಯ ಅಭಿಮಾನಿ, ಕಲಾಪೋಷಕರು ಮಾತ್ರ ಅಲ್ಲ, ಅವರು ಸ್ವತಃ ಕೃಷಿಕರೂ ಆಗಿದ್ದರು. ಕಾಸರಗೋಡಿನ ತಮ್ಮ ಹುಟ್ಟೂರಿನ ತೋಟದಲ್ಲಿ, ಒಡಹುಟ್ಟಿದ ಸಹೋದರರ ಜೊತೆಗೂಡಿ ತೆಂಗು ಬೆಳೆಗೆ ಸಂಬಂಧಿಸಿದ ರಾಷ್ಟ್ರೀಯ ವಿಚಾರ ಸಂಕಿರಣ ಏರ್ಪಡಿಸಿ, ಅದಕ್ಕಾಗಿ ರಾಷ್ಟ್ರ ಮಟ್ಟದ ತಜ್ಞರನ್ನು ಕರೆಯಿಸಿ ಚರ್ಚೆ ಮಾಡಿದ್ದರು. ಒಮ್ಮೆ ದೆಹಲಿಯಿಂದ ಆಗಮಿಸಿದ್ದ ಕೃಷಿತಜ್ಞ ದೇವಿಂದರ್ ಶರ್ಮ ಅವರನ್ನು ಬೆಂಗಳೂರು ವಿಮಾನ ನಿಲ್ದಾಣದಿಂದ ಕಾಸರಗೋಡಿನವರೆಗೆ ನಾನೇ ಕಾರಿನಲ್ಲಿ ಕರೆದೊಯ್ದಿದ್ದೆ.

ಚೌಟರು ಶಿಸ್ತಿನ ವ್ಯಕ್ತಿ. ಸಮಯಕ್ಕೆ ಮಹತ್ವ ಕೊಟ್ಟು ಪ್ರಾಮಾಣಿಕವಾಗಿ ಕೆಲಸ ಮಾಡಿದವರು. ಕಷ್ಟದಲ್ಲಿದ್ದ ಕಲಾವಿದರು, ಸಾಹಿತಿಗಳು, ಕಲಾಸಂಸ್ಥೆ ಗಳಿಗೆ ಆರ್ಥಿಕ ಸಹಾಯ ನೀಡಿದ್ದರು. ಯುವಪೀಳಿಗೆ ಬಗ್ಗೆ ಅವರಿಗೆ ಅಪಾರ ಗೌರವ, ಪ್ರೀತಿ.

ಚೌಟರ ಇಬ್ಬರು ಮಕ್ಕಳು ವಿಶಿಷ್ಟವಾಗಿ ಗುರುತಿಸಿ ಕೊಂಡವರೇ ಆಗಿದ್ದಾರೆ. ಭಾರತೀಯ ಚಿತ್ರರಂಗದಲ್ಲಿ ಅವರ ಮಗ ಸಂದೀಪ ಚೌಟ ಸಂಗೀತ ಸಂಯೋಜಕ ರಾಗಿ ಹೆಸರು ಮಾಡಿದ್ದರೆ; ಮಗಳು ಪ್ರಜ್ಞಾ ಚೌಟ ತಾನೇ ಆಯ್ಕೆ ಮಾಡಿಕೊಂಡ ಆನೆ ಸಾಕಣೆ ಹಾಗೂ ಅವುಗಳ ಸಂಶೋಧನೆಯಲ್ಲಿ ತೊಡಗಿದ್ದಾಳೆ. ಚೌಟರು ಬಿಟ್ಟುಹೋದ ಸಾಂಸ್ಕೃತಿಕ ನಿರ್ವಾತವನ್ನು ಯಾರೂ ಸದ್ಯ ತುಂಬುವುದು ಕಷ್ಟ. ಚೌಟರ ಆದರ್ಶ ಹಾಗೂ ಪ್ರಾಮಾಣಿಕ ಕೆಲಸಗಳು ಸದಾ ಅವರನ್ನು ಸ್ಮರಿಸುವಂತೆ ಮಾಡುತ್ತಿವೆ.

**ಆರ್. ಜಿ. ಹಳ್ಳಿ ನಾಗರಾಜ**
# ೧೦/೧೧, 'ಮಾತಾ ತನಿಷಾ ಅಪಾರ್ಟ್‌ಮೆಂಟ್'
೪ನೇ ಕ್ರಾಸ್, ಕೆ. ಎಸ್. ಆರ್. ಟಿ. ಸಿ. ಲೇಔಟ್
ಚಿಕ್ಕಲ್ಲಸಂದ್ರ, ಬೆಂಗಳೂರು – ೫೬೦ ೦೬೧
email : rghalli7@gmail.com

**ಅಂತರ**

ಬೆಳಿಗ್ಗೆ – ಆರರವರೆಗೆ
ಹಕ್ಕಿ ಕೂಗು
ಜನರನ್ನೇಳಿಸಲೆ?
ಮತ್ತೆ ಎಲೆ ಮರೆಯಲೀ ಹಾಡು
ತನ್ನಳಲ ಮರೆಯಲೇ?

**ವ. ಉಮೇಶ್ ಕಾರಂತ**
ಮಂಗಳೂರು – ೫೭೫ ೦೦೧

# ಸಾಂಟಾ ತಾತ ಬರುವವರೆಗೂ...

ಮನೆಯಂಗಳದಲ್ಲಿ ಸಂಜೆಗತ್ತಲಿನ ಕತ್ತಲನ್ನು ದೀಪಗಳ ಬೆಳಗು ಆವರಿಸತೊಡಗಿತು. ಬೆಂಕಿಯ ಭಯದಿಂದ ಪಟಾಕಿ ಹಿಡಿಯಲು ಹೆದರುತ್ತಿದ್ದ ಮಕ್ಕಳ ಕೈಹಿಡಿದು ಪೋಷಕರು ಸುರುಸುರಬತ್ತಿ, ಹೂಕುಂಡ ವನ್ನು ಹಚ್ಚಿಸುತ್ತಿದ್ದ ದೃಶ್ಯಗಳು ಸಾಮಾನ್ಯವಾಗಿದ್ದವು. ಮತ್ತೊಂದೆಡೆ ಮಕ್ಕಳ ಮಿನಿಗುಂಪೊಂದು ಹೆಮ್ಮೆಯಿಂದ ಬೀಗುತ್ತ ಲಕ್ಷ್ಮೀಪಟಾಕಿ, ಆಟಂಬಾಂಬ್, ರಾಕೆಟ್ ಗಳನ್ನು ಶರವೇಗದಿಂದ ನಾಮುಂದು-ತಾಮುಂದು ಎನ್ನುತ್ತ ಅಕ್ಕಪಕ್ಕದ ಪೋಷಕರಿಂದ ಬೈಗುಳವನ್ನು ಆಶೀರ್ವಾದವೆಂದು ತಿಳಿದು, ಕೈಯಲ್ಲಿ ಊದುಬತ್ತಿ ಯನ್ನು ಹಿಡಿದು ಪಟಾಕಿ ಹೊರಡಿಸುತ್ತಿದ್ದ ಢಂ-ಢಂ ಶಬ್ದಕ್ಕೆ ತಮ್ಮ ಕೇಕೆಯನ್ನು ಜೊತೆಗೂಡಿಸಿ ದೀಪಗಳ ಹಬ್ಬಕ್ಕೆ ವಿಶೇಷ ಮೆರುಗನ್ನು ತಂದುಕೊಡುತ್ತಿದ್ದರು. ಈ ಸಂಭ್ರಮಕ್ಕೆ ಹೊರತಾಗಿತ್ತು ಚಂದ್ರಣ್ಣನ ಮನೆಯಂಗಳ. ಮನೆಯ ಒಳಗೂ-ಹೊರಗೂ ಬಡತನವೆಂಬ ಕತ್ತಲು ಬೆಳಕಿನ ಒಂದು ಕಿಡಿಯನ್ನೂ ಬಿಡದೆ ಭದ್ರಕೋಟೆಯನ್ನು ನಿರ್ಮಿಸಿತ್ತು.

ಚಂದ್ರಣ್ಣ ಮೂವರು ಹೆಣ್ಣುಮಕ್ಕಳ ತಂದೆ. ಹೆಂಡತಿ ಗೌರಮ್ಮ ಒಂದು ಕಾಲದಲ್ಲಿ ಊರಿನಲ್ಲಿ 'ಅನ್ನಪೂರ್ಣೇಶ್ವರಿ' ಎಂದೆ ಹೆಸರುವಾಸಿಯಾಗಿದ್ದಳು. ಮನೆಗೆ ಯಾರೆ ಅಪರಿಚಿತರು ಬಂದರೂ ಗೌರಮ್ಮನ ಕೈರುಚಿ ನೋಡದೆ ಹೋಗುತ್ತಿರಲಿಲ್ಲ. ವ್ಯವಸಾಯವೇ ಮನೆಗೆ ಮೂಲಾಧಾರವಾಗಿತ್ತು. ಕಳೆದ ಮೂರು ವರ್ಷಗಳು ಮಳೆಯಿಲ್ಲದೆ, ದಟ್ಟ ದಾರಿದ್ರ್ಯದ ಸ್ಥಿತಿಗೆ ಬಂದು ನಿಂತಿತ್ತು ಸಂಸಾರ. ಮಾಡಿದ ಸಾಲಕ್ಕೆ ಬಡ್ಡಿ, ಚಕ್ರಬಡ್ಡಿಯೆಂದು ಇದ್ದ ಭೂಮಿಯನ್ನು ಕಳೆದು ಕೊಂಡರು. ಬೇರೆಯವರ ಹೊಲದಲ್ಲಿ ಕೂಲಿ ಮಾಡಿ ಹಣ ಬಂದರೆ ಅಂದು ಊಟ, ಇಲ್ಲವಾದ್ದಲ್ಲಿ ಹೊಟ್ಟೆಗೆ ತಣ್ಣೀರ ಬಟ್ಟೆ. ಇದರ ನಡುವೆಯೇ ಗಾಯದ ಮೇಲೆ ಬರೆ ಎಳೆದಂತೆ ಚಂದ್ರಣ್ಣನ ದೇಹಸ್ಥಿತಿ ದಿನದಿನಕ್ಕೆ ಕ್ಷೀಣಿಸುತ್ತಾ ಬರತೊಡಗಿತು. ತಾಲ್ಲೋಕಿನ ಆಸ್ಪತ್ರೆಗೆ ಕೊಂಡೊಯ್ದು ಮನೆಗೆ ಹಿಂತಿರುಗಿ ಬರುವುದರೊಳಗೆ ಊರ ತುಂಬ ಸಾಲ.

ದೀಪದ ಹಬ್ಬವೆಂದರೆ ಮನೆಯಲ್ಲಿ ಎಲ್ಲಿಲ್ಲದ ಖುಷಿ. ಮೂವರು ಮಕ್ಕಳು ಮನೆತುಂಬ ಪುಟ್ಟ ಪುಟ್ಟ ಹೆಜ್ಜೆಗಳನ್ನಿಡುತ್ತಾ ಮನೆತುಂಬ ದೀಪವನ್ನು ಹಚ್ಚಿ ಸಂಜೆ ಅಂಗಳದಲ್ಲಿ ಪಟಾಕಿ ಹಚ್ಚುವುದನ್ನು ನೋಡಿದರೆ ಚಂದ್ರಣ್ಣ ಮತ್ತು ಗೌರಮ್ಮರಿಗೆ ಕಷ್ಟಗಳೆಲ್ಲವು ಒಮ್ಮೆಲೆ ಮರೆತು ಹೋಗಿ ಕಣ್ಣು ಆನಂದದಿಂದ ಹನಿಗೂಡು ತ್ತಿದ್ದವು. ಆದರೆ ಈ ಸಲ ಹಬ್ಬವನ್ನಾಚರಿಸಲು ಕೈಯಲ್ಲಿ ಒಂದು ಬಿಡಿಗಾಸಿಲ್ಲ. ಹಣಕ್ಕಾಗಿ ಗೌರಮ್ಮ ಬೆಳಗ್ಗೆಯಿಂದಲೂ ಅಲೆದು ಕಾಲು ಸವೆಸಿದ್ದಳು. ಮಕ್ಕಳಿಗೆ ಸಂಜೆ ಪಟಾಕಿ ತಂದು ಕೊಡುವುದಾಗಿ ಹೇಳಿಬಂದಿದ್ದಳು. ಮಕ್ಕಳ ಮುಖವನ್ನು ನೋಡಿ ಯಾರಾದರೂ ಸಾಲಕೊಡಬಹುದೆಂದು ಅವಳು ಲೆಕ್ಕಿಸಿದ್ದಳು. ಬಡ್ಡಿ ವ್ಯಾಪಾರದ ಮಜ್ಜಿಗೆ ಮೇಷ್ಟ್ರು, ಬಟ್ಟೆ ವ್ಯಾಪಾರಿ ಸೇಟು, ಊರಿನ ಗೌಡ ಎಲ್ಲರೂ ಹಿಂದಿನ ಸಾಲವನ್ನು ಇನ್ನೂ ತೀರಿಸಿಲ್ಲವೆಂದು ಕೈಚೆಲ್ಲಿದ್ದರಿಂದ ಮನೆಗೆ ಬರಿಗೈಯಲ್ಲಿ ಹಿಂತಿರುಗುವಂತಾಯಿತು. ಅಸಹಾಯಕಳಾಗಿ ಮನೆಗೆ ಬಂದು ಹಾಸಿಗೆ ಹಿಡಿದು ಮಲಗಿದ್ದ ಗಂಡನ ಬಳಿ ಕುಳಿತಳು.

ಹಿರಿಯ ಮಗಳಾದ ಪೂರ್ಣಿಯೊಂದಿಗೆ ಆಟವಾಡುತ್ತಿದ್ದ ನಳಿ ಮತ್ತು ಕಿರಿಯವಳಾದ ಲಕ್ಷ್ಮೀ, ಬೆಲ್ಲದುಂಡೆಯನ್ನು ಕಂಡು, ಸುತ್ತುವರಿಯುವ ಇರುವೆಗಳಂತೆ ಮೂವರು ಅಮ್ಮನನ್ನು ಕಂಡು ಒಮ್ಮೇಲೆ ಬಂದು ಅಪ್ಪಿದರು.

ಅಮ್ಮನ ಗಲ್ಲವನ್ನು ಹಿಡಿದು ಲಕ್ಷ್ಮೀ, 'ಅಮ್ಮ, ನನಗೆ ಸುಸುರಬತ್ತಿ, ಭೂಚಕ್ರ ತಂದ್ಯಾ?' ಎಂದಳು.

ನಳಿ ಅಮ್ಮನ ಕೈಬಳೆಯನ್ನು ಮೇಲಕ್ಕೆ ಕೆಳಕ್ಕೆ ಏರಿಸುತ್ತಾ, 'ಅಮ್ಮ ನನಗೂ, ಪೂರ್ಣಿಅಕ್ಕಳಿಗೆ ಹೂಕುಂಡ ತಂದೆ ತಾನೆ?' ಎಂದಳು.

ತಾಯಿ ಮಕ್ಕಳ ಕಣ್ಣೋಟವನ್ನು ಎದುರಿಸ ಲಾಗದೆ, ಉತ್ತರಕ್ಕಾಗಿ ಕಣ್ಣೀರೊಂದಿಗೆ ಗಂಡನ ಕಡೆ ನೋಡಿದಳು. ಗಂಡನಿಂದಲೂ ಕಣ್ಣೀರೇ ಉತ್ತರವಾಗಿ ಬಂದಿತು. ಉತ್ತರಕ್ಕಾಗಿ ಕಾಯುತ್ತಿದ್ದ ನಳಿ ತಲೆಯನ್ನೆತ್ತಿ

**ನಿರ್ಮಲ ಹೆಚ್. ಎಲ್.**





ಅಮ್ಮ ಅಳುತ್ತಿದ್ದನ್ನು ನೋಡಿ 'ಅಮ್ಮ, ಯಾಕಮ್ಮ ಅಳುತ್ತಿದ್ದೀಯಾ?' ಎಂದಳು.

ಮೌನವಾಗಿ ನೋಡುತ್ತಿದ್ದ, ಮನೆಯ ಕಷ್ಟವನ್ನು ಅರಿಯುವ ವಯಸ್ಸಲ್ಲದಿದ್ದರೂ, ಕೊಂಚ ಅರಿತ ಪೂರ್ಣಿ ತಂಗಿಯರಿಬ್ಬರನ್ನು ತನ್ನ ಬಳಿ ಕರೆದು 'ಅಂಗಡಿಯಲ್ಲಿ ಪಟಾಕಿ ಖಾಲಿಯಾಗಿವೆಯಂತೆ, ಅದಕ್ಕೆ ಅಮ್ಮ ಅಳುತ್ತಿದ್ದಾಳೆ'. ಒಂದು ಗುಟ್ಟು, ಎಲ್ಲಿ ನಿಮ್ಮ ಕಿವಿ ಕೊಡಿ ಎಂದು ಅವರ ಕಿವಿಗಳಿಗೆ ಗುಟ್ಟಾಗಿ ಹೇಳುವಂತೆ, 'ನಾವು ಇವತ್ತೆ ಪಟಾಕಿ ಹೊಡೆದರೆ ಯಾರಿಗೂ ಶಬ್ದ ಕೇಳಿಸೋದೇ ಇಲ್ಲ. ನಮಗೂ ಕೇಳಿಸಲ್ಲ, ಇವತ್ತು ಎಲ್ಲಾರು ಹೊಡೀಲಿ ನಾವು ಬೇರೆಯದಿನ ಹೊಡೆಯೋಣ' ಎಂದಳು.

ನಳಿ 'ಹೌದ ಪೂರ್ಣಿಅಕ್ಕ, ಸರೀ ಬಿಡು' ಎಂದು ಅಕ್ಕಹೇಳಿದ್ದು ಸರಿ ಎನಿಸಿ ಸುಮ್ಮನಾದಳು.

ಕಣ್ಣಗಲಿಸಿ ಪೂರ್ಣಿಯನ್ನೆ ನೋಡುತ್ತಿದ್ದ ಲಕ್ಷ್ಮೀ, 'ಅಕ್ಕ ನಾವು ಮನೆ ಒಳಗೆ ಹೊಡೆದರೆ! ಶಬ್ದ ಜೋರಾಗಿ ಕೇಳಿಸುತ್ತೆ ತಾನೆ?' ಎಂದಳು.

ತಕ್ಷಣವೇ ನಳಿ ಗೊಳ್ ಎಂದು ನಕ್ಕು 'ನೋಡು ಪೂರ್ಣಿಅಕ್ಕ, ಇವಳು ಹೇಳೋದು, ಮನೆ ಒಳಗೆ ಪಟಾಕಿ ಹಚ್ಚಿದರೆ ಮನೆಯೆಲ್ಲಾ ಬೆಂಕಿಯಾಗುತ್ತೆ ತಾನೆ? ಆಮೇಲೆ ನಾವೆಲ್ಲಾ ಮಲಗೋದು ಎಲ್ಲಿ?'

ಲಕ್ಷ್ಮೀ : ಪೂರ್ಣಿಅಕ್ಕ ಶಾಲೆಯಲ್ಲಿ ಮಿಸ್ ಹೇಳಿದರು, ಹಬ್ಬಕ್ಕೆ ಸಾಂಟಾ ತಾತ ಬರುತ್ತಾನಂತೆ, ಅವನು ಮಕ್ಕಳಿಗೆ ಬೇಕಾದ್ದನ್ನ ಕೊಡುತ್ತಾನೆ ಅಂತ. ಅವನು ಇವತ್ತು ನಮ್ಮ ಮನೆಗೆ ಬಂದು ಪಟಾಕಿ ಕೊಟ್ಟರೆ!

ನಳಿ : ಅಯ್ಯೋ ಪೆದ್ದಿ, ಸಾಂಟಾ ತಾತ ಬರೋದು ಕ್ರಿಸ್‌ಮಸ್‌ಗೆ, ದೀಪಾವಳಿಗೆ ಅಲ್ಲಾ, ಅಲ್ವ ಅಕ್ಕಾ? ಎಂದಳು.

ಲಕ್ಷ್ಮೀ : ಯಾಕೆ ತಾತ ದೀಪಾವಳಿಗೆ ಬರೊಲ್ಲ? ಕ್ರಿಸ್‌ಮಸ್ಸಿಗೆ ಬರುತ್ತಾನೆ?

ಪೂರ್ಣಿ ಹೇಳುವುದೇನೆಂದು ತಿಳಿಯದೆ ಅಮ್ಮನ ಮುಖವನ್ನು ನೋಡಿದಳು.

ಮಕ್ಕಳ ಮಾತುಗಳನ್ನು ಆಲಿಸುತ್ತಿದ್ದ ತಾಯಿ ಮಕ್ಕಳ ಮಾತಿಗೆ ಮುಗುಳ್‌ನಕ್ಕು, ಮೂವರನ್ನು ತನ್ನ ಬಳಿ ಕರೆದು ತನ್ನ ಮಡಿಲಲ್ಲಿ ಮಲಗಿಸಿಕೊಂಡು, ಲಕ್ಷ್ಮೀಯ ತಲೆಸವರುತ್ತಾ, 'ಸಾಂಟಾ ತಾತ ದೀಪಾವಳಿಗೂ ಬರುತ್ತಾನಮ್ಮ ಆದರೆ, ನಿಮ್ಮೊಂತ ಎಷ್ಟೋ ಮಕ್ಕಳಿದ್ದಾರಲ್ಲ, ಅವರಿಗೂ ಪಟಾಕಿ ಕೊಡಬೇಕಲ್ಲ ಅಲ್ಲಿಗೆ ಹೋಗಿದ್ದಾನೆ.

ನಳಿ : ಎಲ್ಲಾ ಮಕ್ಕಳಿಗೂ ಒಬ್ಬ ಸಾಂಟಾ ತಾತನೇನಮ್ಮಾ ಇರೋದು?

ಅಮ್ಮ : ಇಲ್ಲಮ್ಮ ಇದ್ದಾರೆ, ತಾತನಂತೆಯೇ ಕೆಂಪುಟೋಪಿ ತೊಟ್ಟು, ಬಿಳಿ ಗಡ್ಡಧರಿಸಿ ಕೆಲವರಿದ್ದಾರೆ, ಆದರೆ ನಿಮ್ಮಂತಹ ಮಕ್ಕಳ ಸಂಖ್ಯೆ ಜಾಸ್ತಿ.

ಲಕ್ಷ್ಮೀ : ಜಾಸ್ತಿ ಅಂದರೆ ಎಷ್ಟು?

ನಳಿ : ಆಕಾಶದಲ್ಲಿರೋ ನಕ್ಷತ್ರಗಳಷ್ಟಾ ಅಮ್ಮಾ?

ಅಮ್ಮ : ಹೌದು ಪುಟ್ಟ.

ಲಕ್ಷ್ಮೀ : ಹಾಗಾದರೆ ನಕ್ಷತ್ರಗಳಷ್ಟು ಸಾಂಟಾ ತಾತಗಳು ಬೇಕಲ್ಲವೆ?

ನಳಿ : ಮತ್ತೆ?

ಲಕ್ಷ್ಮೀ : ಹಾಗಾದರೆ ನಾನು ದೊಡ್ಡವಳಾದ ಮೇಲೆ ಸಾಂಟಾ ತಾತನಾಗ್ತೀನಿ? ಮಕ್ಕಳಿಗೆಲ್ಲಾ ಬೇಕಾದಷ್ಟು ಪಟಾಕಿಗಳನ್ನು ಕೊಡಬಹುದು.

ನಳಿ : ನಾನಂತು ಸಾಂಟಾ ತಾತನಾಗಲ್ಲಪ್ಪಾ!

ಪೂರ್ಣಿ : ಯಾಕೆ?

ನಳಿ : ತಾತ ಒಂದೆ ದಿನ ಬರುತ್ತಾನಂತೆ, ಒಂದೇ ಉಡುಗೊರೆ ಕೊಡುತ್ತಾನಂತೆ? ಅಷ್ಟೆ. ನಮಗೆ ದಿನವೂ ಏನೇನೋ ಬೇಕಲ್ಲಾ. ಅಮ್ಮನಿಗೆ ದಿನವು ಅಕ್ಕಿ ಬೇಕು ನಮಗೆ ಊಟ ಬಡಿಸಲು, ಅಪ್ಪನಿಗೆ ದಿನಾಲೂ ಔಷಧಿ ಬೇಕು ಕಾಯಿಲೆ ವಾಸಿಯಾಗಲು, ದಿನವೂ ಒಳ್ಳೆ ಬಟ್ಟೆ ಬೇಡವೇ ಶಾಲೆಗ್ಹೋಗಲು.

ಪೂರ್ಣಿ ಮುಗುಳ್ನಕ್ಕು, ಸರಿ ಬನ್ನಿ ಸಾಂಟಾ ತಾತ ಬರುವವರೆಗೂ ನಾನು ನಿಮಗೆ ಕಾಗದದ ಪಟಾಕಿ ಮಾಡೋದ್ದನ್ನು ಹೇಳಿಕೊಡ್ತೀನಿ.

ನಳಿ : 'ಅಕ್ಕ, ನಿನಗೆ ಭೂಚಕ್ರ ಮಾಡೋಕೆ ಬರುತ್ತಾ?'

ಲಕ್ಷ್ಮೀ : 'ಪೂರ್ಣಿಅಕ್ಕ ಹೂಕುಂಡನೂ ಮಾಡ್ತ್ಯಾ, ನೀನು?'

ಪೂರ್ಣಿ : 'ಎಲ್ಲಾನು ಮಾಡಿಕೊಡ್ತೀನಿ, ಬನ್ನಿ' ಎಂದು ಇಬ್ಬರನ್ನು ಕರೆದು ಕೊಠಡಿಗೆ ನಡೆದಳು. ಮೌನವಾಗಿ ನಳಿ ಮತ್ತು ಲಕ್ಷ್ಮೀ ಅಕ್ಕನನ್ನು ಹಿಂಬಾಲಿಸಿದರು.

ಮನಸ್ಸಿನ ದುಃಖದ ಕಡಲ ಕಟ್ಟೆಯನ್ನು ಭೇದಿಸಿ ಕಂಬನಿಗಳು ತಾಯಿ-ತಂದೆಯ ಕಣ್ಣಿನಿಂದ ಹೊರ ಬೀಳಲಾರಂಭಿಸಿದವು.


**ನಿರ್ಮಲ ಹೆಚ್. ಎಲ್.**

ಹೊಳವನಹಳ್ಳಿ

email : hlnirmala1@gmail.com


# ಹಸಿವಿಗೆ ಗೋರಿಯಾದ ಪ್ರಸಾದ




ಥರಗುಟ್ಟುವ ಚಳಿಯ ಹೊಡೆತಕ್ಕೆ
ಬಿರುಕು ನೆಲದಂತಾದ ತುಟಿಗಳ ಹೊತ್ತು
ಗಾಳಿ ಗೋಪುರಗಳ ದಾಟಿ
ಬೆಂಕಿಯ ನಾಲಗೆಯಲಿ ಬೆಚ್ಚನೆಯ ಕಾವಿಗೆ
ದಾಪುಗಾಲಿಟ್ಟಾಗಲೇ ಘಂಟೆಯ ನಾದ ಢಣ! ಢಣ!

ಅವುಡುಗಚ್ಚಿ ಓಟ ಕಿತ್ತಿದ ಓಣಿಯ ಹೆಂಗಸರೆಲ್ಲಾ
ನೆತ್ತರದ ಪಾದಗಳಲಿ
ಸೀಳುನಾಯಿಗಳ ತೆವಲುಗಳ ನುಂಗಿ
ದ್ವಾರಬಾಗಿಲದ ಹೊಸ್ತಿಲಲಿ
ಸಾಲುಗಟ್ಟಿವೆ ಪ್ರಸಾದದ ಸರದಿಯ ನೋಟದತ್ತ

ಕರುಳು ಕುಡಿಗಳ ಬಗಲಲ್ಲಿ ತಿವಿಯುತ
ಬೀದಿ ಬದಿಯಲ್ಲಿ ಕಾಳಗ ಹೂಡಿದಂತೆ
ಅನ್ನದಗಳುಗಳ ನೆಕ್ಕಲು ಹಂದಿಗಳ ತಿಕ್ಕಾಟ
ಎಂಜಲೆಲೆಯ ಮ್ಯಾಲೆ ಕಣ್ಣಿಡುವ
ಬಳಗದ ಬರೆ ತಣಿಸಲು
ಕಾತುರದ ನಿರ್ಧಾರದ ಹೊಸ್ತಿಲಲಿ ಕಾಗೆಗಳ ಕೂಗಿನಾಟ

ನಿಬ್ಬೆರಗಣ್ಣಲಿ ಕಲ್ಲುದೇವರ ಮುಂದೆ
ಮುಂಗೈಚಾಚಿದ ನಂಬಿಕೆಗಳು
ಹಸಿವಿನ ಕುಣಿಕೆಗೆ ಸಿಲುಕಿದ್ದು ಸೋಜಿಗ!

ಅಳುವ ಮಗುವಿನ ನೆತ್ತಿಗೆ
ಅಂಗಾರದ ತಿಲಕವಿಟ್ಟು ಪ್ರಸಾದ ಚಪ್ಪರಿಸುವ
ಗಂಟಲುಗಳು ಮೂಕವೇದನೆಯ ರೋದನ
ಹಸಿವಿಗೆ ಸಮಾಧಿಯಾದ ಪ್ರಸಾದ
ನಿಟ್ಟುಸಿರುಗಳ ನೆಲೆಗಳಿಗೆ
ವಿಷದ ಬಟ್ಟಲು ಉಣಬಡಿಸಿದ್ದು ಖೇದಕರ


**ಕಿರಸೂರ ಗಿರಿಯಪ್ಪ**

ಬಾಗಲಕೋಟ




ಈ ಮಳೆಗಾಲ ನಾಡಿನಲ್ಲಿ ಭೀಕರ ಸನ್ನಿವೇಶ ಸೃಷ್ಟಿಸಿದೆ. ಕರ್ನಾಟಕದ ಬಹುತೇಕ ನದಿಗಳು ಹುಚ್ಚೆದ್ದು ಕುಣಿದಿವೆ. ಪ್ರವಾಹ ಸಂತ್ರಸ್ತರ ಸಂಖ್ಯೆಯನ್ನು ಹೆಚ್ಚಿಸಿದೆ. ಸಾವಿರಾರು ಜನರ ಬದುಕನ್ನೇ ಮೂರಾಬಟ್ಟೆ ಮಾಡಿದೆ. ಕೃಷ್ಣಾ, ತುಂಗಭದ್ರ, ಘಟಪ್ರಭ, ಮಲಪ್ರಭ, ಇತ್ತ ಕಾವೇರಿ–ಕಪಿಲೆ ಪೈಪೋಟಿಗಿಳಿದಂತೆ ಉಕ್ಕಿವೆ. ೪೦,೦೦೦ ಕೋಟಿ ರೂಪಾಯಿ ಹಾನಿಯಾಗಿದೆ ಎಂದು ಅಂದಾಜು. ತುಂಗಭದ್ರ ನದಿಯ ಪ್ರವಾಹದಿಂದಾಗಿ ವಿರೂಪಾಕ್ಷ ಗುಡಿಯಲ್ಲಿ ಸಿಕ್ಕಿಹಾಕಿಕೊಂಡವರನ್ನು ಹೆಲಿಕಾಪ್ಟರ್ ಬಳಸಿ ರಕ್ಷಿಸಬೇಕಾಯಿತು. ಮಳೆಗಾಗಿ ಪ್ರಾರ್ಥಿಸುತ್ತಿದ್ದ ರೈತರು ವಿಜಯಪುರ ಜಿಲ್ಲೆಯಲ್ಲಿ ಭೀಮಾನದಿ ಉಕ್ಕಿಹರಿದು ಹೊಲಗದ್ದೆಗಳಲ್ಲಿ ಮಡುವಾಗಿ ನಿಂತಾಗ, 'ಮಳೆ ನಿಲ್ಲಲಿ' ಎಂದು ಪ್ರಾರ್ಥಿಸಿದರು. ಭದ್ರೆ ಬಾಳೆಹೊನ್ನೂರನ್ನೇ ಜಲಯುದ್ಧಕ್ಕೆ ಕರೆಯಿತು. ಕೊಡಗಿನಲ್ಲಿ ಮತ್ತೊಮ್ಮೆ ಭೂಪಾತಕ್ಕೆ ನಾಂದಿಯಾಯಿತು. ಮಂಗಳೂರು ಸಂಪರ್ಕಕ್ಕೆ ಕುಸಿಯಿತು. ವಿಮಾನಯಾನ ದುಬಾರಿಯಾಗಿ ಬೆಂಗಳೂರಿನಿಂದ ಮಂಗಳೂರಿಗೆ ೫೨,೦೦೦ ರೂ. ವಿಧಿಸಿದ ವ್ಯಾಪಾರಿ ಬುದ್ಧಿಯೂ ಪ್ರಕಟವಾಯಿತು. ಈ ಮಧ್ಯೆ ಸದ್ದು ಮಾಡುತ್ತಲೇ ಆಲಮಟ್ಟಿ ಅಣೆಕಟ್ಟು ೬ ಲಕ್ಷ ಕ್ಯೂಸೆಕ್ಸ್ ನೀರನ್ನು ಒಂದೇ ದಿನದಲ್ಲಿ ಬರಮಾಡಿಕೊಂಡು ದಾಖಲೆ ಮಾಡಿತು. ಇತ್ತ ಒಳನಾಡಿನಲ್ಲಿ ರೈತರದು ಅದೇ ಗೋಳು–ಬರ–ಬರ. ಕುಡಿಯುವ ನೀರಿಗೂ ತತ್ವಾರ. ಚಿಕ್ಕಬಳ್ಳಾಪುರ ಜಿಲ್ಲೆಯೊಂದರಲ್ಲೇ ೧೫೪೧ ಕೆರೆಗಳು ಬಣ ಬಣ. ವ್ಯಕ್ತಿಗೆ ದಿನವೊಂದಕ್ಕೆ ೪೦ ಲೀಟರು ಲೆಕ್ಕದಲ್ಲಿ ಇಲ್ಲಿ ನೀರು ಪೂರೈಕೆ – ನೀರಿಗೂ ಬಂತು ರೇಷನ್.

ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ನಿರ್ದೇಶಕ – ಡಾ॥ ಜಿ. ಎಸ್. ಶ್ರೀನಿವಾಸ ರೆಡ್ಡಿ ಅವರನ್ನು 'ಹೊಸತು' ಪತ್ರಿಕೆಗಾಗಿ ಭೂವಿಜ್ಞಾನಿ ಡಾ॥ ಟಿ. ಆರ್. ಅನಂತರಾಮು ಮತ್ತು ನವಕರ್ನಾಟಕ ಪ್ರಕಾಶನದ ವ್ಯವಸ್ಥಾಪಕ ನಿರ್ದೇಶಕ ಡಾ॥ ಸಿದ್ದನಗೌಡ ಪಾಟೀಲ ಅವರು ಮಾಡಿದ ಸಂದರ್ಶನ:

ಸಂದರ್ಶನ

ಡಾ॥ ಟಿ. ಆರ್. ಅನಂತರಾಮು

ಡಾ॥ ಸಿದ್ದನಗೌಡ ಪಾಟೀಲ

**ಹೊಸತು:** ಈಗ ಗುಜರಾತು – ಮಧ್ಯಪ್ರದೇಶ, ಕೇರಳ, ಕರ್ನಾಟಕ ರಾಷ್ಟ್ರಮಟ್ಟದಲ್ಲಿ ಸುದ್ದಿಮಾಡಿವೆ. 'ನೆರೆ' ಹೊರೆಯಾಗಿಬಿಟ್ಟಿದೆ. ಈ ಸಲದ ಮುಂಗಾರನ್ನು ನೀವು ಏನೆಂದು ಕರೆಯುವಿರಿ?

**ಶ್ರೀನಿವಾಸ ರೆಡ್ಡಿ:** ಹೌದು. ಈ ಎಲ್ಲ ರಾಜ್ಯಗಳಲ್ಲೂ ನದಿಗಳೂ ರಂಪ ಮಾಡಿವೆ. ಅದು ಆಗಸ್ಟ್ ತಿಂಗಳಲ್ಲಿ ಅತಿರೇಕ. ವಾಸ್ತವವಾಗಿ ಇಡೀ ಕರ್ನಾಟಕ ರಾಜ್ಯವನ್ನು ಪರಿಗಣಿಸಿದರೆ ಮುಂಗಾರು ಈಗಲೂ ಕೊರತೆಯೇ. ಅದೂ ೧೫ ದಿನ ತಡವಾಗಿ ಬಂತು. ಮುಂಗಾರಿಗೆ ಮುನ್ನ ಅಂದರೆ ಮೇ ತಿಂಗಳಲ್ಲಿ ಬೀಜ ಬಿತ್ತನೆಗೆ ಶೇ. ೫೦ ಮಳೆ ಕೊರತೆಯಾಯಿತು. ಜೂನ್ ತಿಂಗಳ ಕೊನೆಗೆ ಶೇ. ೧೯ ಮಳೆ ಕೊರತೆ. ನಮ್ಮ

# ಕರ್ನಾಟಕದಲ್ಲಿ ಬರ ಮಹಾಪೂರಗಳ ಮುಖಾಮುಖಿ ಪ್ರಕೃತಿಯ ವಿಕಟಾಟ್ಟಹಾಸ

ರಾಜ್ಯದಲ್ಲಿ ನಾಲ್ಕು ತಿಂಗಳಲ್ಲಿ ಬೀಳುವ ಮಳೆಯ ಶೇ. ೭೦ ಭಾಗ ಪ್ರದೇಶದಲ್ಲಿ ಕೃಷಿಗೆ ಆಧಾರ. ಒಟ್ಟಾರೆ ವಾಡಿಕೆ ಮಳೆ ೧೧೫೦ ಮಿ. ಮೀ. ಇದ್ದರೂ ಹಂಚಿಕೆ ನೋಡಿದಾಗ ಘಟ್ಟ ಪ್ರದೇಶದಲ್ಲಿ ೫೦೦೦ ಮಿ. ಮೀ. ಅಲ್ಲಿಂದ ಪೂರ್ವಕ್ಕೆ ಬಂದಂತೆ ಇದು ೫೦೦ ಮಿ. ಮೀ. ಇದು ತೀರ ವ್ಯತ್ಯಯ. ದೇಶದ ಯಾವುದೇ ಭಾಗ ತೆಗೆದುಕೊಂಡರೂ ಇಷ್ಟೊಂದು ಭಾರಿ ವ್ಯತ್ಯಯ ಯಾವಾಗಲೂ ಇರುವುದಿಲ್ಲ. ವಾಡಿಕೆ ಮಳೆ ಅಂದರೆ ೧೧೫೦ ಮಿ. ಮೀ.ನಲ್ಲಿ ಜೂನ್ ತಿಂಗಳು ಶೇ. ೭೩ ಭಾಗ ಮಳೆ ಆಗಬೇಕು. ಕರ್ನಾಟಕದ ಮಳೆ ಪರಿಸ್ಥಿತಿ ಸದಾ ರೈತರಿಗೆ ಒಂದು ರೀತಿಯಲ್ಲಿ ನಿರೀಕ್ಷೆ ಹುಸಿಯಾಗಿರುವುದೇ ಹೆಚ್ಚು. ೨೦೦೧ರಿಂದ ೨೦೧೭ರವರೆಗೆ ಅಂದರೆ ೧೮ ವರ್ಷಗಳಲ್ಲಿ ೧೪ ವರ್ಷಗಳು ಬರಪೀಡಿತ ವರ್ಷ ಅಂದರೆ ರೈತರ ಪಾಡು? ಇನ್ನೊಂದು ವಿರೋಧಾಭಾಸ ಅಂದರೆ ೨೦೦೫, ೨೦೧೯ರಲ್ಲಿ ರಾಜ್ಯ ಪ್ರವಾಹದಿಂದಾಗಿ ತತ್ತರಿಸಿಹೋಯಿತು. ಅದರಲ್ಲೂ ಸೆಪ್ಟೆಂಬರ್ ೨೯ರಿಂದ–ಅಕ್ಟೋಬರ್ ೩೦ರವರೆಗೆ – ೫ ದಿನ ಬಿದ್ದ ಮಳೆ, ಇದೇ ರಾಜ್ಯವನ್ನು ಕಂಗಾಲು ಮಾಡಿತು. ಆ ವರ್ಷ 'ಬರ ಎಂದು ಘೋಷಿಸಬೇಕಾಗಿತ್ತು' ಆದರೆ ನೆರೆಹಾವಳಿ ಪರಿಸ್ಥಿತಿ ಬಂತು ನೋಡಿ.

**ಹೊಸತು:** ಹವಾಮಾನ ಪರಿಸ್ಥಿತಿಯಲ್ಲಿ ಎಂಥ ವ್ಯತ್ಯಾಸ ಆಗಿದೆ?

**ಶ್ರೀ. ರೆ.:** ಹವಾಮಾನ ಪರಿಸ್ಥಿತಿ, ಅಂದರೆ ಕರ್ನಾಟಕಕ್ಕೆ ಸಂಬಂಧಿಸಿದಂತೆ, ಅತಿರೇಕ ಸಂಗತಿಗಳು ಹೆಚ್ಚಾಗಿರುವುದು ಸಾರ್ವಜನಿಕರ ಗಮನಕ್ಕೂ ಬಂದಿದೆ. ಒಂದು ತಿಂಗಳಲ್ಲೇ, ಒಂದು ದಿನದಲ್ಲಿ ವಿಪರೀತ ಮಳೆ ಬೀಳುವುದು, ಇದರ ಹಿಂದೆಯೇ ತಡೆಯಲಾರದ ಸೆಖೆ ಅನುಭವ! ಈಗಾಗಲೇ ಹೇಳಿದಂತೆ ಮೇ ತಿಂಗಳಲ್ಲಿ ಶೇ. ೫೦ ಪ್ರಮಾಣದ ಮಳೆ ಕೊರತೆ ಆಯಿತು. ಬೇಸಾಯ ಆಗಲಿಲ್ಲ. ಜೂನ್ ತಿಂಗಳಲ್ಲಿ ಮಾನ್ಸೂನ್‌ಗೆ, ಬಂಗಾಳ ಕೊಲ್ಲಿಯಲ್ಲಿ ಎದ್ದ 'ಫೋನಿ' ಚಂಡಮಾರುತ ಅಡ್ಡಬಂತು. ಮಳೆ ಮೋಡಗಳು ಹುಟ್ಟಲು ಬಿಡಲಿಲ್ಲ, ಲಪಟಾಯಿಸಿತು. ಇದೂ ಸಾಲದೆಂಬಂತೆ ಇದರ ಹಿಂದೆಯೇ ಜೂನ್ ಮಧ್ಯದಲ್ಲಿ 'ವಾಯು' ಅನ್ನುವ ಚಂಡಮಾರುತ ಅರಬ್ಬೀ ಸಮುದ್ರದಲ್ಲಿ ಎದ್ದು ಬಂತು. ಮಾನ್ಸೂನ್‌ನನ್ನು ಅದು ಕಿತ್ತುಕೊಂಡಿತು. ಮಳೆ ಮಾರುತವನ್ನು ಗುಜರಾತಿನ ಕಡೆ ಹೊತ್ತೊಯ್ಯಿತು. ಈಗಲೂ ೨೯ ಜೂನ್‌ವರೆಗೆ ಎಷ್ಟು ಮಳೆ ಹಂಚಿಕೆ ಯಾಗಬೇಕಿತ್ತೋ ಅದು ಆಗಲೇ ಇಲ್ಲ. ಇದರರ್ಥ ಏನು ಅಂದರೆ ವಾಯುಗೋಳದಲ್ಲಾಗುವ 'ಡೈನಮಿಕ್ ಚಲನೆ'. ಅದು ಅತ್ಯಂತ ಸಂಕೀರ್ಣವಾದ್ದು. ಆದರೆ ನೋಡಿ ಕಳೆದ ವರ್ಷ ಏನಾಯಿತು? ಈ ವರ್ಷಕ್ಕಿಂತ ದೊಡ್ಡ ಪ್ರಮಾಣದ ಮಳೆ ಆಯಿತು. ಮುಂಗಾರಿಗೆ ಮುನ್ನವೇ ಶೇ. ೬೪ ಪ್ರಮಾಣ ಮಳೆ ಬಿತ್ತು. ಜೂನ್ ತಿಂಗಳು ಮಳೆ ಹೆಚ್ಚಿ ಕಬಿನಿಯ ಹೊರಹರಿವು ಹೆಚ್ಚಿಸಬೇಕಾಯ್ತು. ಈ ವರ್ಷ ಜೂನ್ ೩೦ರ ಹೊತ್ತಿಗೆ ಶೇ. ೧೯ ಮಳೆ ಆಗಿತ್ತು. ಲೆಕ್ಕದಲ್ಲಿ ಕೊಡುವುದಾದರೆ ವಾಡಿಕೆ ಮಳೆ ೩೧.೩ ಟಿ.ಎಂ.ಸಿ. ಆದರೆ ಬಿದ್ದ ಮಳೆ ೩ ಟಿ.ಎಂ.ಸಿ. ಎಲ್ಲಿಂದ ಎಲ್ಲಿಗೆ? ಜುಲೈನಲ್ಲಿ ಜಲಾನಯನ ಪ್ರದೇಶದಲ್ಲಿ ಅಂದರೆ ಇತ್ತ ಕಾವೇರಿ ಜಲಾನಯನ–ಅತ್ತ ಕಬಿನಿ (ಇದರ ಜಲಾನಯನ ವೈನಾಡು) ಭಾರಿ ಮಳೆ ಕೊರತೆ ಅನುಭವಿಸಿತು.

– ವಸ್ತುಸ್ಥಿತಿ ಅಂದರೆ, ಮಳೆ ಕೊರತೆ–ವ್ಯವಸಾಯಕ್ಕೆ ಕುತ್ತು ತಂದಿತು. ಜಲಾಶಯದ ನೀರಿನ ಸಂಗ್ರಹ – ಇವೆಲ್ಲವನ್ನು ಮುಖ್ಯಮಂತ್ರಿಗಳಿಗೆ ನಾನೇ ಖುದ್ದಾಗಿ ವಿವರಿಸಿದೆ.

**ಹೊಸತು:** ಭಾರಿ ಮಳೆ ಅಂದರೆ ನದಿಯಲ್ಲಿ ಪ್ರವಾಹ ಬರುವುದು ಒಂದು ಸಮಸ್ಯೆಯಾದರೆ, ಭೂಪಾತದ ಭಯವೂ ಇನ್ನೊಂದೆಡೆ. ಅದರಲ್ಲೂ ಕೊಡಗು ಜಿಲ್ಲೆ ಅನುಭವಿಸಿದ ಭೂಪಾತ – ಅದರಿಂದ ಆದ ಅನಾಹುತಗಳನ್ನು ಇನ್ನೂ ಜನ ಮರೆತಿಲ್ಲ. ಈ ವರ್ಷ?

**ಶ್ರೀ. ರೆ.:** ಹೌದು. ಕೊಡಗು ದೊಡ್ಡ ಪ್ರಮಾಣದ ಭೂಕುಸಿತ ಅನುಭವಿಸಿತ್ತು. ಇದರಿಂದಾಗಿ ಕಳೆದ ವರ್ಷ ರಸ್ತೆ ಸಂಪರ್ಕಗಳು ಅನೇಕ ಕಡೆ ಕಡಿದು ಹೋಗಿದ್ದವು. ಈ ಮಳೆ ಇನ್ನೂ ಹೆಚ್ಚು ಭೂಪಾತ ತರಬಹುದು ಎಂಬ ಶಂಕೆ ಸಾಮಾನ್ಯ ಜನರಲ್ಲಿ ಇದ್ದೇ ಇರುತ್ತದೆ. ಆದರೆ ಕಳೆದ ವರ್ಷ ಆದ ಭೂಪಾತದಿಂದ ಯಾವ ಭಾಗ ಕುಸಿಯಬೇಕಾಗಿತ್ತೋ ಅದು ಕುಸಿದಿಲ್ಲ. 'ಇಳಿಜಾರು ಸ್ಥಿರತೆ'ಗಳಿಸಿದ್ದರಿಂದ ನಿರೀಕ್ಷಿಸಿದಷ್ಟು ಪ್ರಮಾಣದಲ್ಲಿ ಭೂಪಾತ ಅಲ್ಲಿ ಆಗಲಿಲ್ಲ. ನಮ್ಮ ಅವಲೋಕನದ ದೃಷ್ಟಿಯಿಂದಲೂ ಕೊಡಗನ್ನು ಸೂಕ್ಷ್ಮ ಪ್ರದೇಶ ಎಂದು ಗಮನಿಸುತ್ತಿದ್ದೇವೆ. ಲೋಕೋಪಯೋಗಿ ಇಲಾಖೆಗೆ, ಕೃಷಿ ಇಲಾಖೆಗೆ ನಮ್ಮ ಸಂಸ್ಥೆ ಅತ್ಯಂತ ತ್ವರಿತವಾಗಿ ಮಾಹಿತಿ ಕಳಿಸುವುದರಿಂದ, ಅಗತ್ಯ ಕ್ರಮ ತೆಗೆದು ಕೊಳ್ಳುವುದು ಸುಲಭ.

**ಹೊಸತು:** ಮುನ್ನೆಚ್ಚರಿಕೆ ಕೊಡಲು ಯಾವ ಯಾವ ಕ್ರಮ ತೆಗೆದುಕೊಂಡಿರುವಿರಿ?

**ಶ್ರೀ. ರೆ.:** ನೋಡಿ, ಎಷ್ಟೋ ಸಲ ನಿಸರ್ಗದ ವಿಕೋಪಗಳನ್ನು ತಡೆಯಲು ಆಗುವುದಿಲ್ಲ. ಆದರೆ ಮುನ್ಸೂಚನೆಯನ್ನು ಸರಿಯಾಗಿ ಕೊಟ್ಟರೆ ಆಗಬಹುದಾದ ಹಾನಿಯ ಬಹುತೇಕ ಪ್ರಮಾಣವನ್ನು ತಡೆಯಬಹುದು. ಇದಕ್ಕಾಗಿ ಅತ್ಯಂತ ಸುಸಜ್ಜಿತ ಉಪಕರಣಗಳು, ಅವನ್ನು ವಿಶ್ಲೇಷಿಸಿ, ಸರಿಯಾಗಿ ಅರ್ಥೈಸುವ ವ್ಯವಸ್ಥೆ ಬೇಕು. ನಮ್ಮ ಕೇಂದ್ರ ಮಾಡು ತ್ತಿರುವುದು ಇದೇ ಕೆಲಸವನ್ನು. ರಾಜ್ಯದಾದ್ಯಂತ ೬,೫೦೦ ಮಳೆ ಮಾಪನಗಳಿವೆ. ಆಶ್ಚರ್ಯವೆನಿಸ ಬಹುದು, ಬೆಂಗಳೂರಿನಲ್ಲೇ ೫೦೦ ಮಳೆಮಾಪನ ಯಂತ್ರಗಳನ್ನಿರಿಸಿದೆ. ೮೫೦ ಹವಾಮಾನ ಕೇಂದ್ರಗಳು ರಾಜ್ಯದಾದ್ಯಂತ ಕೆಲಸ ಮಾಡುತ್ತಿವೆ. ಹೋಬಳಿ ಮಟ್ಟದಲ್ಲೂ ಇವನ್ನು ಸ್ಥಾಪಿಸಿದೆ. ಬರಿ ಮಳೆಯ ಬಗ್ಗೆ ಅಲ್ಲ, ಈ ಕೇಂದ್ರಗಳು ಅಲ್ಲಿನ ಸ್ಥಳೀಯ ಉಷ್ಣತೆ–ಆರ್ದ್ರತೆ, ಗಾಳಿಯ ವೇಗ, ದಿಕ್ಕು – ಇವೆಲ್ಲವನ್ನೂ ನಿಖರವಾಗಿ ಹೇಳಲು ನೆರವಾಗಿವೆ. ಅಣೆಕಟ್ಟುಗಳ ಮಾನಿಟರಿಂಗ್ ಆಗಲಿ, ನಮ್ಮ ರಾಜ್ಯದ ಅಂತರ್ಜಲ ಕುರಿತಾಗಲಿ ಮಾಹಿತಿಗಾಗಿ ಬೇರೆ ಬೇರೆ ಇಲಾಖೆ ವ್ಯವಸ್ಥೆಗಳಿವೆ. ಅದನ್ನು ಅಲ್ಲಿನ ವಿಭಾಗಗಳು ನಿರ್ವಹಿಸುತ್ತಿವೆ. ನಮ್ಮ ಸುಪರ್ದಿಗೆ ಬರುವುದಿಲ್ಲ. ನಮ್ಮ ಸಂಸ್ಥೆಯಲ್ಲಿ ಹವಾಮಾನ ವಿಭಾಗ, ಭೂಕಂಪನ ಮಾಹಿತಿ ದಾಖಲಾತಿ ವಿಭಾಗಗಳಿವೆ. ವೈಜ್ಞಾನಿಕ–ತಾಂತ್ರಿಕವಾಗಿ ನಿರ್ವಹಿಸಲಾಗುತ್ತಿದೆ. ಇದಕ್ಕಾಗಿ ನಾವೇ ತಂತ್ರಾಂಶ ರೂಪಿಸಿಕೊಂಡಿದ್ದೇವೆ. ಪ್ರತಿ ೧೫ ನಿಮಿಷಕ್ಕೆ ಎಲ್ಲ ಘಟಕಗಳಿಗೂ ಮಾಹಿತಿ ಬರುತ್ತದೆ–ಎಲ್ಲವೂ ಸ್ವಯಂಚಾಲಿತ–ಅಟೋಮ್ಯಾಟಿಕ್. ಡೇಟಾ ಸಂಗ್ರಹಿಸುವುದರಿಂದ ವಿಶ್ಲೇಷಣೆವರೆಗೆ ನೈಜ ಮಾಹಿತಿ ಕೊಡುವುದು ನಮಗೆ ಸಾಧ್ಯವಾಗಿದೆ. ಈ ನಮ್ಮ ಸಂಸ್ಥೆಯ ಮಾಹಿತಿಗಾಗಿ ಕೇಂದ್ರ ಸರ್ಕಾರದ ಸೆಕ್ರೆಟರಿಯೇಟ್‌ನ ಅಧಿಕಾರಿಗಳೂ ಬರುತ್ತಾರೆ. ಇನ್ನು ನಮ್ಮ ಸರ್ಕಾರದ ಬೇರೆ ಬೇರೆ ಇಲಾಖೆಗಳು ಧಾರಾಳವಾಗಿ ಮಾಹಿತಿ ಪಡೆಯುತ್ತಿವೆ.

**ಹೊಸತು:** ನದಿಗಳು ಉಕ್ಕಿ ಹರಿಯುವುದರ ವೈಜ್ಞಾನಿಕ ವಿಶ್ಲೇಷಣೆ ಏನು? ಇದಕ್ಕೆ ತಾಂತ್ರಿಕ ಪರಿಹಾರಗಳಿಲ್ಲವೆ?

**ಶ್ರೀ. ರೆ.:** ಈ ವರ್ಷ ನದಿಗಳೂ ತುಂಬಿ ಹರಿಯುತ್ತಿವೆ ಎನ್ನುವ ಬದಲು ಮಹಾಪೂರ ಎದ್ದಿದೆ ಎನ್ನುವುದೇ ಸರಿ. ಸಾಕಷ್ಟು ಬೆಳೆಹಾನಿ–ಆಸ್ತಿಹಾನಿ–ಪ್ರಾಣಹಾನಿಯೂ ಆಗಿದೆ. ಈ ಆಗಸ್ಟ್ ೨ನೇ ತಾರೀಕು, ೧೩ ಜಲಾಶಯಗಳಲ್ಲಿ ಶೇ. ೩೫ ಮಾತ್ರ



ನೀರಿತ್ತು. ಆಲಮಟ್ಟಿಯಲ್ಲಿ ಶೇ. ೬೫ ಪ್ರಮಾಣ ಇತ್ತು–ಜಲಾನಯನ ಪ್ರದೇಶದಲ್ಲಿ ಹೆಚ್ಚು ಮಳೆ ಮುಂದಿನ ದಿನದಿಂದಲೇ ಪ್ರಾರಂಭವಾಯಿತು–ಇದಕ್ಕೆ ಹಲವಾರು ಕಾರಣ ಉಂಟು. ಮೇಲ್ಮೈ ಸುಳಿಗಾಳಿ, ಗುಜರಾತಿನಿಂದ ಕೇರಳದವರೆಗೆ ಸೃಷ್ಟಿಯಾದ ವಾಯುಭಾರಕುಸಿತ. ತಾಂತ್ರಿಕವಾಗಿ ಇವನ್ನು 'ಆಫ್ ಶೋರ್ ಟ್ರಫ್' ಎನ್ನುವುದುಂಟು. ತೀರ ಪ್ರದೇಶದಲ್ಲಿ ಇವೆಲ್ಲ ಒಟ್ಟುಗೂಡಿದಾಗ, ಅತಿವೃಷ್ಟಿ ನಿರೀಕ್ಷಿಸಬಹುದು. ಗುಜರಾತ್–ಮುಂಬೈನಲ್ಲಿ ಭಾರಿ ಮಳೆ ಆಯಿತು. ಅದೇ ಹೊತ್ತಿನಲ್ಲಿ ಬಂಗಾಳಕೊಲ್ಲಿಯಲ್ಲಿ ವಾಯುಭಾರ ಕುಸಿತವಾಯಿತು. ಮುಂಗಾರು ಮತ್ತು ಚಂಡಮಾರುತ – ಎಂಥ ಕೂಡಿಕೆ ನೋಡಿ! ಗೋವಾ–ಮಹಾರಾಷ್ಟ್ರ ಗಳಲ್ಲಿ ೧೩ ಚಿಕ್ಕ, ದೊಡ್ಡ ಜಲಾಶಯಗಳು ತುಂಬಿ ಹರಿದವು. ಅಂದರೆ ಘಟ್ಟ ಪ್ರದೇಶಗಳಲ್ಲಿ ವಿಪರೀತ ಮಳೆ. ಅದರ ಪರಿಣಾಮ ಕೃಷ್ಣಾನದಿ–ಘಟಪ್ರಭಾ ನದಿಗಳ ಮೇಲಾಯಿತು. ನೋಡನೋಡುತ್ತಲೇ ಕೃಷ್ಣಾನದಿಯಲ್ಲಿ ಒಂದು ಲಕ್ಷ, ಎರಡು–ಮೂರು–ನಾಲ್ಕು ಲಕ್ಷ ಕ್ಯೂಸೆಕ್ಸ್. ಇನ್ನು ಮಹಾರಾಷ್ಟ್ರ – ೧೫ ದಿನ ಮಳೆ ಬಂತು. ಕೊಯ್ನಾ ಅಣೆಕಟ್ಟು ತುಂಬಿತು. ಅದರ ಸಾಮರ್ಥ್ಯ ೧೦೪ ಟಿ.ಎಂ.ಸಿ. ನೀರು ಹೊರ ಬಿಡದಿದ್ದರೆ ಅಪಾಯ. ಭೂಕಂಪನ ವಲಯದಲ್ಲಿದೆ. ಈಗಲೂ ೩.೫ ಪರಿಮಾಣದ ಭೂಕಂಪನವಾಯಿತು. ಇವನ್ನು ಜಲಾಶಯ ಪ್ರೇರಿತ ಭೂಕಂಪನ ಎನ್ನುತ್ತೇವೆ. ಘಟ್ಟ ಪ್ರದೇಶದಲ್ಲಿ ಇಳಿಜಾರಿದ್ದು ಅಧಿಕ ನೀರಿನ ಓಟವೂ ತೀವ್ರವಾಗುತ್ತದೆ. ಮೈದಾನ ಬಂದರೆ ರಭಸ ಕಡಿಮೆ.

ನಿಮಗೆ ಆಶ್ಚರ್ಯ ಎನ್ನಿಸಬಹುದು. ಆಲಮಟ್ಟಿ ಅಣೆಕಟ್ಟೆಯೊಂದಕ್ಕೆ ಒಂದೇ ದಿನದಲ್ಲಿ ೬ ಲಕ್ಷ ಕ್ಯೂಸೆಕ್ಸ್ ನೀರು ಹರಿದುಬಂತು. ಇದೊಂದು ದಾಖಲೆ. ಹೊರಹರಿವನ್ನು ಹೆಚ್ಚಿಸದಿದ್ದರೆ ಅಣೆಕಟ್ಟೆಗೇ ಅಪಾಯ! ಆದ್ದರಿಂದ ಸರ್ಕಾರ 'ರೆಡ್ ಅಲರ್ಟ್' ಕೊಡುವುದು. ಇದನ್ನು ನಿರ್ಧರಿಸಬೇಕಾದರೆ ಒಳ–ಹೊರ ಹರಿವಿನ ಪ್ರಮಾಣದ ಬಗ್ಗೆ ನಿರ್ದಿಷ್ಟ ಮಾಹಿತಿಬೇಕು. ಜೂನ್ ೧೪ರಿಂದ ಆಗಸ್ಟ್ ೧೬ರವರೆಗೆ ಆಲಮಟ್ಟಿ ಜಲಾಶಯಕ್ಕೆ ಒಳಹರಿವು ೬೯೦.೩೭ ಟಿ.ಎಂ.ಸಿ. ಹೊರಹರಿವು ೫೮೩ ಟಿ.ಎಂ.ಸಿ. (೧೧,೦೦೦ ಕ್ಯೂಸೆಕ್ಸ್ = ೧ ಟಿ.ಎಂ.ಸಿ.).

ನೀರಿನ ಒಳಹರಿವಿಗಿಂತ ಕೆಲವು ಸಲ ಹೊರ ಹರಿವು ಹೆಚ್ಚಾಗಿರಬೇಕು. ಜನಸಾಮಾನ್ಯರಿಗೆ ಹೀಗೇಕೆ ನೀರನ್ನು ಹೆಚ್ಚು ಬಿಡುತ್ತೀರ ಎನ್ನುವ ಪ್ರಶ್ನೆ ಬರುತ್ತದೆ. ಸಹಜವೇ. ಒಳಹರಿವನ್ನು ನಿರ್ಧರಿಸಿ ಹೊರ ಹರಿವು ಎಷ್ಟು ಇರಬೇಕು ಎನ್ನುವ ಲೆಕ್ಕ ಇರುತ್ತದೆ.

ಇನ್ನೊಂದು ಸಂದರ್ಭವೂ ಇರುತ್ತದೆ; ಮಳೆ ಆಗುತ್ತೆ ಅನ್ನೋ ಲೆಕ್ಕದಲ್ಲಿ ಜಲಾಶಯದ ನೀರನ್ನು ಖಾಲಿ ಮಾಡುವುದಕ್ಕೂ ಆಗುವುದಿಲ್ಲ. 'ಡೆಡ್ ಸ್ಟೋರೇಜ್' (ಕನಿಷ್ಠ ನೀರು) ಇಟ್ಟುಕೊಳ್ಳಲೇಬೇಕು.

ಕಾವೇರಿ ಕಣಿವೆಯದೂ ಅದೇ ಲೆಕ್ಕಾಚಾರ. ಇಲ್ಲಿ ಒಟ್ಟು ಎಲ್ಲ ಜಲಾಶಯಗಳ ನೀರು ಸಂಗ್ರಹಣಾ ಸಾಮರ್ಥ್ಯ ೧೧೪ ಟಿ.ಎಂ.ಸಿ. ಈ ಪೈಕಿ ೧೦ ಟಿ.ಎಂ.ಸಿ. ಡೆಡ್ ಸ್ಟೋರೇಜ್ ಇರಲೇಬೇಕು.



ಒಳಹರಿವು ಎಷ್ಟು ಇತ್ತು ಅಂದರೆ ೩ ದಿನ ಬಿಟ್ಟರೆ ಇಡೀ ಕೆ.ಆರ್.ಎಸ್. ಭರ್ತಿಯಾಗುತ್ತಿತ್ತು. ಈ ಸಲ ಮಹಾರಾಷ್ಟ್ರ ನಂತರ ಕರ್ನಾಟಕದಲ್ಲಿ (ಒಳನಾಡು ಬಿಟ್ಟು) ಹೆಚ್ಚು ಮಳೆ ಆದದ್ದು ಆಗಸ್ಟ್ ೩ರಿಂದ ೧೦ರವರೆಗೆ. ೭ ದಿನಗಳ ಮಳೆ ಪ್ರಮಾಣ ಲೆಕ್ಕಹಾಕಿದರೆ ಕಳೆದ ೧೧೮ ವರ್ಷಗಳಲ್ಲಿ ಇದು ಅತ್ಯಂತ ಗರಿಷ್ಠ ಮಳೆ. ವಾಡಿಕೆ ಮಳೆಗಿಂತ ಶೇ. ೨೭೬ ಹೆಚ್ಚಳ. ಇದನ್ನೇ ವೈಪರೀತ್ಯ ಎನ್ನುವುದು. ಆದರೆ ಈಗಲೂ ಚಿತ್ರದುರ್ಗ–ಚಿಕ್ಕಬಳ್ಳಾಪುರ ಸೇರಿದಂತೆ ೮ ಜಿಲ್ಲೆಗಳಲ್ಲಿ ಮುಂಗಾರಿನ ಪ್ರಭಾವವೇ ಇಲ್ಲ.

**ಹೊಸತು:** ಈ ಅತಿವೃಷ್ಟಿಯಿಂದ ಯಾರಿಗೆ ಲಾಭ? ನಷ್ಟವೇ ಹೆಚ್ಚು ಅನ್ನಿಸುವುದಿಲ್ಲವೆ?

**ಶ್ರೀ. ರೆ.:** ಇಲ್ಲ. ಇದನ್ನು ಬೇರೆಯ ದೃಷ್ಟಿಯಿಂದ ನೋಡಬೇಕಾಗುತ್ತದೆ. ಕಳೆದ ೧೦ ವರ್ಷಗಳಲ್ಲಿ ಅತಿ ಬಳಕೆಯಿಂದಲೂ, ಬರದಿಂದಲೂ ಅಂತರ್ಜಲಮಟ್ಟ ಶೇ. ೯೦ರಷ್ಟು ಕುಸಿದಿದೆ. ಜುಲೈ ತಿಂಗಳಲ್ಲಿ ಶೇ. ३५ ಪ್ರಮಾಣ ಮಳೆ ಆದರೆ, ಸಣ್ಣ ನೀರಾವರಿ ಆಶ್ರಿತ ಪ್ರದೇಶಗಳಲ್ಲಿ ಶೇ. ೬೫ ಭಾಗ ನೀರೇ ಇಲ್ಲ. ಒಂದರ್ಥದಲ್ಲಿ ಇದು 'ಜಲಕ್ಷಾಮ'. ಕೆಲವೆಡೆಯಾದರೂ ಈ ಮಳೆ ಅಂತರ್ಜಲ ಮಟ್ಟ ಏರಲು ಕಾರಣವಾಗಿದೆ.

**ಹೊಸತು:** ಈ ವಿಕೋಪದಲ್ಲಿ ಮನುಷ್ಯನ ಪಾತ್ರ ಎಷ್ಟು? ಎಲ್ಲದರಲ್ಲೂ 'ವರುಣ'ನ ಕಡೆ ಕೈ ತೋರಿಸುತ್ತೇವೆ.

**ಶ್ರೀ. ರೆ.:** ಕೊಡಗು ಮುಂತಾದ ಸೂಕ್ಷ್ಮ ಪ್ರದೇಶ

**ಕರ್ನಾಟಕದಲ್ಲಿ ಪ್ರವಾಹ ತಂದ ಕಷ್ಟ – ನಷ್ಟ (ಆಗಸ್ಟ್ ೧೫, ೨೦೧೯ರವರೆಗೆ)**

- ❑ ಒಟ್ಟು ೧೦೩ ತಾಲ್ಲೂಕುಗಳು ಪ್ರವಾಹ ಪೀಡಿತವಾಗಿವೆ
- ❑ ಪ್ರವಾಹದಿಂದ ಸತ್ತವರ ಸಂಖ್ಯೆ ೫೮ಕ್ಕೆ ಏರಿದೆ. ಕಾಣೆಯಾದವರ ಸಂಖ್ಯೆ : ೧೫
- ❑ ಸತ್ತ ಜಾನುವಾರುಗಳ ಸಂಖ್ಯೆ ೮೫೨
- ❑ ೬,೯೭,೩೪೮ ಜನರ ಸ್ಥಳಾಂತರ
- ❑ ೪,೮೫,೯೪೨ ಹೆಕ್ಟೇರು ಕೃಷಿ ಭೂಮಿ ಜಲಾವೃತ
- ❑ ವಿಕೋಪದಿಂದ ಜನ–ಜಾನುವಾರುಗಳನ್ನು ರಕ್ಷಿಸಲು ಬಂದ ತಂಡ
- ❑ ನ್ಯಾಷನಲ್ ಡಿಸಾಸ್ಟರ್ ರೆಸ್ಪಾನ್ಸ್ – ೨೦ ತಂಡ
- ❑ ರಕ್ಷಣಾ ಸಿಬ್ಬಂದಿ – ೧೧ ತಂಡ
- ❑ ನೌಕಾದಳ – ೫ ತಂಡ
- ❑ ವಾಯುಪಡೆ – ೪ ತಂಡ
- ❑ ಲೋಕೋಪಯೋಗಿ ಇಲಾಖೆ ನಿರ್ಮಾಣ ಮಾಡಿದ ೨೪೩ ರಸ್ತೆಗಳು ಹದಗೆಟ್ಟಿವೆ
- ❑ ೫೦೦ ಸೇತುವೆಗಳು ನಾಶವಾಗಿವೆ
- ❑ ಧ್ವಂಸವಾಗಿರುವ ಮನೆಗಳು : ೫೬,೩೮೧
- ❑ ನೆರವಿಗಾಗಿ ತೆರೆದ ಸಂತ್ರಸ್ತ ಕೇಂದ್ರಗಳು – ೧,೧೬೦
- ❑ ಕರ್ನಾಟಕಕ್ಕಾದ ಒಟ್ಟು ನಷ್ಟ – ಅಂದಾಜು ೪೦,೦೦೦ ಕೋಟಿ
- ❑ ಪ್ರವಾಹದಿಂದ ಭಾರಿ ನಷ್ಟ ಅನುಭವಿಸಿದ ಜಿಲ್ಲೆಗಳು – ಬೆಳಗಾವಿ, ಬಾಗಲಕೋಟೆ, ರಾಯಚೂರು, ಕಲಬುರ್ಗಿ, ಯಾದಗಿರಿ, ವಿಜಯಪುರ, ಗದಗ, ಹಾವೇರಿ, ಧಾರವಾಡ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ದಕ್ಷಿಣ ಕನ್ನಡ ಜಿಲ್ಲೆ, ಉಡುಪಿ, ಉತ್ತರ ಕನ್ನಡ ಜಿಲ್ಲೆ, ಮೈಸೂರು (ಭಾಗಶಃ).

ವನ್ನು ಪರಿಗಣಿಸಿದರೆ ನಿಸರ್ಗಕ್ಕಿಂತ ಮನುಷ್ಯನ ಕೈವಾಡವೇ ಎದ್ದುಕಾಣುತ್ತದೆ. ಬೆಟ್ಟಗುಡ್ಡಗಳಲ್ಲಿ ರಸ್ತೆ ಮಾಡುವಾಗ, ಎಷ್ಟು ಇಳಿಜಾರು ಇರಬೇಕು ಎನ್ನುವ ಅಂದಾಜು ಇರಬೇಕು. ಇಳಿಜಾರು ೪೫ ಡಿಗ್ರಿಗಳಿಗಿಂತಲೂ ಹೆಚ್ಚಾದರೆ ಭೂಪಾತವಾಗುತ್ತದೆ. ಅದರಲ್ಲೂ ಮಳೆ ಭಾರಿ ಪ್ರಮಾಣದಲ್ಲಿ ಆದಾಗ. ಇನ್ನು ಅಂಥ ಸೂಕ್ಷ್ಮ ಪ್ರದೇಶಗಳಲ್ಲಿ ದೊಡ್ಡ ಪ್ರಮಾಣದ ವಸತಿಗಳನ್ನು ಮಾಡುವುದು ಅಪಾಯಕ್ಕೆ ಒಡ್ಡಿಕೊಂಡಂತೆಯೇ. ಇಲ್ಲಿ ಇನ್ನೊಂದು ವಿಚಾರ ಪರಿಗಣಿಸಬೇಕು. ಹಳ್ಳಗಳ ಬಳಿಯೇ ಜಮೀನು ಮಾಡುವುದುಂಟು. ಇದರಿಂದ ಹಳ್ಳಕ್ಕೆ ಅಥವಾ ತೊರೆಗೆ ಹೂಳು ತುಂಬಿಕೊಳ್ಳುತ್ತದೆ. ಹಾವೇರಿ ಜಿಲ್ಲೆಯಲ್ಲಿ ಹುಟ್ಟಿ ಮಲಪ್ರಭ ನದಿ ಸೇರುವ ಬೆಣ್ಣೆಹಳ್ಳದ ಪರಿಸ್ಥಿತಿಯನ್ನೇ ನೋಡಿ. ಅಲ್ಲಿ ಬರೀ ೫೦ ಮಿ.ಮೀ. ಮಳೆಯಾದರೂ ಸಾಕು ಪ್ರವಾಹ ಏಳುತ್ತದೆ.

**ಹೊಸತು:** ಜಲಾಶಯಗಳಲ್ಲಿ ತುಂಬಿರುವ ಹೂಳು ತೆಗೆದರೆ ಅವುಗಳ ನೀರಿನ ಸಂಗ್ರಹಣ ಸಾಮರ್ಥ್ಯ ಹೆಚ್ಚುವುದಿಲ್ಲವೆ?

**ಶ್ರೀ. ರೆ.:** ಇದು ದೊಡ್ಡ ಸವಾಲಿನ ಕೆಲಸ. ತುಂಗಭದ್ರ ಅಥವಾ ಆಲಮಟ್ಟಿ ಜಲಾಶಯದ ಹೂಳು ತೆಗೆಯಬೇಕೆಂದರೆ ಅದು ಕಾರ್ಯಯೋಗ್ಯವಲ್ಲ. ಏಕೆಂದರೆ ಹೂಳು ತೆಗೆಯಬೇಕಾದರೆ ಜಲಾಶಯದ ಇಡೀ ನೀರನ್ನು ಖಾಲಿಮಾಡಬೇಕು. ಅದು ಸಾಧ್ಯವೆ? ಇದರ ಜೊತೆಗೆ ಅಗಾಧ ಪ್ರಮಾಣದಲ್ಲಿ ತೆಗೆದ ಹೂಳನ್ನು ಎಲ್ಲಿ ಸುರಿಯಬೇಕು? ಒಂದನ್ನು ಮಾಡಲು ಹೋಗಿ ಇನ್ನೊಂದು ಸಮಸ್ಯೆ ಸೃಷ್ಟಿಯಾಗುತ್ತದೆ. ಜಲಾಶಯಗಳು ವರ್ಷಕ್ಕೆ ಒಮ್ಮೆ ತುಂಬಿದರೆ ಸಾಲದು, ಅದು ಎರಡು ಮೂರು ಬಾರಿಯಾದರೂ ತುಂಬಿರಬೇಕು. ಆಗ ವರ್ಷಪೂರ್ತಿ ಬೆಳೆ ತೆಗೆಯಲು ಅನುಕೂಲವಾಗುತ್ತದೆ.

**ಹೊಸತು:** ಜಲಾಶಯಕ್ಕೆ ಹೆಚ್ಚು ನೀರು ಹರಿದು ಬಂದಾಗ ಕೊನೆಯಪಕ್ಷ ಕೆರೆಗಳಿಗಾದರೂ ಹರಿಸಿ ಕೃಷಿಗೆ ಬಳಸಬಹುದಲ್ಲ?

**ಶ್ರೀ. ರೆ.:** ಅದೇನೋ ಸರಿ, ಆದರೆ ಅಂಥ ಕೆರೆಗಳು ಪರಸ್ಪರ ಕೊಂಡಿಯಂತಿರಬೇಕು. ಒಂದರ ನೀರು ಇನ್ನೊಂದಕ್ಕೆ ಹರಿಯಬೇಕು. ಆಗ ಇದು ಸಾಧ್ಯ. ವಾಸ್ತವವಾಗಿ ಜಲಾಶಯ ಮತ್ತು ಕೆರೆಗಳ ನಡುವೆ ಇರುವ ಇಳಿಜಾರಿನ ಪ್ರಮಾಣ ತುಂಬ ಮುಖ್ಯವಾಗುತ್ತದೆ. ಕರ್ನಾಟಕದಲ್ಲಿ ೩೬,೦೦೦ ಕೆರೆಗಳಿವೆ. ಆ ಲೆಕ್ಕದಲ್ಲಿ ಇವೆಲ್ಲವನ್ನೂ ತುಂಬಿಸಲು ಬರೀ ೫೦ ಟಿ.ಎಂ.ಸಿ. ನೀರು ಸಾಕು. ಆದರೆ ತುಂಬಿಸುವ ಬಗೆ ಹೇಗೆ?

**ಹೊಸತು:** ಇಷ್ಟೆಲ್ಲ ಜಲಪ್ರಳಯದ ರಾದ್ಧಾಂತಕ್ಕೆ ಎಲ್ ನಿನೋ ಕಾರಣವಾಗಿರಬಹುದೆ?

**ಶ್ರೀ. ರೆ.:** ಜಗತ್ತಿನಲ್ಲಿ ಹವಾಮಾನ ಬದಲಾಗುತ್ತಿದೆ ಎನ್ನುವುದನ್ನು ಅಧ್ಯಯನಗಳು ಖಚಿತಪಡಿಸಿವೆ. ಇದರಲ್ಲಿ ಮನುಷ್ಯನ ಪಾತ್ರವೇ ಹೆಚ್ಚು. ಎಲ್ ನಿನೋ ಪೆಸಿಫಿಕ್ ಸಾಗರದ ಉಷ್ಣ ಪ್ರವಾಹ. ಅದು ಜಗತ್ತಿನ ಎಲ್ಲ ಸಾಗರಗಳ ಉಷ್ಣ, ಒತ್ತಡ, ಆರ್ದ್ರತೆ ಬದಲಾಯಿಸಬಲ್ಲದು. ಅಂದಮೇಲೆ ಮಳೆಮಾರುತಗಳ ಮೇಲೂ ಅದರ ಪರಿಣಾಮ ತಟ್ಟುತ್ತದೆ. ಎಲ್ಲೋ ಮಳೆ, ಇನ್ನೆಲ್ಲೋ ಬರ, ಇನ್ನೆಲ್ಲೋ ಪ್ರವಾಹ. ಇದನ್ನು ಜಗತ್ತು ಅನುಭವಿಸುತ್ತಿದೆ. ಇದನ್ನು ನಿಭಾಯಿಸುವ ಪರಿಸ್ಥಿತಿ ಎದುರಾಗಿದೆ. ನಿಭಾಯಿಸುವುದು ಎಂದರೆ ಬದಲಾಗುತ್ತಿರುವ ಹವಾಮಾನಕ್ಕೆ ಹೊಂದಿಕೊಳ್ಳುವುದು. ಹೊಂದಿಕೆ ಎಂದರೆ ನಮ್ಮ ಬೆಳೆ ಪದ್ಧತಿಯನ್ನು ಬದಲಾಯಿಸುವುದು. ಕಡಿಮೆ ನೀರು ಬೇಡುವ ಬೆಳೆಗಳಿಗೆ ಆದ್ಯತೆ ಕೊಡಬೇಕು. ಈ ಹೊಂದಾಣಿಕೆ ಎಂಬುದು ನಿಧಾನ ಗತಿಯಲ್ಲಾದರೂ ಆಗಬೇಕು.

**ಹೊಸತು:** ಹೆಚ್ಚುವರಿಯಾಗಿ ಹರಿಯುವ ನೀರನ್ನು ಬಳಸಿಕೊಳ್ಳಲು ರಾಜ್ಯ ರಾಜ್ಯಗಳ ನಡುವೆ ಯಾವ ಬಗೆಯ ಒಪ್ಪಂದ ಇರಬೇಕು?

**ಶ್ರೀ. ರೆ.:** ನೀರು ನಮ್ಮ ಬದುಕಿಗೆ ಅತ್ಯಗತ್ಯ ವಸ್ತು. ಕಾವೇರಿ ನದಿಯ ವಿವಾದ ಇದೆ, ಹಾಗೆಯೇ ಕೃಷ್ಣಾ ನದಿಯ ವಿವಾದ ಕೂಡ ಇದೆ. ಕಾವೇರಿ ನದಿ ನೀರಿನ ಹಂಚಿಕೆಯ ಒಪ್ಪಂದದ ಪ್ರಕಾರ ತಮಿಳುನಾಡಿಗೆ ವರ್ಷಕ್ಕೆ ೧೭೭.೨೫ ಟಿ.ಎಂ.ಸಿ. ನೀರು ಬಿಡಬೇಕು. ಕಳೆದ ವರ್ಷ ೩೫೦ ಟಿ.ಎಂ.ಸಿ. ನೀರನ್ನು ಹರಿಸಿದ್ದೇವೆ. ಮೆಟ್ಟೂರು ಜಲಾಶಯದ ಸಾಮರ್ಥ್ಯ ಬರೀ ೯೬ ಟಿ.ಎಂ.ಸಿ. ಉಳಿದ ನೀರೆಲ್ಲ ಸಮುದ್ರದ ಪಾಲು. ಇಂಥ ಸಂದರ್ಭದಲ್ಲಿ ಮೇಕೆದಾಟಿನಲ್ಲಿ ಅಣೆಕಟ್ಟೆ ಕಟ್ಟಿ ಹೆಚ್ಚುವರಿ ನೀರನ್ನು ಹಿಡಿದಿಡಬಾರದೇಕೆ? ಇದು ಕರ್ನಾಟಕ ಎತ್ತಿರುವ ಸಕಾರಣ ಪ್ರಶ್ನೆ.

**ಹೊಸತು:** ಮಹಾಪೂರದ ಪ್ರಶ್ನೆ ಬಂದಾಗ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಪರಿಹಾರವನ್ನು ನಿರ್ಧರಿಸುವ ಬಗೆ ಹೇಗೆ?

**ಶ್ರೀ. ರೆ.:** ಮೊದಲು ವಿಕೋಪದ ಪ್ರಮಾಣವನ್ನು ತಜ್ಞರು ಜಿಲ್ಲಾಧಿಕಾರಿಗಳ ಗಮನಕ್ಕೆ ತರಬೇಕು. ಸರ್ಕಾರದ ವತಿಯಿಂದ ಪ್ರತಿನಿಧಿಗಳು ಸಮೀಕ್ಷೆಯಲ್ಲಿ ಪಾಲ್ಗೊಳ್ಳುತ್ತಾರೆ. ವಿಕೋಪದ ಪರಿಣಾಮವನ್ನೂ ಖಚಿತಪಡಿಸಿಕೊಳ್ಳುತ್ತಾರೆ. ಎರಡು ರೀತಿಯ ನೆರವು ಸಂತ್ರಸ್ತರಿಗೆ ಸಿಕ್ಕುತ್ತದೆ. ಒಂದು 'ಸ್ಟೇಟ್ ಡಿವಾಸ್ಟೇಷನ್ ರೆಸ್ಪಾನ್ಸ್ ಫಂಡ್', ವಿಕೋಪ ಬಂದಾಗ ನೆರವಾಗಲೆಂದೇ ರಾಜ್ಯ ಸರ್ಕಾರ ರಚಿಸಿರುವ ನಿಧಿ ಸಂಸ್ಥೆ. ವಿಕೋಪ ಘಟಿಸಲಿ, ಬಿಡಲಿ, ಪೂರ್ವತಯಾರಿಗಾಗಿ ಪ್ರತಿವರ್ಷ ೩೨೦ ಕೋಟಿ ರೂಪಾಯಿ ಮೀಸಲಿಡಲಾಗುತ್ತದೆ. ಈ ಪೈಕಿ ಶೇ. ೭೫ ಭಾಗ ಕೇಂದ್ರದ ನೆರವು, ಶೇ. ೨೫ ಭಾಗ ರಾಜ್ಯದ ನೆರವು. ಕೇಂದ್ರ ಸರ್ಕಾರ 'ನ್ಯಾಷನಲ್ ಡಿಸಾಸ್ಟರ್ ರೆಸ್ಪಾನ್ಸ್ ಫಂಡ್' ಮೂಲಕ ಸಂತ್ರಸ್ತರಿಗೆ ದೊಡ್ಡ ಪ್ರಮಾಣದಲ್ಲೇ ನೆರವು ಕೊಡುತ್ತದೆ. ಯಾವ ಬಗೆಯ ನಷ್ಟ ಸಂಭವಿಸಿದೆ ಎಂದು ಅಂದಾಜುಮಾಡಿ ಅದರ ಪ್ರಕಾರವೇ ಪರಿಹಾರ ಕೊಡುತ್ತದೆ. ಉದಾ: ವಾಸಿಸುತ್ತಿರುವ ಮನೆ ಸಂಪೂರ್ಣ ನಾಶವಾಗಿದ್ದರೆ, ಪ್ರತಿ ಮನೆಗೆ ಪರಿಹಾರ ರೂಪದಲ್ಲಿ ೯೫,೦೦೦ ರೂ. ನೆರವು ನೀಡುತ್ತದೆ.

ನಮ್ಮ ಸಂಸ್ಥೆ 'ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ', ಮಳೆ, ಬರ, ಭೂಕಂಪನ, ಅತಿವೃಷ್ಟಿ, ಅನಾವೃಷ್ಟಿ ಮುಂತಾದ ಬಾಬತ್ತುಗಳ ಬಗ್ಗೆ ಸಕಾಲದಲ್ಲಿ ಎಚ್ಚರಿಕೆ ಕೊಡುವ ಕೆಲಸವನ್ನು ಅತ್ಯಂತ ವೈಜ್ಞಾನಿಕವಾಗಿ ಮಾಡುತ್ತಿದೆ. ನಾನು ಕಲಿತ ಭೂವಿಜ್ಞಾನದ ತಿಳಿವು ಸಮಾಜಕ್ಕೆ ನೆರವಾಗುತ್ತಿದೆ ಎನ್ನುವಾಗ ನನ್ನ ಜೊತೆ ಎರಡು ಪಾಳಿಗಳಲ್ಲಿ ಕೆಲಸ ಮಾಡುತ್ತಿರುವ ನಮ್ಮ ಸಹೋದ್ಯೋಗಿಗಳ ಪಾತ್ರವೂ ದೊಡ್ಡದು. ಜ್ಞಾನ, ಸಮಾಜಕ್ಕೆ ಉಪಯೋಗವಾಗಬೇಕು. ಅದು ಆಗುತ್ತಿದೆ ಎನ್ನುವುದೇ ನನಗಿರುವ ದೊಡ್ಡ ಸಮಾಧಾನ.

ಲೇಖನ ಸಿದ್ಧಪಡಿಸಿದವರು : **ಡಾ॥ ಟಿ. ಆರ್. ಅನಂತರಾಮು**
ನಂ. ೫೩೪, 'ಧಾತ್ರಿ', ೨೦ನೇ ಕ್ರಾಸ್, ೧೪ನೇ ಮುಖ್ಯರಸ್ತೆ,
೧ನೇ ಹಂತ, ಕುಮಾರಸ್ವಾಮಿ ಲೇಔಟ್, ಬೆಂ. – ೫೬೦೧೧೧
email : traramu@gmail.com



# ನಾನು ರೈತನಾದೆ...!

**ಗುಂಡುರಾವ್ ದೇಸಾಯಿ**

ಹಲವು ದಿನದ ಕನಸಿತ್ತು ನಾನು ಒಳ್ಳೆಯ ರೈತ ನಾಗಬೇಕೆಂದು, ಹೊಲವನ್ನು ಏನೆಲ್ಲ ಮಾಡಬೇಕು ಎಂದು. ಬಾಲ್ಯದಿಂದಲೂ ನಮ್ಮಪ್ಪ ಅಮ್ಮ ಹೊಲಕ್ಕೆ ಕರೆದುಕೊಂಡು ಹೋಗಿ ಆ ಬದುಕನ್ನು ಆಪ್ತವಾಗಿಸಿದ್ದು ಅದಕ್ಕೆ ಕಾರಣ ವಾಗಿರಬಹುದು. ಹೊಲಕ್ಕೆ ಅಂದ್ರ ಸಾಕು ನಾನು ಮೊದಲು ತಯ್ಯಾರಾಗುತ್ತಿದ್ದೆ. ಹೊಲದಲ್ಲಿ ಆಡುವ ಆಟ, ನೋಡುವ ನೋಟ ಚಂದ. ಅದರಲ್ಲಿ ನಮ್ಮ ರೈತರು ಮಧ್ಯಾಹ್ನ ಊಟಕ್ಕೆ ತರುವ ಕಟಗು ಸಜ್ಜಿ ರೊಟ್ಟಿ ತಿನ್ನುವ ಆಸೆ. ಅಮ್ಮ ಬೇಡವೆಂದರೂ ಅಪ್ಪ ತಿನ್ನು ಅವರ ಜೊತೆ ಕುಳಿತು ಎಂದು ಪ್ರೋತ್ಸಾಹಿಸುತ್ತಿದ್ದ. ಅವರು ಅಂಜಿಕೆಯಿಂದಲೆ ನನಗೆ ಕೊಡುತ್ತಿದ್ದರು, ನಾನು ಖುಷಿಯಿಂದ ತಿನ್ನುತ್ತಿದ್ದೆ. ಬಡತನದಲ್ಲಿ ಬಸವಳಿದಿದ್ದರೂ ಧಣಿತನದ ಹೆಸರೇನು ಹೋಗಿರಲಿಲ್ಲ. 'ಧಣೇರು ನಮ್ಮ ಜೊತೆ ಊಟ ಮಾಡತಾರೋ' ಅಂದು ರೈತರು ಅವರ ಮಕ್ಕಳು ಖುಷಿ ಪಡತಿದ್ರು. ಹತ್ತಿ ಸುಗ್ಗಿಯಲ್ಲಂತೂ ಗ್ರಾಮದಾಗ ಒಂದು ಹಬ್ಬದ ವಾತಾವರಣ. ಮಳೆ ಕಾಲ ಕಾಲಕ್ಕೆ ಚೆನ್ನಾಗಿ ಆಗುತ್ತಿದ್ದುದರಿಂದ ಇಡೀ ಊರೆ ಹತ್ತಿ ಬಿತ್ತುತ್ತಿದ್ದರು. ಹಳ್ಳಿಗೆ ಹತ್ತಾರು ಲಾರಿಗಳು ಬಂದು ವ್ಯಾಪಾರ ಮಾಡಿ ತುಂಬಿಸಿ ಕೊಂಡು ಹೋಗುತ್ತಿದ್ದವು. ಸುಗ್ಗಿಯಲ್ಲಿ ಹತ್ತಿ ಬಿಡಿಸಿದವರು ತಮ್ಮ ಪಾಲು ಹಾಕಿಸಿ ಕೊಂಡು ಬಂದು ಒಟ್ಟಿಗೆ ಸೇರಿಸಿ ಮಾರುತ್ತಿದ್ದರು. ಜೊತೆಗೆ ಬಿಡಿಸಿಕೊಂಡು ಬಂದ ಹತ್ತಿಯ ಸ್ವಲ್ಪ ಭಾಗ ಮಕ್ಕಳಿಗೆ ಕೊಟ್ಟು ಉಳ್ಳಾಗಡ್ಡಿ ಭಜ್ಜಿ, ಸಿಣ್ಣಿ (ಸಿಹಿ ಖಾದ್ಯ) ಮನೆಗೆ ಒಯ್ಯುತ್ತಿದ್ದರು. ದುಡ್ಡಿಗೆ ಪರ್ಯಾಯವಾಗಿ ಹತ್ತಿ ತೊಗೊಂಡು ಅಷ್ಟೆ ತೂಕದ ಭಜ್ಜಿ, ಸಿಣ್ಣಿ ಕೊಡತಿದ್ರು. ನಾನು ಹತ್ತಿ ಕೊಟ್ಟು ನಮ್ಮ ಬಯಲ ಬಂಕದಲ್ಲಿ ತಿನ್ನುತ್ತಾ ಅಗಸಿ ಮುಂದೆ ಆಡುತ್ತಿದ್ದ ಬಯಲಾಟ ನೋಡಿ ಸಂಭ್ರಮಿಸುತ್ತಿದ್ದೆ.

ಇರಲಿ, ಮನೆಯ ವ್ಯವಹಾರವನ್ನೆಲ್ಲ ಅಪ್ಪ ನಮಗೆಲ್ಲ ಚಿಕ್ಕವರಿರುವಾಗಿನಿಂದಲೇ ವಹಿಸಿದ್ದ. ನಮಪ್ಪನಿಗೆ ಇದ್ದುದ್ದು ಕಳ್ಳಿ ಹೊಲ ಎಂಬ ಏನೂ ಬೆಳೆಯಲಾರದ ಭೂಮಿ. ಎಲ್ಲ ಪೆನಶನ್ ಹಣವನ್ನು ದೊಡ್ಡ ಕುಟುಂಬದ ನಿರ್ವಹಣೆಗಾಗಿ ಖರ್ಚು ಮಾಡಿ ಕೈ ಖಾಲಿ ಮಾಡಿಕೊಂಡಾಗ ಬೇರೆ ಆಗುವ ಸಂದರ್ಭದಲ್ಲಿ ಸಹೋದರರು ಅಭಿಮಾನದಿಂದ ಕೊಟ್ಟಿದ್ದು. ನಲವತ್ತು ವರ್ಷಗಳ ಹಿಂದೆ ಬಂದ ಅಲ್ಪ ಪೆನಶನ್ ದುಡ್ಡನ್ನೆಲ್ಲಾ ಅದರಲ್ಲಿ ಹಾಕಿ ಒಂದು ಕರಕಿ ಇರದ ಹಾಗೆ ಫಲವತ್ತು ಮಾಡಿದ್ದ. ಹೊಲ ಸರಿಯಾಗಿ ಬೆಳೆಯಲಿ ಎಂದು ಆಗಾಗ ಹೆಂಡಿಗೊಬ್ಬರ ಹಾಕಿಸುತ್ತಿದ್ದ. ಆದರೆ ಅಸ್ಪಷ್ಟ ನೆನಪು. ಗೊಬ್ಬರಕ್ಕ ಅಪ್ಪ ರೊಕ್ಕ ಕೊಡತಾನ ಅಂದಕೂಡಲೆ ಅವ್ವ ಜಗಳ ತೆಗಿತಿದ್ಲು. 'ವಯಸ್ಸಾದ ಮೇಲೆ ಹುಟ್ಟಿದ ಮಕ್ಕಳಿಗೇನಾದ್ರೂ ಮಾಡಿ ಹೊಲಕ್ಕೆ ಏಕೆ ಹಾಳು ಮಾಡ್ತಿರಿ' ಎಂದು. ಬಹುಶಃ ಈಗ ನಾನು ವ್ಯವಸಾಯಕ್ಕೆ ಕೈಹಾಕಿದಾಗಿನಿಂದ ಗೊತ್ತಾಗುತ್ತಿದೆ.

ನಾನು ನೌಕರಿ ಸೇರಿದ ಕೂಡಲೆ ನಮ್ಮಪ್ಪ ಅದರ ಜವಾಬ್ದಾರಿಯನ್ನೆಲ್ಲ ನನಗೆ ವಹಿಸಿದ. ಅಪ್ಪ ಅಗಲಿದ ಮೇಲೆ ಸಂಪೂರ್ಣ ನನ್ನ ಮೇಲೆ ಬಿತ್ತು. ಬಾಲ್ಯದಿಂದಲೂ ನನ್ನ ಲೆಕ್ಕಾಚಾರ ಇತ್ತು, ಏನಾದ್ರೂ ಹೊಸದು ಮಾಡಬೇಕೆಂದು. ಆದರೆ ಹತ್ತಿರದಲ್ಲಿ ವಿದ್ಯುತ್ತಿನ ಸಂಪರ್ಕ ಇರದ ಕಾರಣ ಆ ಕನಸು ಈಡೇರಿರಲಿಲ್ಲ. ಮೂರು ಕಿ.ಮೀ.ನಿಂದ ದೂರದಿಂದಾದರು ವೈರ್ ಎಳಿಸೋಣ ಎಂದು ಒಮ್ಮೆ ಭೂಗರ್ಭ ಶಾಸ್ತ್ರಜ್ಞರನ್ನು ಕರೆದುಕೊಂಡು ಬಂದು ಹೊಲದಲ್ಲಿ ನೀರಿನ ಪಾಯಿಂಟ್ ಗುರುತಿಸಿದ್ದೆ. ಹಣಕಾಸಿನ ಹೊಂದಾಣಿಕೆ ಆಗದ ಕಾರಣಕ್ಕಾಗಿ ಕೈಬಿಟ್ಟೆ. ಕಳೆದ ಐದು ವರ್ಷಗಳಿಂದ ಚೆನ್ನಾಗಿ ಬೆಳೆದ ಫಸಲು ಮಳೆಯಿಲ್ಲದೆ ಒಣಗುತ್ತಿದ್ದ ಪೈರನ್ನು ನೋಡಿ ಮನ ಮರಮರ ಮಿಡಿಯುತ್ತಿತ್ತು. ಎರಡು ವರ್ಷದಿಂದ ಸಮೃದ್ಧಿಯಾಗಿ ಬಂದಿದ್ದ ಹತ್ತಿ ಸೂರ್ಯಕಾಂತಿ ಮಳೆಯಿಲ್ಲದೆ ಕಣ್ಣೆದುರಿಗೆ ಬತ್ತಿ ಹೋಗುತ್ತಿದ್ದುದನ್ನು ಕಂಡಾಗ ಹೊಲದಲ್ಲಿ ಆ ಬೆಳೆಯ ರೈತನ ಸ್ಥಿತಿ ನೋಡಿಯಾದರೂ ಮಳೆ ಕಣ್ಣು ತೆರೆಯಬಾರದೆ ಎಂದು ತಾಸುಗಟ್ಟಲೆ ಕುಳಿತು ಅತ್ತಿದ್ದೆ. ಮಳೆಗಾಗಿ ಕಾಣದ ದೇವರಿಗೆ ಕೈಮುಗಿದಿದ್ದೆ. ಅದು ಯಾವದೂ ಫಲಿಸದೆ ಇದ್ದ ಮೇಲೆ ನನಗೆ ಬಹು ನಿರಾಶೆಯಾಯಿತು. ಧಾರವಾಡದಲ್ಲಿ ನನ್ನ ಆತ್ಮೀಯರೊಬ್ಬರು ಆಗತಾನೆ ತಮ್ಮ ಹೊಲದಲ್ಲಿ ಸೋಲಾರ್ ಪಂಪ್‌ಸೆಟ್ ಅಳವಡಿಸಿದ್ರು. ಅದರ ಪ್ರಭಾವ ನನ್ನ ಮೇಲಾಯ್ತು. ಅದು ತಾಲೂಕಿಗೆ ಒಂದು ಸರಕಾರದಿಂದ ಅಲೋಟ್ ಆಗೋದು. ಶಾಸಕರು ರೆಕಮಂಡ್ ಮಾಡಬೇಕೆಂದಾಗ ನನಗೆ ಸರಿಕಾಣಲಿಲ್ಲ. ಕೈ ಬಿಟ್ಟೆ. ನಂತರದಲ್ಲಿ ಸೋಲಾರ ಪಂಪ್‌ಸೆಟ್‌ಗಳು ಎಲ್ಲೆಡೆ ಸಿಗುವ ಸಾಧ್ಯತೆ ಕಂಡುಬಂದಾಗ ಆ ವರ್ಷ ಬೆಳೆ ಚೆನ್ನಾಗಿತ್ತು, ಮಳೆ ಕೈಕೊಟ್ಟಿತ್ತು. ಹೇಗಾದ್ರೂ ಮಾಡಿ ಬೆಳೆ ಉಳಿಸಿಕೊಳ್ಳಲು ಬೋರ್ ಹಾಕೋಣ ಎಂದು ನಿರ್ಧರಿಸಿದೆ. ನಮ್ಮ ರೈತನಿಗೂ ಹೇಳಿದೆ. ಅವರದು ಬಹುದಿನದ ಕೋರಿಕೆಯಾಗಿತ್ತು. ಅವರು ಸಮೀಪದ ಹಳ್ಳಿಯ ಯಾರನ್ನೊ ಕರೆಸಿ ಪಾಯಿಂಟ್ ಮಾಡಿಸಿದ್ರು. ಅದು ಜಿಯೋಲಜಿಸ್ಟ್

> **ಪೂರ್ಣೆ**
>
> **ಹೆಣ್ಣು ಅಬಲೆಯಲ್ಲ (ಬಲೆಯೂ ಅಲ್ಲ); ಚೈತನ್ಯಪೂರ್ಣೆ, ಅನ್ನಪೂರ್ಣೆಯಂತೂ ಸರಿಯೆ!**
>
> ಸಿಪಿಕೆ
> ಮೈಸೂರು

ತೋರಿಸಿದ ಪಾಯಿಂಟ್‌ಗೆ ಸಮೀಪವಿತ್ತು. ನಾನು ಒಂದು ದಿನ ಬೋರವೆಲ್ ಮಿಶನ್‌ಗೆ ಬುಕ್ ಮಾಡಿದೆ. ನಮ್ಮವ್ವ ಯಾರನ್ನೊ ಕೇಳಿ ಬಂದು ಈ ಟೈಮಿಗೆ ಇದೆ ಹೊಡೆಸಬೇಕು ಎಂದು ತಾಕಿತು ಮಾಡಿದ್ಲು. ಮಗ ತನ್ನ ಮಾತು ಕೇಳನು ಎಂದು ಲೇಟಾಗಿ ಅಡುಗೆ ಮಾಡಿ ಸೂಚಿಸಿದ ಸಮಯಕ್ಕೆ ಹಾಜರಿರುವಂತೆ ಮಾಡಿದ್ಲು. ಜೊತೆಗೆ ಮಕ್ಕಳಿಂದ ಪೂಜೆ ಮಾಡಿಸಿ ಆರಂಭಿಸುವಂತೆ ಹೇಳಿದ್ದಳು.

ಆ ದಿನ ನೆನಪಿದೆ, ಅಕ್ಟೋಬರ್ ತಿಂಗಳಿನ ಹುಣ್ಣಿಮೆ ದಿನ. ಮಕ್ಕಳು ಪೂಜೆ ಮಾಡಿದವು. ಬೋರವೆಲ್ ಮಿಶನ್ ಕೊರೆಯಲು ಆರಂಭಿಸಿತು. ೬೦–೭೦ಫೀಟ್ ಹೋದರೂ ಸುಳಿವಿಲ್ಲ ೧೦೦ಫೀಟ್ ಹೋದರೂ ಯಾವುದೇ ಅವಕಾಶ ಕಾಣಲಿಲ್ಲ. ನೀರಾವರಿ ಮಾಡಿ ಮರಗಿಡ ಬೆಳೆಸಬೇಕೆನ್ನುವ ಉತ್ಕಟ ಇಚ್ಛೆ ಹೊಂದಿದ್ದಕ್ಕೆ ಫೇಲಾದ್ರೂ ಚಿಂತೆ ಮಾಡಬಾರದೆಂದು ಗಟ್ಟಿ ನಿರ್ಧಾರ ಮಾಡಿದ್ದೆ. ನಮ್ಮವ್ವನ ನಂಬಿಕೆಯೋ, ಮಕ್ಕಳ ಕೈಗುಣವೊ, ರೈತನ ಹಾರೈಕೆಯೊ ೧೧೦ಫೀಟ್ ಹೋದಾಕ್ಷಣ ನೀರು ಚಿಮ್ಮಕ್ಕತ್ತಿತು. ಎಲ್ಲರ ಮುಖದಲ್ಲೂ ಮಂದಹಾಸ. ಅದಕ್ಕಿಂತಲೂ ಆರಂಭದಲ್ಲಿ ಡ್ರೀಲ್ ಮಾಡುವಾಗ ಕರಿಕಲ್ಲು ಬಂದಿತ್ತು. ಇದು ಫೇಲಾಗುತ್ತೆ ಎಂದು ಎಲ್ಲರೂ ಹೇಳಿದ್ದರು. ಆದರೆ ಕರಿಕಲ್ಲಿನಲ್ಲೂ ನೀರಿನ ಒರತೆ ಎದ್ದಾಗ ನಮ್ಮ ರೈತ ಇಬ್ಬರೂ ಮಕ್ಕಳನ್ನು ಹಿಡಿದುಕೊಂಡು ಕುಣಿದಾಡಿದ. ನೀರು ಒಂದೆ ಅಳತೆಯಲ್ಲಿ ಚಿಮ್ಮುತ್ತಾ ಹೋಯ್ತು. ನೀರು ಚಿಮ್ಮುವುದು ನೋಡಿ ಅಕ್ಕ ಪಕ್ಕದವರೆಲ್ಲ ಓಡೋಡಿ ಬಂದ್ರು. 'ಸರ್ ಹೊಲದಾಗ ಭಾರಿ ನೀರು ಬಿದ್ದಾದೆ' ಅಂತ ಅನಕೊಂತ. ಉಕ್ಕುವ ನೀರಿನಿಂದ ದೊಡ್ಡ ಕಲ್ಲುಗಳು ಹೊರಬರಲಾರಂಭಿಸಿದಾಗ ನಮ್ಮ ರೈತನ ಹಿಗ್ಗು ಹೇಳತೀರದು. ಕುಣಿದು ಕುಪ್ಪಳಿಸಿದ. ೨೦೦ ಫೀಟ್‌ವರೆಗೂ ಹೊಡಿ ಅಂದ. ಅವನು 'ಇಲ್ಲರಿ ನೀರಿನ ಫೋರ್ಸಗೆ ಒಳಗಡೆ ಹೋಗ್ತಾ ಇಲ್ಲಾ ಸಾಕು ಈಗಲೆ ಮೂರು ಇಂಚಿನ ಮೇಲೆ ಇದೆ ಎಂದ ಆಪರೇಟರ್. ನಮ್ಮ ರೈತನಿಗೆ ೨೦೦ ಫೀಟ್ ಹೊಡೆಸಲೇಬೇಕೆಂಬ ಆಸೆ. ಆದರೆ ಮಷಿನ್ ಹಾಳಾಗುತ್ತೆ ಎಂದು ಅವನು ೧೮೦ಫೀಟ್‌ಗೆ ಕೈಚೆಲ್ಲಿದ. ಅಂದು ನನಗಂತೂ ಮಕ್ಕಳು ಹುಟ್ಟಿದಾಗಿನ ಸಂಭ್ರಮವೋ ಸಂಭ್ರಮ. ರೈತ ಹೊಲದಲ್ಲಿ ಹತ್ತಾರು ಬಾರಿ ಕೊರೆಸಿ ಸೋತಿದ್ದ. ಗಂಗಾದೇವಿ ಎಲ್ಲರಿಗೂ ಒಲಿಯಲ್ಲೀ ನೀವು ಬಾಳ ಪುಣ್ಯವಂತ್ರೂ ಗೆದ್ರಿ ಎಂದು ನನಗಿಂತಲೂ ಹೆಚ್ಚು ಖುಷಿ ಪಟ್ಟ.

ಬೋರ್ ಹಾಕಿದ್ದಾಯಿತು. ಎಂಗೇಜ್‌ಮೆಂಟ್ ಆದ ಮೇಲೆ ಮದುವೆ ಬೇಗ ಮುಗಿಸಬೇಕೆನ್ನುವ ಖಯಾಲಿ ಇದ್ದೆ ಇರುತ್ತಲ್ಲ ಹಾಗೆ ಬೋರ್ ಹಾಕಿದ ಮೇಲೆ ಬೇಗ ಸ್ಟಾರ್ಟ್ ಮಾಡಬೇಕೆನ್ನುವ ಹುಚ್ಚು ಹಿಡಿಯಿತು. ಕರೆಂಟ್ ಅಳವಡಿಸಲು ಅಲೆದಾಡಿದೆ. ಅಡ್ವಾನ್ಸ್ ಕೊಡಬೇಕು, ಮೇಲೆ ಲಂಚ ಜೊತೆಗೆ ವರ್ಷತನಕ ಕಾಯಬೇಕು ಅಂದ್ರು ಗುತ್ತೇದಾರರು. ದುಡ್ಡುಕೊಟ್ಟು ಸಿಕ್ಕಿಹಾಕಿಕೊಂಡವರನ್ನು ನೋಡಿದ್ದೆ. ನನಗೆ ಅಷ್ಟು ವ್ಯವಧಾನವಿರಲಿಲ್ಲ. ಸೋಲಾರ್ ಪಂಪ್‌ಸೆಟ್‌ಗಾಗಿ ವಿಚಾರಿಸಿದೆ. ಅದು ಭಲೋ ಅನಸ್ತು ಆದ್ರೂ ಕರೆಂಟ್‌ಗಾಗಿ ಪ್ರಯತ್ನ ಬಿಡಲಿಲ್ಲ. ರೈತನಿಗೂ ಬೇಗ ನೀರು ಬಿಡಬೇಕೆಂಬುದು, ನನಗೂ ನನ್ನ ಹೊಲದಲ್ಲಿ ನೀರು ಹರಿಯುವುದನ್ನು ನೋಡಬೇಕೆಂಬ ಅದಮ್ಯ ಉತ್ಸಾಹ ಬೇರೆ. ಅಷ್ಟರೊಳಗೆ ನನ್ನ ಹತ್ತಿರದ ಹೊಲದಲ್ಲಿ ಗಂಗಾಕಲ್ಯಾಣ ಯೋಜನೆಯಲ್ಲಿ ಬೋರ್ ಹಾಕಿದ್ದು ನೆನಪಿಗೆ ಬಂತು. ಆದರೆ ನಾಲ್ಕು ವರ್ಷ ಆದ್ರೂ ಟಿ.ಸಿ. ಕೂಡ್ರಿಸಿರಲಿಲ್ಲ. ಅವರೊಂದಿಗೆ ಒಪ್ಪಂದ ಮಾಡಿಕೊಂಡು ದುಡ್ಡು ಕೊಟ್ಟು ನನ್ನ ಸ್ನೇಹಿತರ ಅಣ್ಣನ ಮುಖಾಂತರ ಅಲ್ಲಿ ಟಿ.ಸಿ. ಬರುವ ಹಾಗೆ ಮಾಡಿದ್ವಿ. ಯಾವಾಗ ಟಿ.ಸಿ. ಬರುವುದು ತಿಳಿಯಿತೊ ಅವ ಕ್ಯಾತೆ ತೆಗೆದ. ಇದು ನನ್ನ ಟಿ.ಸಿ. ನಾನು ಯಾರಿಗೆ ಕೊಡಲ್ಲ. ಕೊಡಂಗಿದ್ರೆ ಕೇಳಿದಷ್ಟು ದುಡ್ಡು ಕೊಡಲೇಬೇಕೆಂದು ಹಠ ಹಿಡಿದ. ನನಗೆ ಅವನ ಮಾತು ಕೇಳಿ ಶಾಕ್ ಆಯ್ತು. 'ಸರ್, ಹ್ಯಾಗಾದ್ರೂ ಮಾಡಿ ಟಿ.ಸಿ. ಬರುವಾಂಗ ಮಾಡ್ರಿ ಎಂದಿದ್ದವ ಹೀಗೆ ತಿರುಗಿ ಬಿದ್ದಿದ್ದ. ಇಂಥವರ ಸಹವಾಸ ಎಂದಿಗೂ ತೊಂದರೆ ಎಂದು ಸೋಲಾರ್‌ಗೆ ಮೊರೆಹೋದೆ.

ಒಂದು ಕಂಪನಿಯವರು ಬ್ಯಾಂಕಿನಿಂದ ಸಾಲ ಕೊಡಿಸುವುದಾಗಿ ಒಂದೇ ತಿಂಗಳಲ್ಲಿ ಅಳವಡಿಸುವುದಾಗಿ ಹೇಳಿದಾಗ ನನಗೆ ಖುಷಿಯಾಗಿ 'ಓಕೆ' ಅಂದೆ. ಅವರು ಬ್ಯಾಂಕ್ ಕೆಲಸ ಆಗದಿದ್ದರೂ ಸೋಲಾರ್ ಪೆನಲ್ ತಂದು ಫಿಟ್ ಮಾಡಿದರು. ಸೋಲಾರ್ ಬಗ್ಗೆ ಕೇಳಿದ್ದೆ, ಅದರಿಂದ ಕಾರ್ಯ ನಿರ್ವಹಿಸುವ ಉಪಕರಣಗಳನ್ನು ನೋಡಿದ್ದೆ, ನೀರು ಹೇಗೆ ಎತ್ತಬಹುದು ಎಂದು ಗ್ರಹಿಸಿರಲಿಲ್ಲ. ಸೌರಶಕ್ತಿ ಡಿ.ಸಿ. ಕರೆಂಟಾಗಿ ಅದು ಯಾಂತ್ರಿಕ ಶಕ್ತಿಯಾಗಿ ಪರಿವರ್ತಿತವಾಗಿ ಅದರಿಂದ ಹೊರಬರುವ ನೀರು ನೋಡುವ ಕಾತರ. ಎಲ್ಲಾ ಅಳವಡಿಸಿಯಾಗಿತ್ತು. ಅಂದು ನೂರಾರು ಜನ ಸೇರಿದ್ದರೂ ಎಲ್ಲರಿಗೂ ಉಪ್ಪಿಟ್ಟು, ಸೀರಾ ವ್ಯವಸ್ಥೆ ಮಾಡಲಾಗಿತ್ತು. ಆದರೆ ಅಂದು ಎಬಿಬಿ (ಕನವರ್ಟರ್) ಅಳವಡಿಸುವುದರಲ್ಲಿ ತೊಂದರೆ ಕಂಡಿದ್ದರಿಂದ ಆರಂಭವಾಗಲಿಲ್ಲ. ಹಾಗಾಗಿ ದೂರದಿಂದ ಬಂದಿದ್ದ ಬಂಧುಗಳಿಗೆ ನಿರಾಸೆಯಾಯಿತು. ಅದಾದ ವಾರದ ನಂತರ ಬೆಂಗಳೂರಿನ ಇಂಜಿನಿಯರ್ ಬಂದು ಆರಂಭಿಸಿದ್ದ. ಆಗ ನಾನು ಶಾಲೆಯಲ್ಲಿದ್ದೆ, ನನಗೆ ರೈತ ಸರ್ ಸಿಕ್ಕಾಪಟ್ಟೆ ನೀರು ಒಗಿತಾ ಇದೆ ಬನ್ನಿ ಎಂದಾಗ ಎದ್ನೋ ಬಿದ್ನೋ ಎಂದು ಓಡಿ ಹೋಗಿ ಸಂಭ್ರಮಿಸಿದ್ದೆ.

ಈಗ ನೂರೆಂಟು ಯೋಚನೆಗಳ ಸರದಿ. ಅದು ಮಾಡಬೇಕು ಇದು ಮಾಡಬೇಕು. ಅದರಲ್ಲಿ ರೈತನ ಮಗ ನನ್ನ ವಿದ್ಯಾರ್ಥಿ ತರತರ ಆಸೆ ಹುಟ್ಟಿಸುತ್ತಿದ್ದ. ಕೆ.ಇ.ಬಿ.ಗೆ ಮೊರೆಹೋಗಿದ್ದ ನನಗೆ ಸೋಲಾರ್ ಅಳವಡಿಸಲು ಪ್ರಚೋದಿಸಿದವನು ಅವನೆ. ಎಲ್ಲಾ ಕಾರ್ಯ ಮುಗಿಯುವಷ್ಟರಲ್ಲಿ ಡಿಸೆಂಬರ್ ಬಂದಾಗಿದ್ದರಿಂದ ಬತ್ತಿಹೋಗಿದ್ದ ಹತ್ತಿ ಗಿಡಕ್ಕೆ ನೀರು ಬಿಟ್ಟು ಗೊಬ್ಬರ ಹಾಕಿದ್ರೂ ಏನೂ ಪ್ರಯೋಜನವಾಗಲಿಲ್ಲ. ಉಳಿದ ಭಾಗದಲ್ಲಿ ಮೆಕ್ಕೆ ಜೋಳ ಹಾಕಿ ಬೆಳೆ ತೆಗೆದಿವಿ. ಆದರೆ ನೀರಾವರಿ ಮಾಡಿದ ಮೇಲೆ ಆಯವ್ಯಯ ತಾಳೆ ನೋಡಿದರೆ ವ್ಯಯ ಜಾಸ್ತಿ ಆಗಿತ್ತು. ದಾರಿಗೆ ಇದ್ದ ಹೊಲ ನನಗೆ ಸೋಲಾರ್ ಪ್ಯಾನಲ್‌ಗಳನ್ನು ಯಾರಾದ್ರೂ ಕದ್ದರೆ ಎಂಬ ಭಯ ಅದಕ್ಕಾಗಿ ಹಲವಾರು ತಿಂಗಳು ನಿದ್ದೆನೆ ಮಾಡಲಿಲ್ಲ. 'ರೈತ ಹಳ್ಳಿಗರು ಅನ್ನದ ಚೀಲಕ್ಕೆ ಕಲ್ಲ ಹಾಕಲ್ರಿ ಏನು ಆಗಲ್ಲರಿ' ಎಂದು ಸಮಾಧಾನ ಮಾಡಸ್ತಿದ್ರೂ ಊರಿಂದ ೬ ಕಿ.ಮೀ. ದೂರವಿದ್ದ ಹೊಲಕ್ಕೆ ನಡುರಾತ್ರಿಯಲ್ಲಿ ಹೋಗಿ ಬರುತ್ತಿದ್ದೆ.

ರೈತ ಹಾಗೂ ಅವನ ಮಗ ಹೊಲದ ಸುತ್ತಲೂ ಫಿಂಚಿಂಗ್ ಮಾಡಬೇಕರಿ ದನದ ಕಾಟ ತಪ್ಪತಾವೆ ಅಂದ. ಸಾಲಕೊಟ್ಟ ಬ್ಯಾಂಕ್ ಮ್ಯಾನೇಜರ್ ಅನುಕೂಲ ಇದ್ದುದರಿಂದ ತಮ್ಮ ಲಾಭಕ್ಕೆ ಇನುರೆನ್ಸ್ ಮಾಡಿಸಿಕೊಂಡು ಒಂದು ಲಕ್ಷ ಕೇಳಿದರೆ ಎರಡು ಲಕ್ಷ ಕೊಟ್ರು ಅದರಲ್ಲಿ ಅರ್ಧ ಲಕ್ಷ ಎರಡು ಕಂತಿನ ಹಣ ಮುರಿದುಕೊಂಡು. ಮಾಡುವ ಭರಾಟೆಯಲ್ಲಿ ಯಾವುದು ಕಾಣಲ್ಲ, ಗಂಡಿಗೆ ಮೀಸೆ ಮೂಡಿದಾಗ ದೇಶ ಕಾಣದ ಹಾಗೆ. ಎಲ್ಲಿಂದಲೋ ಕಲ್ಲು ಮತ್ತೆಲ್ಲಿಂದಲೋ ತಂತಿ ಮಗದೆಲ್ಲಿಂದಲೋ ತಂತಿ ಬಿಗಿಯುವವರನ್ನು ಕರೆದುಕೊಂಡು ಬಂದು ಸುಮಾರು ಹಣ ವ್ಯಯಿಸಿ ಹೊಲದ ಸುತ್ತ ಬಂದೋಬಸ್ತ್ ಮಾಡಿದೆ. ನಂತರ 'ರೈತ ನೀರು ಕಟ್ಟಾಕ ಆಗಲ್ಲರಿ ಡ್ರಿಪ್ ಮಾಡಿಸೋಣ' ಅಂದ 'ಆಯ್ತು' ಅಂದೆ. ಬೇಸಿಗೆ ಬೆಳೆ ಮಾಡಿ ನಾನು ಹಾಕಿದ ಬಂಡವಾಳಕ್ಕೆ ಬಡ್ಡಿಯಾದ್ರೂ ಮೆಂಟೇನ್ ಆಗಲಿ ಎಂದು ಮೂವತ್ತ ಸಾವಿರ ರೂಪಾಯಿ ಖರ್ಚು ಮಾಡಿ ಎರಡುವರೆ ಎಕರೆಗೆ ಡ್ರಿಪ್ ಮಾಡಿದೆ. ಅವನು ಅಂದ: ಬ್ಯಾಸಿಗೇಲಿ ಏನು ಬೆಳೆಯಲ್ಲರಿ ಮುಂದೆ ಮಾಡೋಣ ಎಂದು ಸುಮ್ಮನಿರಿಸಿದ.

ಆನಂತರದಲ್ಲಿ ಮಳೆಗಾಲ ಸಮೀಪ ಬಂದ್ರೂ ಅದರಲ್ಲಿ ಏನು ಮಾಡಲು ರೆಡಿ ಇಲ್ಲದಾಗ ಡ್ರಿಪ್‌ಗೆ ಸಬ್ಸಿಡಿ ತಗೊಂಡ ನೆಪವಾಗಿಟ್ಟುಕೊಂಡು ಸಸಿ ನಾಟಿ ಮಾಡಿಸಿದೆ. ಆರಂಭದಲ್ಲಿ ಬದನೆ ಚಲೊ ಬಂತು. ಆದರೆ ರೇಟು ಇರದೆ ಸೊರಗಿತು. ಮಳೆಗಾಲದಲ್ಲಿ ಹಸಿರು ಹೆಚ್ಚಿಸಲು ೧೫೦೦ ಗಿಡಗಳನ್ನು ಸುತ್ತಲೂ ನೆಡಿಸಿದೆ. ನಡುನಡುವೆ ಹಣ್ಣಿನ ಗಿಡಗಳನ್ನು ಬೆಳೆಸಿದೆ. ಒಂದೆಡೆ ಉಳ್ಳಾಗಡ್ಡಿ ಪ್ರಥಮ ಬೆಳೆ ಕಣ್ಣು ಕೋರೈಸುವಂತೆ ಇತ್ತು. ಮೂರು ತಿಂಗಳು ನಿರಂತರವಾಗಿ ಬಿದ್ದ ಮಳೆ ಖುಷಿಯನ್ನು ಕಸಿದುಕೊಂಡಿತು. ಕಟ್ಟು ಮಾಡಿ ರೋಡಿನ ಮೇಲೆ ಹಾಕಿದ್ದ ಎರಡು ನೂರು ಪಾಕೀಟಿನಷ್ಟು ಉಳ್ಳಾಗಡ್ಡಿ ಅಕಾಲಿಕವಾಗಿ ಬಂದ ಮಳೆಯ ಹೊಡೆತಕ್ಕೆ ಸಿಕ್ಕಿ ಮುರಾಬಟ್ಟಿ ಮಾಡಿತು. ಅದನ್ನೆಲ್ಲಾ ಒಣಗಿಸಿ ಹುಬ್ಬಳ್ಳಿ ಮಾರುಕಟ್ಟೆಗೆ ಒಯ್ಯುವುದರೊಳಗೆ ಕೊಳತು ಹಾಗೆ ಚೆಲ್ಲಿ ಬರುವಂತಾಯಿತು. ಅಲ್ಲಿ ನಮ್ಮ ಗಡ್ಡಿಗೆ ಕಿಮ್ಮತ್ತಿಲ್ಲದ ರೇಟಿಗೆ ಹರಾಜು ಕೂಗಿದಾಗ ಕಪಾಳದಲ್ಲಿ ಕಣ್ಣೀರು ಇಳಿದಿದ್ದವು. ಈ ಸರಿ ಏನಾದ್ರೂ ಮಾಡಿ ಹಾಕಿದ ೮ ಲಕ್ಷ ಬಂಡವಾಳಕ್ಕೆ ಗಂಟಾದ್ರೂ ತೆಗೆಯಬೇಕು ಎನ್ನುವ ಸಾಹಸದಲ್ಲಿ ಪಪ್ಪಾಯಿ ಮಾಡೋಣ ಎಂದು ರೈತನಿಗೆ ಹಾಗೂ ಅವನ ಮಗನಿಗೆ ಹೇಳಿದೆ. ಖುಷಿಯಿಂದ

ಅವರೂ ಒಪ್ಪಿದ್ರು. ಆ ಸಸಿಗೆ ಆರ್ಡರ್ ಕೊಟ್ಟು ೫ ಎಕರೆ ವ್ಯಾಪ್ತಿಯಲ್ಲಿ ಪಪ್ಪಾಯಿ ನಾಟಿ ಮಾಡಿದ್ದಾಯಿತು. ಹಚ್ಚಿದ ವಾರಕ್ಕೆ ಮಳೆ ಬಿಡದೆ ಸುರಿಯತೊಡಗಿತು. ಮೋಡವೇ ಸೋರುವ ಮನೆಯಂತಾಯಿತು. ಆ ಮಳೆಗೆ ನಾಟಿ ಮಾಡಿದ ೫ ಸಾವಿರ ಗಿಡಗಳಲ್ಲಿ ೩ ಸಾವಿರ ಗಿಡಗಳು ನಾಶವಾದವು. ಮತ್ತೆ ತರಿಸಿ ಹಚ್ಚಿದಾಗ ಮಳೆ ಮತ್ತೆ ಕಾಡತೊಡಗಿತು. ಅವನ್ನು ಹೇಗಾದ್ರೂ ಮಾಡಿ ಕಾಪಾಡಿಕೊಳ್ಳಬೇಕೆಂದು ಯೋಚಿಸಿ ಅದಕ್ಕೊಬ್ಬ ಡಾಕ್ಟ್ರನ್ನಿಟ್ಟು ಅದಕ್ಕೆ ಗುಳಿಗೆ ಔಷಧಿ ಸಿಂಪಡಿಸಹತ್ತಿದೆವು. ಅದರ ಖರ್ಚು ಲಕ್ಷ ಏರತೊಡಗಿತು. ಪಪ್ಪಾಯಿ ಮಾಡಿದರೆ ಬಳ್ಳಿ ಗಿಡಗಳನ್ನು ವೈರಸ್ ಬರುವ ಕಾರಣಕ್ಕೆ ಹಾಕುವಂತಿಲ್ಲ. ಹಾಕಿದ್ದರೆ ಬೇರೆ ಇರುತ್ತಿತ್ತು. ಕಟ್ಟು ಬಿದ್ದು ಕಾಲಿಫ್ಲವರನ್ನು ಹಚ್ಚಿದೆವು. ಕಳೆದ ವರ್ಷ ಹಾಕಿದ್ದ ಸ್ವಲ್ಪ ಬೆಳೆ ಉತ್ತಮವಾಗಿ ಫಸಲು ನೀಡಿತ್ತು. ಆದರೆ ಈಗ ಸಮೃದ್ಧವಾಗಿ ಬಂತು ಆದರೆ ಹೂ ಹುಟ್ಟಲಿಲ್ಲ. ಅದಕ್ಕಾಗಿ ಅನೇಕರನ್ನು ಸಂಪರ್ಕಿಸಿದಾಗ ಅದು ಚಳಿಗಾಲದ ಬೀಜವಾದ್ದರಿಂದ ಲೇಟಾಗಿ ಬರುವುದೆಂದರು. ನಾನು ನಿರಂತರವಾಗಿ ಬರಲಿ ಎಂದು ಅಂತರದಲ್ಲಿ ನಾಟಿ ಮಾಡಿಸಿದ್ದೆ. ಮೂರು ತಿಂಗಳ ನಂತರ ಹೂ ಬಿಡಲು ಆರಂಭಿಸಿತು. ನನಗೆ ಖುಷಿಗೆ ಪಾರವೇ ಇರಲಿಲ್ಲ. ಕಾಲಿಫ್ಲವರ್ ಕೆ.ಜಿ.ಗೆ ಏನಿಲ್ಲವೆಂದರೂ ೪೦ ರೂ. ಇರುತ್ತೆ. ಲಕ್ಷಕ್ಕಿಂತ ಹೆಚ್ಚಾದ್ರೂ ಗಳಿಸಬಹುದೆಂದು. ಆದರೆ ನಮ್ಮ ದುರದೃಷ್ಟಕ್ಕೆ ಕೆ.ಜಿ.ಗೆ ೫ ರೂ. ಬಂದು ಅದರಿಂದ ಎರಡು ರೂಪಾಯಿಗೆ ಇಳಿಯಿತು. ಎಲ್ಲಿಂದಲೊ ಬ್ರೋಕರ್‌ಗಳು ಮಾರುಕಟ್ಟೆಗೆ ಅದನ್ನು ತಂದು ಬಿಕರಿ ಆಗೋ ಹಾಗೆ ಮಾಡಿದ್ರು. ಸಿಂಧನೂರಿಗೆ, ರಾಯಚೂರಿಗೆ ನಾಲ್ಕೈದು ಸಾರಿ ಕಳಿಸಿದ ಫ್ಲವರ್ ಚೀಲಕ್ಕೆ ೧೦ ರೂ. ಸಹಿತ ತೆಗೆದುಕೊಳ್ಳಲಾರದೆ ಅಲ್ಲೆ ಒಗದು ಬರಬೇಕಾಯ್ತು. ಖರ್ಚು ಮಾಡಿದ ಹಣವೆಲ್ಲ ನೀರು ಪಾಲಾಯ್ತು. ಒಂದುವರೆ ಕೆ.ಜಿ. ತೂಗುತ್ತಿದ್ದ ಕಾಲಿಫ್ಲವರ್ ಎರಡು ರೂಪಾಯಿಗೆ ಮಾರಿದರೆ ಹೇಗಾಗಬೇಡ. ದುರಂತವೆಂದರೆ ಹೋಟಲ್‌ಗಳಲ್ಲಿ ಅದೇ ಪ್ಲೇಟ್ ಗೋಬಿ ಮಂಚೂರಿ ಬೆಲೆ ೬೦ ರೂ. ಹೋಟಲ್ ತಿಂಡಿಗಳು ತರಕಾರಿ ಬೆಲೆ ಏರಿದಾಗ ಏರುತ್ತವೆ, ಇಳಿದಾಗ ಇಳಿಯುವುದಿಲ್ಲ. ತಲೆಕೆಟ್ಟು ಬಿತ್ತಿದ್ದಷ್ಟೂ ರೂಟ್ ಹೊಡೆಸಲು ತಿಳಿಸಿದೆ. ದುರದೃಷ್ಟ ಎಂಬಂತೆ ನಮ್ಮ ರೈತನ ಮಗ ಯಾವ ಭಾವದಲ್ಲಿದ್ದನೋ ಕಾಲಿಫ್ಲವರ್‌ನ ಜೊತೆ ಮಧ್ಯದ ಸಾಲುಗಳಲ್ಲಿ ಹತ್ತುಸಾವಿರ ಖರ್ಚು ಮಾಡಿ ನೆಡಿಸಿದ್ದ ಜಂಪಲ, ನೀರಲ, ಲಿಂಬೆಗಿಡಗಳನ್ನು ಸೇರಿಸಿ ಪುಡಿ ಮಾಡಿಸಿದ್ದ.

> ಉತ್ಸವವೇ ಪ್ರಧಾನವಾಗಿದ್ದ ಭಾರತೀಯ ರಂಗಭೂಮಿಗೆ ಪ್ರಶ್ನೆ ಕೇಳಲು ಕಲಿಸಿದವರು ಕಾರ್ನಾಡರು.
>
> **– ಅಶೋಕ ವಾಜಪೇಯಿ, ಕವಿ**

ಎಲ್ಲಾ ಸಂಕಟಗಳ ಮಧ್ಯೆ ಮರಳಿ ಪ್ರಯತ್ನ ಮಾಡುವ ಸಾಹಸದಲ್ಲಿ ಉಳ್ಳಾಗಡ್ಡಿ ಹಿಂಕಟ್ಟಿಗೆ ಹಾಕಿದ್ವಿ. ಕೊಳೆತಾಗ ಒಳ್ಳೆ ರೇಟ್ ಇದ್ದುದ್ದು ಈಗ ಬೇಸಿಗೆಯಲ್ಲಿ ದೊಡ್ಡ ಸೈಜಿನ ಉಳ್ಳಾಗಡ್ಡಿ ನೂರು ರೂಪಾಯಿಗೆ ಮಾರಬೇಕೆ! ಹೇಗಾಗಬೇಡ? ನಾನು ಅರ್ಧ ಕುಸಿದೆ. ಅಷ್ಟರಲ್ಲಿ ಪಪ್ಪಾಯಿ ಫಸಲು ಸ್ಟಾರ್ಟ್ ಆಯ್ತು ರೈತನ ಮನಸ್ಸು ಕೆಟ್ಟಿತ್ತು. ತಂದೆ ಮಕ್ಕಳು ಅಷ್ಟರಲ್ಲಿ ಯಾವುದೊ ಕಾರಣಕ್ಕೆ ಜಗಳ ಮಾಡಿಕೊಂಡಿದ್ರು. ಪಪ್ಪಾಯಿಯಲ್ಲಿಯಾದ್ರೂ ಪ್ರಯತ್ನಿಸೋಣ ಎಂದು ಹುರಿದುಂಬಿಸಿದೆ. ಅವನು ಕೇಳುವ ಸ್ಥಿತಿಯಲ್ಲಿರಲಿಲ್ಲ. ಪಪ್ಪಾಯಿ ಚೆನ್ನಾಗಿ ಬೆಳೆಯುತ್ತಿತ್ತು. ಕೊಡಿಸಿದ ಗೊಬ್ಬರ ಎಣ್ಣೆ ಹೊಡಿಯಲು ಹಿಂದೇಟು ಹಾಕಲು ಆರಂಭಿಸಿದ. ಖರ್ಚು ಎರಡು ಲಕ್ಷ ಮೀರಿತ್ತು. ಎಲ್ಲದರಲ್ಲೂ ಸಮಪಾಲು ಎಂಬ ಮಾತಾಗಿತ್ತು. ಯಾವಾಗ ಮೈಮೇಲೆ ಬರುವುದು ಗೊತ್ತಾಯ್ತು ಬಿಡುವ ಹೊಂಚು ಹಾಕಿದೆ. ಅಷ್ಟರೊಳಗೆ ನನ್ನ ಮಗಳು ಮೆಟ್ರಿಕ್ ಇದ್ದ ಕಾರಣವಾಗಿ ಅಭ್ಯಾಸಕ್ಕೆ ತೊಂದರೆಯಾಗದಿರಲಿ ಎನ್ನುವ ಕಾರಣಕ್ಕೆ ನಮ್ಮ ಮನೆಯ ಟಿ.ವಿ., ಅವರಿಗೆ ಕೊಟ್ಟಿದ್ದೆ. ಫೋನ್ ಇಲ್ಲ ಎಂದದ್ದಕ್ಕಾಗಿ ಹೊಸದನ್ನು ಕೊಡಿಸಿದ್ದೆ. ಹತ್ತಾರು ಸಾವಿರ ರೂಪಾಯಿ ನೆರವು ನೀಡಿದ್ದೆ. ಅವರು ಬೇರೆಯವರಲ್ಲ ಎಂಬ ಕಾರಣಕ್ಕಾಗಿ. ಮನಸ್ಸು ಕೆಟ್ಟಾಗ ಮಾಡಿದ ಸಹಾಯ ಅವರಿಗೆ ಲೆಕ್ಕಕ್ಕೆ ಹತ್ತಲಿಲ್ಲ. ಪಪ್ಪಾಯಿ ಗಿಡದ ಮೇಲೆ ಆಸಕ್ತಿ ಕಡಿಮೆ ಮಾಡಿಕೊಂಡು ನಿರ್ಲಕ್ಷಿಸಿದ. 'ಒಂದು ದಿನ ನನಗೆ ಮಾಡಲು ಆಗಲ್ಲ ಸರ್ ಬೇರೆ ಯಾರನ್ನಾದರೂ ನೋಡಿಕೊಂಡು ಬಿಡಿ' ಎಂದ. ಅಷ್ಟರಲ್ಲಿ ತಂದಿ ಮಕ್ಕಳು ಭರ್ತಿ ಜಗಳವಾಡಿದ್ದರು. ನನಗೆ ಆಕಾಶವೇ ಕಳಚಿ ಬಿದ್ದಂತಾಯಿತು. 'ಅಲ್ಲಯ್ಯ ನಾನು ನಿನ್ನ ಮಾತು ಕೇಳಿ ಇಷ್ಟೆಲ್ಲ ಮಾಡ್ತಿನಿ, ಹೊಲದಿಂದ ನೀನು ಏನು ಪಡೆದಿಲ್ಲ. ಆ ಖರ್ಚನ್ನೆಲ್ಲಾ ನಾನೆ ಕಟ್ಟಿಕೊಂತಿನಿ ಬೇಡಪಾ?' ಎಂದೆ. 'ಇಲ್ಲ ಸಾರ್ ಆಗಲ್ಲ, ಹೊಲ ಸರಿಗಿಲ್ಲ ಎಷ್ಟು ಮಾಡಿದ್ರ ಅಷ್ಟೆ' ಅಂದ. ನನಗೆ ಸಿಟ್ಟು ಬಂತು. ಹೆತ್ತವರಿಗೆ ಹೆಗ್ಗಣ ಮುದ್ದು ಅಲ್ವೇ? 'ಅಲ್ಲಪ, ಹೊಲ ಬಂಗಾರದಂಗ ಬೆಳದಾದ, ರೇಟಿಲ್ಲ ಒಳ್ಳೆ ಸಮಯ ಬರುತ್ತದೆ, ಚಿಂತಿಸಬ್ಯಾಡಪಾ, ಹೊಲದ ಬಗ್ಗೆ ಹೆಸರಿಡಬ್ಯಾಡಪಾ?' ಎಂದೆ. 'ಅವ ಒಲ್ಲೆ ಅಂದ್ರೂ ಒಲ್ಲೆ ಅಂದ. ಕಿರಿಕಿರಿಕೊಟ್ರ ಎಲ್ಲಾದರೂ ಓಡಿಹೋಗಿ ಬೀಡ್ತೀನಿ' ಅಂದ. ನಾನು ಮಣಿದೆ. ಅಪ್ಪ ಮಗನನ್ನು ಸಂಧಾನ ಮಾಡಕ ಪ್ರಯತ್ನಿಸಿದ್ರೂ ಆಗಲಿಲ್ಲ.

ಆ ಸಮಯ ಹೇಗಿತ್ತು ಅಂದ್ರೆ, ಹಿರಿಮಗಳು ಮೆಟ್ರಿಕ್. ಒಬ್ಬ ಮಗಳದು ನವೋದಯ ಕೋಚಿಂಗ್ ಬಿಟ್ಟಿದ್ದೆ ಅವ್ವ ಬಿದ್ದು ಚಪ್ಲಿ ಮುರಕೊಂಡು ಸುಮಾರು ಹಣ ಖರ್ಚಾಗಿತ್ತು. 'ಹಾಸಿಗೆ ಇದ್ದಷ್ಟು ಕಾಲು ಚಾಚಬೇಕಪ, ಹೊಲದ ಬಗ್ಗೆ ಬಾಳ ತಲಿಕೆಡಸೊಕೊಬಾರದು' ಅಂತಿದ್ದ ಅಪ್ಪನ ಮಾತು ನಿಜವೆನಿಸ್ತು. ಆದಾಯ ಇಲ್ಲ. ಆ ಎರಡು ವರ್ಷ ಸಂಕಷ್ಟದ ದಿನಗಳು. ಕೈಕೊಟ್ಟ ಬೆಳೆ, ಬೆಲೆ. ಹೊರಗಿನ ಸಾಲ ಬೇರೆ. ಆ ಸಂದರ್ಭದಲ್ಲಿ ಬೇರೆ ಯಾರು ಇದ್ರೂ ಆತ್ಮಹತ್ಯೆ ಮಾಡಿಕೊಳ್ಳದೆ ಇರತಿರಲಿಲ್ಲ. ಅಂತಹ ಮನಸ್ಥಿತಿ ಬರುತ್ತಿತ್ತಾದರೂ ಗಟ್ಟಿ ಮಾಡಿಕೊಳ್ಳುತ್ತಿದ್ದೆ. ಇವತ್ತಿನ ಸಂದರ್ಭದಲ್ಲಿ ಪ್ರಾಮಾಣಿಕವಾಗಿ ಮಣ್ಣು ನಂಬಿ ಬದುಕಿರುವ ಸಾಮಾನ್ಯ ರೈತನಿಗೆ ಸುಖವಿಲ್ಲ. ಹಾಗಾಗಿ ರೈತರು ಸಾಲಬಾಧೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಅನಿವಾರ್ಯವಾಗಿ ಬಿಟ್ಟಿದೆ. ಯಾವುದೆ ಒತ್ತಡವಿರದ ಧನಿಕರಿಗೆ ಕೃಷಿ ಕೈಹಿಡಿಯುತ್ತಿದೆ. ಅವರೆ ಪ್ರಗತಿಪರ ಕೃಷಿಕರೆನಿಸಿಕೊಳ್ಳುತ್ತಿದ್ದಾರೆ. 'ರೈತನು ಬೆಳೆದ ಬೆಳೆಗೆ ಸರಿಯಾದ ಮಾರುಕಟ್ಟೆ ಸಿಕ್ರೆ ಯಾಕ್ರಿ ಬೇಕು ನಮ್ಮನ್ನ ಹಾಳು ಮಾಡಿ ಈ ಸಾಲ ಮನ್ನಾ ಮಾಡುವ ನಾಟಕ. ಅದು ದಕ್ಕುವುದು ಶ್ರೀಮಂತ ರೈತರಿಗೆ' ಎಂದು ಹೇಳುತ್ತಿದ್ದ ರೈತ ಮಿತ್ರನೋರ್ವನ ಮಾತು ಸತ್ಯ ಅನಿಸ್ತು. 'ಮರಣ ಮಾರಾಟ ಯಾರ ಕೈಯಲ್ಲೂ ಇಲ್ಲ ಸರ್, ಸಾಯುವ ವಯಸ್ಸಾತು ಅಂದಿನಿಂದ ತೋಟ ಮಾಡುತ್ತ ಬಂದಿನಿ, ಏನೂ ಮಾಡಕ ಆಗಿಲ್ಲ. ನಾವು ನಿಮಗ ಅನುಕೂಲ ಮಾಡಿಕೊಡಾಕ ಹೋಗಿ ತೊಂದ್ರೆಗೆ ಸಿಕ್ಕಾಕಿಸಿದೆವು' ಎಂದು ಕಣ್ಣೀರಿಟ್ಟ. ನನ್ನ ಹೊಲವನ್ನು ಆಸೆ ತುಂಬಿಸಿ ಎಲ್ಲವನ್ನು ಖರ್ಚು ಮಾಡಿಸಿ ಅರ್ಧಕ್ಕೆ ಬಿಟ್ಟುಹೋದ ನಂಬಿದ್ದ ಹುಡುಗನ ಅಪ್ಪ.

ಮಕ್ಕಳು ದೊಡ್ಡವು ಆಗ್ತಿವೆ, ಏನಾದ್ರೂ ಮಕ್ಕಳ ಭವಿಷ್ಯಕ್ಕೆ ಮಾಡಬೇಕೆನ್ನುವ ಕನಸು ನುಚ್ಚುನೂರಾಯಿತು. ಮನೆಗೆ ಕಟ್ಟಲು ಪ್ರಾರಂಭಿಸಿದ್ರೆ ಛತ್ ಲೇವಲಿಗಾದ್ರೂ ಬರತಿತ್ತು, ಬಾಡಿಗೆ ಮನೆಯಿಂದ ಮುಕ್ತಿನಾದ್ರೂ ಸಿಕ್ಕುತ್ತಿತ್ತು. ನನ್ನ ಹಣೆಬರಹನೋ ಕಾಕತಾಳಿಯನೋ ಗೊತ್ತಿಲ್ಲ. ನಾನು ರೈತನಾದೆ, ರೈತರ ಮೇಲೆ ಬಿಡದೆ ನಾನು ಅವರೊಂದಿಗೆ ಮಣ್ಣು ಮುಟ್ಟಿ ದುಡಿದೆ, ಗಿಡ ನೆಟ್ಟೆ, ಕಸ ಕಿತ್ತಿದೆ, ತೆಗ್ಗು ತೋಡಿದೆ, ಸಂತೆಯಲ್ಲಿ ನಿಂತು ಮಾರಿದೆ, ಹಾಳಾದೆ, ನೆಮ್ಮದಿ ಕಳಕೊಂಡೆ. ಹುಚ್ಚನಂತಾದೆ. ಕೆಲದಿನ ಮನೋವ್ಯಾಧಿಯಿಂದ ನರಳಿದೆ. ಒಂದು ದಿನ ಮನೆಗೆ ಬಂದ ರೈತ 'ಮಗ ಕೈಕೊಟ್ರು ಹೊಲಕ್ಕ ಯಾರಾದ್ರೂ ಲೀಜ್ ಹಿಡಿಯುವವರೆಗೂ ನಾನೇ ಮಾಡುತ್ತೇನೆ. ನಿಮ್ಮ ಅಪ್ಪನ ಕಾಲದಿಂದ ಕೃಷಿ ಮಾಡುತ್ತ ಬಂದವರು. ಕಷ್ಟದಲ್ಲಿರುವ ನಿಮ್ಮನ್ನು ಕೈಬಿಟ್ಟರೆ ದೇವರು ನಮಗೆ ಒಳ್ಳೆಯದು ಮಾಡಲ್ಲ. ಮಗನಿಗೆ ಬುದ್ಧಿ ಬರಲಿ ಎಂದು ನಿಮ್ಮ ಹೊಲದಿಂದ ದೂರವಾಗಿ ತಪ್ಪು ಮಾಡಿದೆ' ಎಂದ. ನನಗೆ ಧೈರ್ಯ ಬಂದಿತು. ಇದ್ದ ಎರಡು ಪ್ಲಾಟು ಮಾರಿ ಟೆನ್ಷನ್‌ನಿಂದ ಅರ್ಧ ಪಾರಾದೆ. ಈ ವರ್ಷನೂ ಅದೆ ಹಣೆಬರಹ, ಎಷ್ಟು ತಲೆ ಓಡಿಸಿ ಏನೆಲ್ಲಾ ಮಾಡದ್ರೂ ಬೆಲೆ ಸಿಗುತ್ತಿಲ್ಲ. ಬೆಳೆಗೆ ಬೆಲೆ ಇಲ್ಲ. ಮೊನ್ನೆ ಸಂತೆಗೆ ಒಯ್ದ ಇಪ್ಪತ್ತು ಬದನೆ ಬುಟ್ಟಿ ಕೇಳೊರಿಲ್ಲದೆ ಒಬ್ಬರಿಗೆ ಕೇವಲ ಐವತ್ತು ರೂಪಾಯಿಗೆ ಕೊಟ್ಟು ಬಂದ ನಮ್ಮ ರೈತ. ಅವ ಕೆ.ಜಿ.ಗೆ ನಮ್ಮ ಕಣ್ಮುಂದನ ಹತ್ತು ರೂಪಾಯಿಗೆ ಮಾರಾಟಕ್ಕಿಟ್ಟಿದ್ದ. ಯಾರು ಸುಖಿಗಳಿಲ್ಲಿ! ಈಗಲೂ ಬಂದ ಪಗಾರವನ್ನು ಹಾಕುವುದೆ ಆಗಿದೆ. ಬ್ಯಾಂಕಿನ ಬಡ್ಡಿ ಏರುತ್ತಲೆ ಇದೆ. ಮಗನಿಗೆ ಸೈಕಲ್ ಕೊಡಿಸುವುದು ಕನಸಾಗುತ್ತಿದೆ. ಮಕ್ಕಳ ಹುಟ್ಟಿದ ಹಬ್ಬಕ್ಕ ಡ್ರೆಸ್ ಕೊಡಿಸಲು ಒದ್ದಾಡುವಂತಾಗುತ್ತಿದೆ. ಇಸ್ಪೀಟು ಚಟಕ್ಕೆ ಬಿದ್ದ ವ್ಯಕ್ತಿ ಇಂದು ನಾಳೆಯಾದರೂ ಗೆಲ್ಲಬಹುದೆಂಬ ಲೆಕ್ಕಾಚಾರದಲ್ಲಿರುವಂತೆ ತೋಟದ ಮೋಹ ಬಿಡಲಾಗಿದೆ. ನನ್ನ ಅದೃಷ್ಟ ಮಾತ್ರ ತೆರೆದಿಲ್ಲ. ಅನೇಕ ಮಿತ್ರರು ಕೃಷಿ ಮಾಡುತ್ತೇನೆಂದಾಗ ದುಡ್ಡು ಗಳಿಸುತ್ತೇನೆ ಎಂಬ ಭ್ರಮೆಯಿಂದ ಮಾತ್ರ ಮಾಡಬೇಡಿ ಎಂದು ನನ್ನ ಕಥೆ ಹೇಳುತ್ತೇನೆ. ನೀವಾದ್ರೂ ದುಡ್ಡಿಲ್ಲದಿದ್ದರೆ ಕೃಷಿಗೆ ಕೈಹಾಕಿ ಸಾಲಾ ಮಾಡಿ ಸುಖದ ಜೀವಕ್ಕೆ ಚುಚ್ಚಿಕೊಳ್ಳದಿರಿ ಎಂದು ವಿನಮ್ರವಾಗಿ ಕೇಳಿಕೊಳ್ಳುತ್ತೇನೆ.

**ಗುಂಡುರಾವ್ ದೇಸಾಯಿ**

ತೇರಿನ ಹತ್ತಿರ ಮಸ್ಕಿ, ರಾಯಚೂರು ಜಿಲ್ಲೆ. email : gundurao.desai@gmail.com




# ಶನಿಗ್ರಹವನ್ನು ಹುಡುಕುವ ಅವಕಾಶ

ಸಂಜೆಯ ಆಕಾಶದಲ್ಲಿ ಪ್ರಮುಖವಾಗಿ ಕಾಣುವ ಗ್ರಹಗಳೆಂದರೆ ಗುರು ಮತ್ತು ಶನಿ. ಇದುವರೆಗೂ ಪಶ್ಚಿಮದ ಅಂಚಿನಲ್ಲಿದ್ದು ಕಾಣುತ್ತಿದ್ದ ಮಂಗಳ ಸೂರ್ಯನ ಆಚೆ ಬದಿಯಿಂದ ಹಾದು ಹೋಗುವ ಕಾರಣ ಈ ತಿಂಗಳು ದೃಕ್ಕೂ ನೋಡಲು ಸಿಗುವುದಿಲ್ಲ. ಹೀಗೆಯೇ ಸೂರ್ಯನನ್ನು ಹಾದು ಹೋಗುವ ಇನ್ನೊಂದು ಗ್ರಹ ಬುಧ. ಆದರೆ ಇವೆರಡೂ ತಿಂಗಳ ಕೊನೆಗೆ ಕಾಣುವ ಅವಧಿ ಬೇರೆ ಬೇರೆ. ಮಂಗಳ ಮುಂಜಾವಿನಲ್ಲಿ; ಬುಧ ಸಂಜೆಯಲ್ಲಿ ಕಾಣತೊಡಗುತ್ತವೆ. ಸೂರ್ಯ ಮಂಗಳವನ್ನು ಹಿಂದೆ ಹಾಕಿ ಮುಂದೆ ಹೋಗುತ್ತದೆ; ಬುಧ ಸೂರ್ಯನನ್ನು ಹಿಂದೆ ಹಾಕಿ ಮುನ್ನಡೆಯುತ್ತದೆ ಎಂಬುದರ ಪ್ರಾತ್ಯಕ್ಷಿಕೆ ಇದು.

ಆಕಾಶಗಂಗೆಯ ನಕ್ಷತ್ರ ದಟ್ಟಣೆಯ ಮಧ್ಯೆ ಎದ್ದು ಕಾಣುವ ಶನಿ ಮತ್ತು ಗುರುಗ್ರಹಗಳು ಸಂಜೆಯ ವೇಳೆಗೆ ಸುಮಾರಾಗಿ ನೆತ್ತಿಯ ಸಮೀಪವೇ ಇರುತ್ತವೆ. ಆದ್ದರಿಂದ ಅರ್ಧ ಚಂದ್ರವನ್ನು ೬ರಂದು ಗುರುಗ್ರಹದ ಸಮೀಪ ಮತ್ತು ೮ರಂದು ಶನಿಯ ಸಮೀಪ ಕಾಣಬಹುದು. ೮ರಂದು ಶನಿ ಗ್ರಹವನ್ನು ಚಂದ್ರ ಮರೆಮಾಡುವ ಆಚ್ಛಾದನೆ ಎಂಬ ವಿದ್ಯಮಾನ ಸೂರ್ಯಾಸ್ತಕ್ಕೆ ಮುನ್ನ ನಡೆಯುತ್ತದೆ. ಕತ್ತಲಾದ ಮೇಲೆ ನಾವು ನೋಡುವ ಹೊತ್ತಿಗೆ ಚಂದ್ರನ ಇನ್ನೊಂದು ಬದಿಯಿಂದ ಶನಿ ಆಗತಾನೇ ಹೊರಗೆ ಬಂದಿರುತ್ತದೆ. ಚಂದ್ರ ಮತ್ತು ಶನಿ ಒಂದಕ್ಕೊಂದು ಬಹಳ ಸಮೀಪವಾಗಿ ಕಂಡುಬರುತ್ತವೆ. ಮೋಡಗಳು ಬಿಡುವು ಕೊಟ್ಟರೆ ಈ ದೃಶ್ಯವನ್ನು ನೋಡಬಹುದು. ಈ ಎರಡೂ ಗ್ರಹಗಳ ನಡುವೆ ದುರ್ಬೀನಿನಿಂದ ಕಣ್ಣು ಹಾಯಿಸಿದರೆ ಆಕಾಶಗಂಗೆಯ ನೆಬ್ಯುಲಾಗಳು, ನಕ್ಷತ್ರಗುಚ್ಛಗಳು ಕಾಣುವುವು. ಈ ಗ್ರಹಗಳ ಚಲನೆ ನಿಧಾನ. ಮುಂದಿನ ತಿಂಗಳುಗಳಲ್ಲಿ ಅವುಗಳ ಸ್ಥಾನ ಅಷ್ಟೇನೂ ಬದಲಾಗುವುದಿಲ್ಲ. ಆದ್ದರಿಂದ ಸ್ಥಾನಗಳನ್ನು ಗುರುತಿಟ್ಟುಕೊಂಡು ಯಾವಾಗ ಮೋಡಗಳು ಬಿಡುವು ಕೊಡುತ್ತವೆಯೋ ಆಗೆಲ್ಲಾ ನೋಡಬಹುದು. ಚಂದ್ರ ಇಲ್ಲದಿದ್ದಾಗ ಪ್ರಯತ್ನಿಸಿದರೆ ಅನುಕೂಲ.

ಶುಕ್ರಗ್ರಹ ತಿಂಗಳ ಕೊನೆಗೆ ಪಶ್ಚಿಮದ ಅಂಚಿನಲ್ಲಿ ಕಾಣುತ್ತದೆ. ದಿನೇ ದಿನೇ ಮೇಲೇರುವುದನ್ನೂ ಕಾಣಬಹುದು. ಇದನ್ನು ಹಿಂದೆ ಹಾಕಿ ಮುಂದೆ ಓಡಲು ಬುಧ ಗ್ರಹವೂ ಬರುವುದು. ೧೩ರಂದು ಶುಕ್ರ ಮತ್ತು ಬುಧ ಜೋಡಿಯಾಗುವುವು. ಆದರೆ ಸಂಧ್ಯಾ ಪ್ರಕಾಶದ ಕಾರಣ ಬುಧ ಗ್ರಹವನ್ನು ನೋಡುವುದು ಕಷ್ಟ – ಶುಕ್ರನನ್ನು ಸ್ವಲ್ಪ ಕಷ್ಟಪಟ್ಟು ಹುಡುಕಿ ಅದರ ಆಸುಪಾಸಿನಲ್ಲಿ ದುರ್ಬೀನಿನಿಂದ ಹುಡುಕಿದಲ್ಲಿ ಬುಧ ಕಾಣುವುದು.

ಚಂದ್ರ–ಭೂಮಿ ಕನಿಷ್ಠ ಅಂತರದಲ್ಲಿ ಇದ್ದಾಗ ಅಂದರೆ ಪುರಭೂ ಬಿಂದುವಿನಲ್ಲಿ ಇದ್ದಾಗ ಸಾಧಾರಣವಾಗಿ ಕಡಲ ಉಬ್ಬರ ಹೆಚ್ಚು. ಅಮಾವಾಸ್ಯೆ ಮತ್ತು ಹುಣ್ಣಿಮೆಗಳಲ್ಲಿಯೂ ಸಾಧಾರಣವಾಗಿ ಹೆಚ್ಚು ಎತ್ತರದ ಅಲೆಗಳು ಏಳುವುವು. ಈ ಬಾರಿ ಪುರಭೂ ದಾಟಿದ ೧೩ ಗಂಟೆಯೊಳಗೇ ಅಮಾವಾಸ್ಯೆ ಇದೆ. ಆದ್ದರಿಂದ ಆರ್ಭಟ ಇನ್ನೂ ಹೆಚ್ಚಾಗುವುದು.



ಸೆಪ್ಟೆಂಬರ್ ೮ರ ಸಂಜೆ ಶನಿ ಮತ್ತು ಚಂದ್ರ

ಈ ತಿಂಗಳ ೨೩ರಂದು ಶರದ್ ವಿಷುವ ಅಂದರೆ ಹಗಲು ರಾತ್ರಿಗಳ ಅವಧಿ ಸಮಾನವಾಗಿರುವುದು. ಅನೇಕ ಪದ್ಧತಿಗಳಲ್ಲಿ ಈ ವಿಷುವದಿಂದ ಹೊಸ ವರ್ಷದ ಗಣನೆ ಆರಂಭಿಸುವ ಪದ್ಧತಿ ಇದೆ. ಉದಾಹರಣೆಗೆ ಗುಜರಾತ್‌ನಲ್ಲಿ ಇದರ ಮುಂದಿನ ಶುಕ್ಲ ಪಾಡ್ಯದಿಂದ (ದೀಪಾವಳಿ ಅಮಾವಾಸ್ಯೆಯ ನಂತರ) ಹೊಸ ವರ್ಷ ಆರಂಭ.

ಈ ಸಂಚಿಕೆಯಿಂದ ನಭಾವಲೋಕನ ಅಂಕಣದ ೨೧ನೆಯ ವರ್ಷ ಪ್ರಾರಂಭವಾಗುತ್ತಿದೆ. ೧೦ ವರ್ಷದ ಹಿಂದೆ ನಕ್ಷತ್ರಲೋಕದ ಮೇಲಿಂದ ಚಂದ್ರ ಮತ್ತು ಗ್ರಹಗಳತ್ತ ಓದುಗರ ಒಲವು ಜಾರಿತ್ತು. ಖಗೋಳ ದಿನಚರಿ ಎಂಬ ಪಟ್ಟಿ ಸೇರಿತು. ಓದುಗರು ಏನನ್ನಾದರೂ ಹೊಸತನ್ನು ಬಯಸುತ್ತಾರೆಯೇ ಎಂಬ ಕುತೂಹಲವಿದೆ. ಹಳತಾಯಿತು ಎಂದರೆ ನಿಲ್ಲಿಸಲೂಬಹುದಲ್ಲವೇ?




**ಖಗೋಳ ದಿನಚರಿ**

೨ ಮಂಗಳ ಗ್ರಹದ ಯುತಿ
೪ ಬುಧಗ್ರಹದ ಉಚ್ಚಯುತಿ
೬ ಚಾಂದ್ರಮಾಸದ ಮೊದಲ ಪಾದ; ಚಂದ್ರ–ಗುರು ಜೋಡಿ*
೮ ಶನಿ–ಚಂದ್ರ ಜೋಡಿ*
೧೩ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ; ಬುಧ–ಶುಕ್ರ ಜೋಡಿ*
೧೪ ಹುಣ್ಣಿಮೆ
೧೮ ಶನಿಗ್ರಹದ ಹಿನ್ನಡೆ ಮುಕ್ತಾಯ
೨೨ ಚಾಂದ್ರಮಾಸದ ಕೊನೆಯ ಪಾದ
೨೩ ಶರದ್ ವಿಷುವ
೨೮ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ ಅಮಾವಾಸ್ಯೆ
೨೯ ಬುಧ–ಚಿತ್ರಾ ಜೋಡಿ*; ಚಂದ್ರ–ಶುಕ್ರ ಜೋಡಿ*
೩೦ ಚಂದ್ರ–ಬುಧ ಜೋಡಿ*
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್, ಬೆಂಗಳೂರು – ೫೬೦ ೦೦೧
email : shylaja@taralaya.org

ಪತ್ರಕರ್ತ, ಸಾಹಿತಿ, ಲೇಖಕ, ಪ್ರಕಾಶಕ, ಛಾಯಾಚಿತ್ರಗ್ರಾಹಕ, ಪ್ರವಾಸಿ ಹೀಗೆ ಹಲವು ಆಸಕ್ತಿ, ಅಭಿರುಚಿಗಳ ಬಹುಮುಖಿ ವ್ಯಕ್ತಿತ್ವದ ಪ್ರತಿಭೆ ಕೆ. ಪಿ. ಸ್ವಾಮಿ ಕಳೆದ ತಿಂಗಳು ನಿಧನರಾದರು. ಸೋವಿಯತ್ ದೇಶ, ಪ್ರಪಂಚ, ಹೊಸತು ಪತ್ರಿಕೆಗಳಿಗೆ ಕೆಲಸ ಮಾಡಿದ ಕೆ. ಪಿ. ಸ್ವಾಮಿಯವರು ಸೌಮ್ಯ ಸ್ವಭಾವ, ಸ್ನೇಹಪರ ವ್ಯಕ್ತಿತ್ವ, ಪ್ರಗತಿಪರ ಚಿಂತನೆಗಳಿಂದ ಅಪಾರವಾದ ಸ್ನೇಹ ಬಳಗವನ್ನು ಹೊಂದಿದ್ದವರು. ಕೆ. ಪುಟ್ಟಸ್ವಾಮಿಯವರು ಪರಂಜ್ಯೋತಿ, ನೀಲಾಂಬರಿ ಹೀಗೆ ವಿವಿಧ ಹೆಸರುಗಳಲ್ಲಿಯೂ ಓದುಗರಿಗೆ ಪರಿಚಿತರು. ನವಕರ್ನಾಟಕದ ಭಾಗವಾಗಿದ್ದ ಸ್ವಾಮಿಯವರ ಕುರಿತು ಸಾಹಿತಿಗಳು, ಚಿಂತಕರು ತಮ್ಮ ಭಾವನೆಗಳನ್ನು ಹಂಚಿಕೊಂಡಿದ್ದಾರೆ. ಕನ್ನಡ ಓದುಗರ ಪರವಾಗಿ ಕೆ. ಪಿ. ಸ್ವಾಮಿಯವರಿಗೆ ಗೌರವ ನಮನಗಳು.

– ಸಂ.



# ಪರಂಜ್ಯೋತಿ ಎನ್ನುವ ಬೆಳಕಿನ ಸುತ್ತ...

ಎತ್ತಣ ಮಾಮರ ಎತ್ತಣ ಕೋಗಿಲೆ, ಎತ್ತಣಿಂದೆತ್ತಣ ಸಂಬಂಧವಯ್ಯಾ.. ಎನ್ನುವ ವಚನದಂತೆ, "ಎತ್ತಣ ಊಟಿಯ ಕುಂದ ಬ್ರಿಜ್ಜಿನ ಕೆ. ಪಿ. ಸ್ವಾಮಿ, ಎತ್ತಣ ದ.ಕ.ದ ಸುಳ್ಯದ ಸುಬ್ರಾಯ ಚೊಕ್ಕಾಡಿ.." ಎಂದು ಹೇಳಬೇಕೆನಿಸುತ್ತದೆ! ಕಳೆದ ಸುಮಾರು ಐವತ್ತು ವರ್ಷಗಳ ನನ್ನ ಹಾಗೂ ಇತ್ತೀಚೆಗೆ ನಿಧನರಾದ ಕೆ. ಪುಟ್ಟ ಸ್ವಾಮಿ ಅಥವಾ ಪರಂಜ್ಯೋತಿ ಅಥವಾ ನೀಲಾಂಬರಿ ನಾಮಧೇಯದ ಗೆಳೆಯನ ನಡುವಿನ ಸ್ನೇಹ ಸಂಬಂಧದ ನೆನಪಾಗಿ ಕಣ್ಣು ಮಂಜಾಗುತ್ತದೆ.

ಅದು ಆರಂಭವಾದದ್ದು ಕಳೆದ ಅರುವತ್ತರ ದಶಕದ ಪೂರ್ವಾರ್ಧದಿಂದ. ಆಗ ಊಟಿಯ ಕುಂದಬ್ರಿಜ್ಜಿನಲ್ಲಿ ಗುಮಾಸ್ತೆಯಾಗಿದ್ದ ಸ್ವಾಮಿಯವರು ಒಂದು ಕಥಾ ಸ್ಪರ್ಧೆ ಏರ್ಪಡಿಸಿದ್ದರು. ಅದರಲ್ಲಿ ನನ್ನ ಕಥೆಗೆ ಮೊದಲ ಬಹುಮಾನ ಬಂದಿತ್ತು. ಅದರ ಬಹುಮಾನದ ಮೊತ್ತ ಬಂತೋ ಇಲ್ಲವೋ ತಿಳಿಯದು. ಆದರೆ ಅವರ ಸ್ನೇಹದ ಮೊತ್ತ ನನ್ನ ಕಡೆ ಭರಪೂರ ಹರಿದು ಬಂದದ್ದಂತೂ ನಿಜ!

ಸುಮಾರು ಅದೇ ಸಮಯದಲ್ಲಿ ನನ್ನ ನೆರೆ ತಾಲೂಕಾದ ಪುತ್ತೂರಲ್ಲಿ "ಶಿಂಗಣ್ಣ" ಖ್ಯಾತಿಯ ವ್ಯಂಗ್ಯ ಚಿತ್ರಕಾರ ಕನ್ನೆಪ್ಪಾಡಿ ರಾಮಕೃಷ್ಣ(ರಘು)ರು "ಇಂದ್ರಧನುಸ್" ಎನ್ನುವ – "ಕೊರವಂಜಿ" ಮಾದರಿಯ – ಪತ್ರಿಕೆಯೊಂದನ್ನು ಆರಂಭಿಸಿದ್ದು, ಪರಂಜ್ಯೋತಿಯವರು ಅದರ ಸಂಪಾದಕರಾಗಿ ನಿಯುಕ್ತರಾದರು. ಪುತ್ತೂರಿನ ಆ ಪತ್ರಿಕಾ ಕಛೇರಿಯಲ್ಲಿ ನನ್ನ ಹಾಗೂ ಅವರ ಮೊದಲ ಮುಖತಾ ಭೇಟಿಯಾಯ್ತು. ಆಮೇಲೆ ನಾನು ಪುತ್ತೂರಿಗೆ ಹೋದಾಗಲೆಲ್ಲ ಅವರ ಭೇಟಿ ಕಡ್ಡಾಯವಾಯ್ತು. ಆ ಪತ್ರಿಕೆಗಾಗಿ ನನ್ನಿಂದ ಕವಿತೆ, ನಗೆ ಬರೆಹ, ಇತ್ಯಾದಿಗಳನ್ನು ಬರೆಸಿದ ಶ್ರೇಯಸ್ಸು ಅವರದು.

ಚಂದಾದಾರರ ಕೊರತೆಯಿಂದ ಆ ಪತ್ರಿಕೆ ಒಂದು ವರ್ಷದ ನಂತರ ನಿಂತು ಹೋದಾಗ ಪರಂಜ್ಯೋತಿ ಬೆಂಗಳೂರಿಗೆ ಹೋಗಿ, ಒಂದಷ್ಟು ಸಮಯ ನಿರುದ್ಯೋಗಿಯಾಗಿ ಅಲೆದು, ಆಮೇಲೆ "ಪ್ರಪಂಚ" ಪತ್ರಿಕೆಗೆ ಸೇರಿದರು. ಅಲ್ಲಿದ್ದಾಗಲೂ ಒತ್ತಾಯಮಾಡಿ ಪತ್ರಿಕೆಗೆ ನನ್ನಿಂದ ಲೇಖನಗಳನ್ನು ಬರೆಸಿದರು. ಆಮೇಲೆ ಅಲ್ಲಿಂದ ಚೆನ್ನೈಗೆ ಹೋಗಿ "ಸೋವಿಯೆತ್ ದೇಶ" ಪತ್ರಿಕೆಯಲ್ಲಿ ಅದು ನಿಲ್ಲುವ ತನಕ ನಿಷ್ಠೆಯಿಂದ ದುಡಿದರು. ಮತ್ತೆ ಬೆಂಗಳೂರಿಗೆ ಮರಳಿ ಬಂದ ಅವರು ಸೇರಿಕೊಂಡದ್ದು "ನವಕರ್ನಾಟಕ ಪ್ರಕಾಶನ"ದಲ್ಲಿ. ಅದರ ಪ್ರಕಟಣಾ ವಿಭಾಗ ಹಾಗೂ ಆಮೇಲೆ ಅದು ಆರಂಭಿಸಿದ "ಹೊಸತು" ಪತ್ರಿಕೆಯಲ್ಲಿ ಸದ್ದು ಗದ್ದಲವಿಲ್ಲದೆ ಅವರು ಮಾಡಿದ ಕೆಲಸ ಗಮನಾರ್ಹವಾದುದು. ತಮ್ಮ ಸೇವಾವಧಿಯ ಕೊನೆಯ ತನಕವೂ ಅಲ್ಲೇ ದುಡಿದು ನಿವೃತ್ತರಾದರು. ಈ ಅವಧಿಯಲ್ಲಿ ನಾನು ಎಷ್ಟೋ ಸಲ ಅವರನ್ನು ಭೇಟಿಯಾಗಿದ್ದೆ.

ಬೆಂಗಳೂರಲ್ಲಿ ಅವರಿದ್ದ ಮೊದಲ ಅವಧಿಯಲ್ಲಿ ಅಲ್ಲೊಂದು ಗೆಳೆಯರ ಬಳಗವಿತ್ತು. ಅದರಲ್ಲಿ ಬಾಕಿನ, ಪರಂಜ್ಯೋತಿ, ಶ್ಯಾಮಭಟ್, ಕಿರಣ ಮೊದಲಾದವರಿದ್ದರು. ನಾನೂ ಸೇರಿಕೊಂಡಿದ್ದೆ. ಆ ಅವಧಿಯಲ್ಲಿ ಬಾಕಿನ ಆರಂಭಿಸಿದ ಗೆಳೆಯರ ಪ್ರಕಾಶನದ ಮೂಲಕ ಪ್ರಕಟವಾದ "ಹನಿ ಜೇನು" ಎನ್ನುವ ಹೊಸಬಗೆಯ ಮಕ್ಕಳ ಕಥೆಗಳ ಸಂಕಲನದಲ್ಲಿ ಪರಂಜ್ಯೋತಿಯವರು ಪ್ರಮುಖ ಪಾತ್ರ ವಹಿಸಿದ್ದರು. ಆ ಕೂಟ "ಕವಿತಾ" ಎನ್ನುವ ಕವಿತೆ ಹಾಗೂ ವಿಮರ್ಶೆಗಾಗಿಯೇ ಮೀಸಲಿದ್ದ ದ್ವೈಮಾಸಿಕದ ಪ್ರಕಟಣೆ ಮೊದಲಾದವುಗಳು ನೆನಪಿಟ್ಟುಕೊಳ್ಳಬೇಕಾದ ಸಂಗತಿಯಾಗಿದೆ.

ಈ ನಡುವೆ ನಾನು ಚೊಕ್ಕಾಡಿಯಲ್ಲಿ ಗೆಳೆಯ ಮೊಗಸಾಲೆ ಮತ್ತು ರಾಮಚಂದ್ರದೇವರ ಸಹಕಾರದೊಂದಿಗೆ ಆರಂಭಿಸಿದ "ವಸಂತ ಪ್ರಕಾಶನ"ದ ಮೊದಲ ಕೃತಿಯಾಗಿ ಪರಂಜ್ಯೋತಿಯವರ ಕಥಾಸಂಕಲನ "ಕತ್ತಲಲ್ಲಿ ಹುಟ್ಟಿತೊಂದು ಕಥೆ" ಪ್ರಕಟಿಸಿದ ಖುಷಿ ನನ್ನದು(ಪ್ರಕಾಶನದ ಎರಡನೇ ಕೃತಿ ಲಂಕೇಶರ "ನನ್ನ ತಂಗಿಗೊಂದು ಗಂಡು ಕೊಡಿ." ಆಮೇಲೆ ವಸಂತ ಸಾಹಿತ್ಯವು ಸುಮನಸಾ ವಿಚಾರ ವೇದಿಕೆಯಾಗಿ ಬದಲಾಗಿ ಚಟುವಟಿಕೆಗಳನ್ನು ವಿಸ್ತರಿಸಿಕೊಂಡುದು ಬೇರೆಯೇ ಕಥೆ). ಇದರ ಋಣ ಪರಿಹಾರಕ್ಕೋ ಎಂಬಂತೆ ಆಮೇಲೆ ಪರಂಜ್ಯೋತಿ ಅವರ ಇಂಚರ ಪ್ರಕಾಶನದ ಮೂಲಕ ನನ್ನ "ಕೃತಿಶೋಧ" ಹಾಗೂ "ಒಳಹೊರಗು" ಎನ್ನುವ ಎರಡು ಕೃತಿಗಳನ್ನು ಪ್ರಕಟಿಸಿದರು!

ಪರಂಜ್ಯೋತಿ ಉತ್ತಮ ಬರೆಹಗಾರರು ಹಾಗೂ ಛಾಯಾಚಿತ್ರ ಗ್ರಾಹಕರು. ಅವರು ತೆಗೆದ ಎಷ್ಟೋ ಫೋಟೋಗಳು ಪತ್ರಿಕೆಗಳಲ್ಲಿ ಬಂದಿವೆ. ನನ್ನ ಮನೆಯ ಗೋಡೆಯನ್ನೂ ಅಲಂಕರಿಸಿವೆ. ಕೆಂದಾವರೆ, ಶೂದ್ರದೀಕ್ಷೆ, ಶೂನ್ಯ, ಅವತಾರ, ಕಣಿವೆ, ಕಳೆದು ಹೋದದ್ದು ಮೊದಲಾದ ಕಥಾಸಂಕಲನಗಳು, ಕೊಂಪೆ ಮೊದಲಾದ ಕಾದಂಬರಿಗಳು, ನೀಲಾಂಬರಿ ಹೆಸರಿನಲ್ಲಿ ಬರೆದ ಹತ್ತಕ್ಕೂ ಮಿಕ್ಕಿದ ಮಕ್ಕಳ ಕಥೆಗಳು, ವ್ಯಕ್ತಿ ಚಿತ್ರಗಳು, ಪ್ರವಾಸಕಥನಗಳು, ಊಟಿಯ ಸಮಗ್ರ ಅಧ್ಯಯನದ ಬೃಹತ್ ಕೃತಿ.. ಹೀಗೆ ಹಲವು ಬಗೆಯ ಆಸಕ್ತಿಗಳ ಅನೇಕ ಕೃತಿಗಳನ್ನು ಪ್ರಕಟಿಸಿದ ಮುಖ್ಯ ಬರೆಹಗಾರರವರು. ಆದರೆ ನಮ್ಮ ಪ್ರತಿಷ್ಠಿತ ಸಾಹಿತ್ಯಲೋಕ ಅವರನ್ನು ದಿವ್ಯ

ನಿರ್ಲಕ್ಷ್ಯದಿಂದ ಕಂಡಿದೆ ಅಥವಾ ಅವರನ್ನು ಗಮನಿಸಿಯೇ ಇಲ್ಲ ಎನ್ನುವುದು ನಿಜಕ್ಕೂ ಬೇಸರದ ಸಂಗತಿಯಾಗಿದೆ. ಆದರೂ ಅವರು ಇದನ್ನೆಲ್ಲ ಗಮನಿಸದೆ ತನ್ನ ಪಾಡಿಗೆ ತಾನು ಕನ್ನಡದ ಮೇಲಿನ ಪ್ರೀತಿಯಿಂದ ನಮ್ಮ ಮಕ್ಕಳಿಗಾಗಿ, ಹಿರಿಯರಿಗಾಗಿ ಬರೆಯುತ್ತಲೇ ಹೋದರು. ನಾನು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯನಾಗಿದ್ದಾಗ ಮತ್ತು ಆಮೇಲೆ ಕೂಡಾ, ಅನೇಕ ಬಾರಿ ಗೌರವ ಪ್ರಶಸ್ತಿಗಾಗಿ ಅವರ ಹೆಸರನ್ನು ಸೂಚಿಸುತ್ತಲೇ ಬಂದರೂ ಅವರನ್ನು ಯಾರೂ ಗಣನೆಗೇ ತೆಗೆದುಕೊಳ್ಳದಿದ್ದುದು ನಿಜಕ್ಕೂ ವಿಷಾದದ ಸಂಗತಿಯಾಗಿದೆ. ಅವರು ಮಾತ್ರ ಇದೆಲ್ಲಾ ತನಗೆ ಸಂಬಂಧಿಸಿಯೇ ಇಲ್ಲ ಎನ್ನುವ ಹಾಗೆ, ಏನನ್ನೂ ಬಯಸದೆ, ಏನನ್ನೂ ನಿರೀಕ್ಷಿಸದೆ – ತನ್ನ ಕೊನೆಯ ದಿನಗಳಲ್ಲಿ ಮೂಳೆ ಮುರಿತಕ್ಕೆ ಒಳಗಾಗಿದ್ದರೂ ಲೆಕ್ಕಿಸದೆ – ಸ್ಥಿತ ಪ್ರಜ್ಞ ನಿಲುವಿನಲ್ಲಿ ಬರೆಯುತ್ತಲೇ ಹೋದರು. ಅವರ ಬರವಣಿಗೆಯ ಈ ಕಾಯಕ ನಿಷ್ಠೆ, ಉಳಿದವರಿಗೆ ಮಾದರಿ ಎನ್ನಬಹುದು. ಮೊನ್ನೆ ಅವರು ನಿಧನರಾದ ಸುದ್ದಿ ಕೂಡಾ ಪತ್ರಿಕೆ ಹಾಗೂ ಇತರ ಮಾಧ್ಯಮಗಳಲ್ಲಿ ಸರಿಯಾಗಿ ಬರಲೇ ಇಲ್ಲ.

ಯಾರಾದರೂ ಮೆಚ್ಚುತ್ತಾರೆಂದು ಮರ ಹೂಬಿಡುವುದಿಲ್ಲ, ಹಣ್ಣು ಕೊಡುವುದಿಲ್ಲ. ಹಾಗೆಯೇ ಪರಂಜ್ಯೋತಿ ಕೂಡಾ ವನಸುಮದಂತೆ ಬಾಳಿ, ಪರಿಮಳ ಬೀರಿ, ಕೃತಿಗಳೆನ್ನುವ ಹಣ್ಣುಗಳನ್ನು ನೀಡಿ ಮರೆಯಾದರು. ಹೀಗೆ ಅವರು ಭೌತಿಕವಾಗಿ ಇಲ್ಲವಾದರೂ ಆ ಶೂನ್ಯವನ್ನು ಮರೆಸುವ ಹಾಗೆ ಅವರ ಅನೇಕಾನೇಕ ನೆನಪುಗಳು ಹಾಗೂ ಅನೇಕ ಕೃತಿಗಳು ನನ್ನ ಜತೆಗಿವೆ ಮತ್ತು ಆ ಮೂಲಕವೇ ಅವರು ಸದಾ ನನ್ನ ಜತೆಗೆ ನಿರಂತರ ಒಡನಾಡಿಯಾಗಿ ಇರುತ್ತಾರೆ.

**ಸುಬ್ರಾಯ ಚೊಕ್ಕಾಡಿ**
ಅಂಚೆ : ಚೊಕ್ಕಾಡಿ – ೫೭೪೨೧೨, ಸುಳ್ಯ ತಾಲೂಕು, ದ.ಕ.

✳ ✳ ✳

## ಪರಂಜ್ಯೋತಿ ಎಂಬ ಸೌಮ್ಯ ಗೆಳೆಯ

**ಸು**ಮಾರು ಮೂವತ್ತು ವರ್ಷಗಳ ಹಿಂದೆ, ಎಂದರೆ ೧೯೯೦ರಲ್ಲಿ ನಾನು ಐಐಟಿ ಮದ್ರಾಸ್‌ಗೆ ಅಮೆರಿಕದ ನನ್ನ ಯುನಿವರ್ಸಿಟಿಯಿಂದ ಸೆಬ್ಯಾಟಿಕಲ್ ಲೀವ್ ಪಡೆದು ಒಂದು ವರ್ಷದ ಮಟ್ಟಿಗೆ ವಿಸಿಟಿಂಗ್ ಪ್ರೊಫೆಸರ್ ಆಗಿ ಸೇರಿಕೊಂಡಿದ್ದೆ. ಐಐಟಿಯ ಕ್ಯಾಂಪಸ್‌ನ ಒಳಗೆ ಮೂರು ಮಾಳಿಗೆಯ ಒಂದು ವಸತಿ ಕಟ್ಟಡದ ತುದಿ ಮಾಳಿಗೆ ಬಿಡಾರದಲ್ಲಿ ನಮ್ಮ ಮನೆ – ವಾಸ.

ಅಮೆರಿಕದಲ್ಲಿದ್ದಾಗ ವರ್ಷಕ್ಕೆ ಬರೀ ಒಂದೋ ಎರಡೋ ಕತೆಗಳನ್ನು ಮಾತ್ರ ಬರೆಯುತ್ತಿದ್ದವನು, ಬರೆದು ಖುಷಿ ಪಡುತ್ತಿದ್ದವನು ಯಾವುದೋ ಹುರುಪಿನ ಇಂಜೆಕ್ಷನ್ ಚುಚ್ಚಿಕೊಂಡವನಂತೆ, ಒಂದರ ಬೆನ್ನಿಗೆ ಇನ್ನೊಂದರಂತೆ, ಹಲವು ಕತೆಗಳನ್ನು ಬರೆದು ಪತ್ರಿಕೆಗಳಿಗೆ ಕಳುಹಿಸುತ್ತಿದ್ದೆ.

ಆ ದಿನಗಳಲ್ಲಿ ಒಮ್ಮೆ ಒಬ್ಬರು – ಉರುಟು ಮುಖದ, ತುಂಬ ಸರಳ – ಸಂಕೋಚ ಸ್ವಭಾವದ ಹಾಗೂ ಗಂಭೀರ ಕಣ್ಣುಗಳ ವ್ಯಕ್ತಿ– ನಮ್ಮ ಬಿಡಾರಕ್ಕೆ ಬಂದರು. ತಮ್ಮನ್ನು ಕೆ. ಪಿ. ಸ್ವಾಮಿ ಎಂದು ಪರಿಚಯ ಮಾಡಿಕೊಂಡು, ಆಗ ಮದ್ರಾಸ್‌ನಿಂದ ಪ್ರಕಟ ಆಗುತ್ತಿದ್ದ 'ಸೋವಿಯತ್ ದೇಶ' ಮಾಸಪತ್ರಿಕೆಯಲ್ಲಿ ಸಂಪಾದಕೀಯ ವಿಭಾಗದಲ್ಲಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿ, ಆತ್ಮೀಯವಾಗಿ ಮಾತನಾಡತೊಡಗಿದರು. ಅವರಿಗೆ ನನ್ನ ತಂದೆಯ – ಲೇಖಕರಾಗಿ – ಪರಿಚಯ ಇತ್ತಂತೆ. ಅಲ್ಲಿನ ನಮ್ಮ ಮನೆಗೂ ಬಂದಿದ್ದರಂತೆ. ಪತ್ರಿಕೆಗಳಲ್ಲಿ ನನ್ನ ಕತೆಗಳನ್ನು ಓದಿ ಹಾಗೆ ಪರಸ್ಪರ ಪರಿಚಯ ಮಾಡಿಕೊಳ್ಳಲು ಬಂದಿದ್ದ ಚೂರು ಗಟ್ಟಿ ನಗುವಿನ 'ಪರಂಜ್ಯೋತಿ', ಆ ಒಂದು ವರ್ಷ ಮುಗಿಯುವುದರೊಳಗಾಗಿ ನನ್ನ ಅತ್ಯಂತ ಆತ್ಮೀಯರಾದರು.

ಅಂದು ಶುರುವಾದ ಆ ಗೆಳೆತನದ ತೊರೆ ಸುಮಾರು ಎರಡು ದಶಕಗಳ ಕಾಲ ನಿರಂತರವಾಗಿ – ಪತ್ರ ಹಾಗೂ ಫೋನ್ ಸಹಕಾರದಿಂದ – ಹರಿಯುತ್ತಲೇ ಹೋಯಿತು. ಚೆನ್ನೈನ ಅವರ ಮನೆಗೆ ಒಂದೆರಡು ಬಾರಿ ಭೇಟಿಕೊಟ್ಟಿದ್ದೆ. ಮುಂದೆ ನಾನು ಎರಡು – ಮೂರು ವರ್ಷಗಳಿಗೊಮ್ಮೆ ಅಮೆರಿಕದಿಂದ ಊರಿಗೆ ಬಂದಾಗಲೆಲ್ಲ 'ಪರಂಜ್ಯೋತಿ'ಯನ್ನು ಬೆಂಗಳೂರಿನಲ್ಲಿ ಖಂಡಿತ ಭೇಟಿಮಾಡುತ್ತಿದ್ದೆ. ಅವರ ಮನೆಗೂ ಹೋಗುತ್ತಿದ್ದೆ. ಅವರ ಕುಟುಂಬದೊಂದಿಗೆ ಒಟ್ಟಾಗಿ ಊಟ – ತಿಂಡಿ ಮಾಡುತ್ತಿದ್ದೆ. ಅವರು ಇಷ್ಟಪಡುತ್ತಿದ್ದ ಕೊಡಾಕ್ ಫಿಲಂ ರೋಲ್‌ಗಳನ್ನು ಅಥವಾ ಫೋಟೋಗ್ರಾಫಿ ವಸ್ತುಗಳನ್ನು ಅಮೆರಿಕದಿಂದ ತಂದುಕೊಡುತ್ತಿದ್ದೆ.

ನನ್ನ ಹಲವು ಪುಸ್ತಕಗಳ ಪ್ರಕಟಣೆಗೆ ಸಹಕಾರ – ಪ್ರೋತ್ಸಾಹ ಉತ್ತೇಜನ ಕೊಟ್ಟ 'ಪರಂಜ್ಯೋತಿ' ಸ್ವಂತ ವಿಚಾರಗಳನ್ನಾಗಲೀ ಅಥವಾ ಕುಟುಂಬದ 'ಸುದ್ದಿ'ಗಳನ್ನಾಗಲಿ ಅಥವಾ ತಮ್ಮ ಕಷ್ಟಸುಖಗಳನ್ನಾಗಲೀ ಯಾವತ್ತೂ ಏನನ್ನೂ ನನಗೆ ಒಪ್ಪಿಸಿದವರೇ ಅಲ್ಲ. 'ಏನು ವಿಶೇಷ?' ಎಂದು ಪ್ರಶ್ನೆ ಹಾಕುತ್ತಾ ಮತ್ತು ನನ್ನಿಂದ ಉತ್ತರ ಪಡೆಯುತ್ತಾ, ಮಾತುಕತೆ ಮುಂದುವರಿಸುತ್ತಿದ್ದ ಗೆಳೆಯರ 'ಟ್ರಸ್ಟ್'ಗೆ ನಾನು ಪಾತ್ರನಾಗಲಿಲ್ಲವಲ್ಲ ಎಂಬ ಕೊರಗು ಇನ್ನೂ ಇದೆ. ಕ್ಯಾಮರಾವನ್ನು ಆಡಿಸಿಕೊಂಡು ಊರೂರು ಸಂಚರಿಸಿ ಆಪ್ತ ಶೈಲಿಯಲ್ಲಿ ಲೇಖನ ರಚಿಸುತ್ತಿದ್ದವರಲ್ಲಿ ನಾನು – 'ನಾವಿಬ್ರೂ ಒಮ್ಮೆ ಜೊತೆಯಾಗಿ ದಕ್ಷಿಣ ಭಾರತ ಸುತ್ತಾಡಿ ಬರುವಾ' ಎಂದು ಪ್ರಪೋಸಲ್ ಇಟ್ಟಿದ್ದೆ. ಎಂದಿನ ತುಸು ಗಟ್ಟಿ ಕಂಠದಲ್ಲಿ ನಕ್ಕು ಹೌದು ಹೌದು ಎಂದು ಒಪ್ಪಿಗೆ ಕೊಟ್ಟಿದ್ದರು. ಆದರೆ ಅದು ಪ್ರಪೋಸಲ್‌ನಲ್ಲೇ ಕೊನೆ ಆಯಿತು ಎಂಬುದು ಅತೀ ದೊಡ್ಡ ಕೊರಗು.

**ಶಾಂತಾರಾಮ ಸೋಮಯಾಜಿ**
"ಪದ್ಮ", ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಹಯಗ್ರೀವನಗರ, ಉಡುಪಿ – ೫೭೬ ೧೦೨

✳ ✳ ✳

## ನಮನಗಳು

**ಹಿ**ರಿಯರಾದ ಕೆ. ಪಿ. ಸ್ವಾಮಿ ಅವರ ನಿಧನದ ವಾರ್ತೆಯನ್ನು ಕೇಳಿ ದುಃಖವಾಯಿತು. ಕಳೆದ ೨೦ ವರ್ಷಗಳಲ್ಲಿ ಅವರು ನನ್ನ ಅನೇಕ ಲೇಖನಗಳು ಹಾಗೂ ಪುಸ್ತಕಗಳಿಗೆ ಒಳ್ಳೆಯ ಸಲಹೆ ಮತ್ತು ಮಾರ್ಗದರ್ಶನ ನೀಡಿದ್ದರು. ಕೆಲವೊಂದು ಪ್ರಶ್ನೆಗಳನ್ನು ಕೇಳಿ ಉತ್ತರರೂಪವಾಗಿ ನಭಾವಲೋಕನದ ಮೌಲ್ಯವನ್ನು ಹೆಚ್ಚಿಸಿದ್ದರು. ನನ್ನ ಪುಸ್ತಕಗಳಿಗೆ ಬೇಕಾಗುವ ಚಿತ್ರಗಳನ್ನು ತಾವೇ ತೆಗೆದುಕೊಟ್ಟಿದ್ದರು.

ಕೆಲವು ತಿಂಗಳುಗಳ ಹಿಂದೆ ಒಂದು ಪೋಸ್ಟ್ ಕಾರ್ಡ್ ಬರೆದಿದ್ದರು. ಅವರ ನಿಧನ ತುಂಬಲಾರದ ನಷ್ಟ. ಅವರ ಕುಟುಂಬದವರಿಗೆ ನನ್ನ ಸಾಂತ್ವನದ ನಮನಗಳು.

**ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಬೆಂಗಳೂರು – ೫೬೦ ೦೦೧

✳ ✳ ✳



# ಪರಂಜ್ಯೋತಿ – ಅಳಿಯದ ನೆನಪು

೧೯೫೮–೧೯೬೨ರ ಸಮಯದಲ್ಲಿ ಕಥಾವಳಿ, ವಿಜಯಮಾಲ, ವಿನೋದ, ವಿಕಟ ವಿನೋದಿನಿ, ಕಥೆಗಾರ, ನಗುವನಂದ, ಸುಬೋಧ, ಜನಪ್ರಗತಿ, ಪ್ರಜಾಮತ, ಕೊರವಂಜಿ, ಚೇತನ ಮತ್ತಿನ್ನಿತರ ಪತ್ರಿಕೆಗಳು ಯುವಲೇಖಕರನ್ನು ಸತತವಾಗಿ ಪ್ರೋತ್ಸಾಹಿಸಿ ಅವರ ಕೃತಿಗಳನ್ನು ಪ್ರಕಟಿಸುತ್ತಿದ್ದ ಕಾಲ. ಅಂದಿನ ದಿನಗಳಲ್ಲಿ ನಾನೂ ಸೇರಿದಂತೆ, ನೀಲಾಂಬರಿ, ಕೆ. ಪಿ. ಸ್ವಾಮಿ ಹಾಗೂ ಪರಂಜ್ಯೋತಿ ಎನ್ನುವ ಹೆಸರುಗಳಲ್ಲಿ ಕೃತಿಗಳನ್ನು ರಚಿಸುತ್ತಿದ್ದ ಪರಂಜ್ಯೋತಿ, ನಾ. ಡಿಸೋಜ, ಬಿ. ಆರ್. ಶಂಕರ್, ಜಿ. ಜ್ಞಾನಾನಂದ, ರಮಾನಂದ ಎನ್ನುವ ಕಾವ್ಯನಾಮದಿಂದ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ಕೋಟಾ ಸೀತಾರಾಮ ಪ್ರಭು, ಕಿರಣ ಎನ್ನುವ ಕಾವ್ಯನಾಮದಿಂದ ಕೃತಿಗಳನ್ನು ರಚಿಸಿರುತ್ತಿದ್ದ ಕುತ್ಯಾಲ ನಾಗಪ್ಪ ಗೌಡ, ವಿಶುಕುಮಾರ್ ಮೊದಲಾದವರು ಪ್ರಮುಖ ಯುವಲೇಖಕರು.

ನಾನು ಬೆಂಗಳೂರಿಗೆ ಬಂದು ಕೆಲವು ತಿಂಗಳುಗಳಾಗಿತ್ತು. ೧೯೬೩ರ ಡಿಸೆಂಬರ್ ತಿಂಗಳ ಒಂದು ಸಂಜೆ ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಪ್ರಾಯಶಃ ಅದು ರಾಶಿಯವರ ಕಾರ್ಯಕ್ರಮ ಅಂತ ಕಾಣುತ್ತೆ. ಕಾರ್ಯಕ್ರಮ ಮುಗಿಸಿಕೊಂಡು ಹತ್ತಿರದ ಹಾರ್ಡಿಂಜ್ ರಸ್ತೆಯ ಮಹದೇವ ಶಾಸ್ತ್ರಿಗಳ ಕಾಂಪೌಂಡಿನಲ್ಲಿ ನಾನು ವಾಸಿಸುತ್ತಿದ್ದ ಮನೆಯ ಕಡೆಗೆ ಹೆಜ್ಜೆ ಹಾಕಿದ್ದೆ. ಅಷ್ಟರಲ್ಲಿ ಒಂದು ಧ್ವನಿ ಕಿವಿಗೆ ಬಿತ್ತು.

'ಪರಂಜ್ಯೋತಿ, ಪರಂಜ್ಯೋತಿ ನಿಲ್ಲಿ'

ನಾನು ಗಕ್ಕನೆ ನಿಂತೆ. ಮುಖಪರಿಚಯವಿಲ್ಲದಿದ್ದರೂ, ವಿಜಯಮಾಲಾದ ಕಥೆಗಾರ 'ಪರಂಜ್ಯೋತಿ' ನನಗೆ ಅತ್ಯಂತ ಪರಿಚಯದ ಹೆಸರು. ತಿರುಗಿ ಆ ವ್ಯಕ್ತಿಯ ಬಳಿ ಹೋಗಿ 'ನಮಸ್ಕಾರ ಪರಂಜ್ಯೋತಿಯವರೇ, ನಾನು ರಾಮಾನುಜ' ಎಂದು ಪರಿಚಯ ಮಾಡಿಕೊಂಡೆ. ಅಲ್ಲಿದ್ದ ನಾಲ್ವರಿಗೂ ಎಂದರೆ ಬಾಕಿನ, ಶ್ಯಾಂ ಭಟ್ಟ, ಪರಂಜ್ಯೋತಿ ಮತ್ತೆ ನಾನು, ಎಲ್ಲರೂ ನನಗೆ ನಾಮಮಾತ್ರದಿಂದ ಚೆನ್ನಾಗಿಯೇ ಪರಿಚಯ. ಆ ಕ್ಷಣ ಮುಖಪರಿಚಯದಿಂದ ಆರಂಭವಾದ ನಮ್ಮ ಸ್ನೇಹ ಗಾಢವಾಗಿ ಈವರೆಗೂ ಬೆಳೆದು ಬಂದಿದೆ.

ಬಸವನಗುಡಿಯ ಗಾಂಧಿಬಜಾರ್ ಬಳಿಯ ಪ್ರಜಾಮತ ಮುದ್ರಣಾಲಯದ ಪಕ್ಕದಲ್ಲಿರುವ ಗೋಕುಲ ಬಿಲ್ಡಿಂಗ್ಸ್‌ನಲ್ಲಿದ್ದ ಕಲ್ಪನಾ ಹೋಟೆಲ್‌ನ ರೂಂ. ಸಂಖ್ಯೆ ೩೧ರಲ್ಲಿ ಬಾಕಿನ ಮತ್ತು ಪರಂಜ್ಯೋತಿ ಎನ್ನುವ ಹೆಸರಿನ ಕೆ. ಪಿ. ಸ್ವಾಮಿ ಇವರಿಬ್ಬರ ವಾಸ. ಸ್ವಲ್ಪದಿನಗಳಲ್ಲಿ ಇದೇ ನಮ್ಮ ಸಾಹಿತ್ಯ ಚರ್ಚೆಯ ತಾಣವೂ ಆಗಿಬಿಟ್ಟಿತು.

ಮುಂದಿನ ಕೆಲವು ದಿನಗಳಲ್ಲಿ ನಾವು ಪ್ರಕಟಣೆಯ ಕೆಲಸವನ್ನು ಸಹ ಆರಂಭಿಸಿದೆವು. ರಮಾತನಯ ಅವರ ಸಣ್ಣ ಕಥೆಗಳು ಮತ್ತು ಪರಂಜ್ಯೋತಿಯವರ 'ಒಲವು ಚೆಲುವಲ್ಲ' ಕೃತಿಗಳನ್ನು ಪ್ರಕಟಿಸಿದೆವು. ರಮಾತನಯ ಅವರ ಈ ಪ್ರಕಟಣೆ ಒಳ್ಳೆಯ ಹೆಸರು ಮಾಡಿತು. ಬಾಕಿನ ಬಹಳ ಉತ್ಸಾಹಪೂರಿತ ತರುಣ. ಪರಂಜ್ಯೋತಿ ಬಳಿ ಒಂದು ಬಾಕ್ಸ್ ಕ್ಯಾಮೆರಾ ಇತ್ತು. ಈ ಪ್ರಕಟಣೆಗಳಿಗೆ ಪರಂಜ್ಯೋತಿ ಛಾಯಾಚಿತ್ರಕಾರ. ಕೆ. ಆರ್. ಸರ್ಕಲ್ ಬಳಿಯ ಶ್ರೀ ಜಯಚಾಮರಾಜೇಂದ್ರ ಪಾಲಿಟೆಕ್ನಿಕ್‌ನಲ್ಲಿ ಪ್ರಿಂಟಿಂಗ್ ಟೆಕ್ನಾಲಜಿ ವ್ಯಾಸಂಗ ಮಾಡಿದ್ದ ಬಾಕಿನ ಮುದ್ರಣಕಾರ. ಆಗಿನ ದಿನಗಳಲ್ಲಿ ೩೦೦ ರೂ. ವೇತನ ಪಡೆಯುತ್ತಿದ್ದ ನಾನು ಫೈನಾನ್ಷಿಯರ್!

ವಿದ್ಯಾರ್ಥಿಭವನದ ಮುಂದಿನ ಅಡ್ಡರಸ್ತೆಯಲ್ಲಿ ಆಗಿನ ದಿನಗಳಲ್ಲಿ ಹೆಸರಾಂತ ಕಲಾವಿದ ಶ್ರೀ ಅ. ನ. ಸುಬ್ಬರಾಯರ ಸಣ್ಣ ಸ್ಟುಡಿಯೋ. ಕ್ರಮೇಣ ಈ ಸ್ಟುಡಿಯೋ ನಮ್ಮ ಸಾಹಿತ್ಯ ಚರ್ಚೆಗಳ ತಾಣವಾಗಿತ್ತು. ಇಲ್ಲಿಗೆ ನನ್ನ ಗೆಳೆಯ, ಸಹಪಾಠಿ, ಸಹೋದ್ಯೋಗಿ ಕೆ. ಪಿ. ಕೋಕಿಲೋದಯ ಚೈತ್ರ ಆಗಾಗ್ಗೆ ಬರುತ್ತಿದ್ದ. ಆತ ಗೌರವಾನ್ವಿತ ಸಾಹಿತ್ಯಕಾರ ಕುವೆಂಪು ಅವರ ಮಗ. ಸಾಧಾರಣವಾಗಿಯೇ ಎಲ್ಲರಿಗೂ ಬಹಳ ಗೌರವ ಮತ್ತು ಆದರ.

ಪರಂಜ್ಯೋತಿ, ಶ್ರೀ ಬಿ. ಎನ್. ಗುಪ್ತ ಅವರ ಜನಪ್ರಗತಿ ಕಾರ್ಯಾಲಯದಲ್ಲಿ ಮಲ್ಲಿಗೆ ಪತ್ರಿಕೆಗಾಗಿ ಕೆಲಸ ಮಾಡುತ್ತಿದ್ದರು. ಶ್ರೀ ನಾಡಿಗೇರ ಕೃಷ್ಣರಾಯರು ಅದರ ಸಂಪಾದಕರಾಗಿದ್ದರು. ನಾನು ಜನಪ್ರಗತಿ ಪತ್ರಿಕೆಯಲ್ಲಿ ನಿಯತವಾಗಿ ಮಕ್ಕಳ ಕಥೆಗಳನ್ನು ಬರೆಯುತ್ತಿದ್ದೆ. ಜನಪ್ರಗತಿ ಕಾರ್ಯಾಲಯ ಅಂದಿನ ಸೆಂಟ್ರಲ್ ಜೈಲ್ (ಇಂದಿನ ಫ್ರೀಡಂ ಪಾರ್ಕ್) ಬಳಿಯಿರುವ ಕುರುಬರ ಸಂಘದ ಹತ್ತಿರವಿತ್ತು. ಒಂದು ದಿನ ಸಂಜೆ ಪರಂಜ್ಯೋತಿ ಗೆಳೆಯರ ಬಳಗಕ್ಕೆ ಬಂದಾಗ ಮುಖ ಕಳೆಗುಂದಿತ್ತು. ಏನಾಯಿತು ಅಂತ ಎಷ್ಟು ಕೇಳಿದರೂ ಹೇಳಲಿಲ್ಲ. ಮತ್ತೆ ಅದೇ ಮ್ಲಾನವದನ, ನೀರು ತುಂಬಿದ ಕಣ್ಣುಗಳು. ಬಲವಂತಮಾಡಿ ಕೇಳಿದಾಗ ಬಾಯ್ಬಿಟ್ಟರು. 'ನನ್ನ ತಿಂಗಳ ಇಡೀ ವೇತನವಾದ ನೂರು ರೂಪಾಯಿಗಳು ಪಿಕ್ ಪಾಕೆಟ್ ಆಗಿಹೋಯಿತು. ಇನ್ನೊಂದು ತಿಂಗಳೂ ಖರ್ಚಿಗೆ ಏನು ಮಾಡುವುದು?' ಅಂದಿನ ದಿನಗಳಲ್ಲಿ ನೂರು ರೂಪಾಯಿಯೆಂದರೆ ಅಷ್ಟೊಂದು ಮೌಲ್ಯ!

ತಕ್ಷಣ ಎಲ್ಲರೂ ಕಾರ್ಯಪ್ರವೃತ್ತರಾದೆವು. ಅಲ್ಲಿದ್ದ ಎಲ್ಲರೂ ತಮ್ಮ ಬಳಿಯಿದ್ದ ದುಡ್ಡು ಶೇಖರಿಸಿ ನೂರು ರೂಪಾಯಿಗಳನ್ನು ಪರಂಜ್ಯೋತಿಗೆ ಕೊಟ್ಟೆವು. ಅಷ್ಟು ಗಾಢವಾಗಿತ್ತು ನಮ್ಮ ಬಾಂಧವ್ಯ. ಈ ದಿನಗಳು ನನ್ನ ಜೀವನದ ಪರ್ವಕಾಲ ಎಂದರೆ ತಪ್ಪೇನಿಲ್ಲ. ಮುಂದೆ ನಾವು ಯುವ ಲೇಖಕರನ್ನು ಪ್ರೋತ್ಸಾಹಿಸುವತ್ತ ಕವಿತಾ ಎನ್ನುವ ಪತ್ರಿಕೆಯನ್ನು ಪ್ರಕಟಿಸಲು ನಿರ್ಧರಿಸಿದೆವು. ಆಗ ಒಂದು ಘಟನೆ ನನಗೆ ಬಹಳ ಜ್ಞಾಪಕವಿದೆ. ರಾಮಕೃಷ್ಣಾಶ್ರಮಕ್ಕೆ ಬೇಂದ್ರೆಯವರು ಬಂದಿದ್ದರು. ನಾವೆಲ್ಲ ಕಿರಿಯ ಸಾಹಿತಿಗಳು ಅವರನ್ನು ಭೇಟಿಯಾಗಲು ಹೋದೆವು. ಪರಿಚಯವಾದ ನಂತರ ನಮ್ಮ 'ಕವಿತಾ' ಮ್ಯಾಗಜಿನ್‌ಗೆ ಒಂದು ಕವಿತೆಯನ್ನು ಬರೆದುಕೊಡಲು ಕೇಳಿಕೊಂಡೆವು. ಆಗಲೇ ಬೇಂದ್ರೆಯವರು 'ಇದು ಗುಹ್ಯ ಇದು ಗಹನ ಇದು ಗಂಭೀರ...' ಎಂದು ಆರಂಭವಾಗುವ ಅರವಿಂದರ ಬಗ್ಗೆ ಒಂದು ಕವನ ರಚಿಸಿಕೊಟ್ಟರು. ಅದನ್ನು 'ಕವಿತಾ'ದಲ್ಲಿ ಪ್ರಕಟಿಸಿದೆವು. ಪರಂಜ್ಯೋತಿ ಅವತ್ತು ಕ್ಲಿಕ್ಕಿಸಿದ ಬೇಂದ್ರೆಯವರ ಚಿತ್ರವೂ ಅದರಲ್ಲಿತ್ತು. ಪರಂಜ್ಯೋತಿ ನಮ್ಮೆಲ್ಲ ಕೆಲಸಗಳಲ್ಲಿಯೂ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಅಗಲಿಕೆಯ ನೋವು ಬಹಳವಿದೆ.

ಮುಂದೆ ನಾವು ಕಿರಿಯ ಕವಿಗಳ ಸಮ್ಮೇಳನವನ್ನು ಗಾಂಧಿಬಜಾರಿನಲ್ಲಿ ಆಚರಿಸಿದೆವು. ಹಿರಿಯ ಸಾಹಿತಿ ಗೋಕಾಕ್ ಅವರು ಅಧ್ಯಕ್ಷತೆ ವಹಿಸಿದ್ದರು.

ಪರಂಜ್ಯೋತಿ ಮುಂದಿನ ದಿನಗಳಲ್ಲಿ ಮಲ್ಲಿಗೆಯಲ್ಲಿನ ಕೆಲಸವನ್ನು ಬಿಟ್ಟು ಚೆನ್ನೈನಲ್ಲಿರುವ ಸೋವಿಯತ್ ಲ್ಯಾಂಡ್ ಪ್ರಕಟನಾಲಯದಲ್ಲಿ ಕೆಲಸಕ್ಕೆ ಸೇರಿದರು. ನಂತರ ನವಕರ್ನಾಟಕ ಪ್ರಕಟಣಾ ಸಂಸ್ಥೆ ಸೇರಿದರು. ನವಕರ್ನಾಟಕ ಸಂಸ್ಥೆ 'ಹೊಸತು' ಪತ್ರಿಕೆ ಹೊರಡಿಸುವ ಕೆಲಸವನ್ನು ಕೈಗೆತ್ತಿಕೊಂಡಿತ್ತು. ಈ ಪತ್ರಿಕೆಯ ನಿರ್ವಹಣೆಗೆ ಜಾಹೀರಾತುಗಳು ಅತ್ಯಗತ್ಯವಾಗಿದ್ದವು. ಆ ಸಮಯದಲ್ಲಿ ನಾನು ಎಚ್.ಎಂ.ಟಿ.ಯ ಚೇರ್ಮನ್ ಆಗಿದ್ದೆ. ಬಹಳ ಹಿಂಜರಿಕೆಯಿಂದಲೇ ಒಂದು ದಿನ ಪರಂಜ್ಯೋತಿ ನನ್ನ ಮನೆಗೆ 'ಗೇಟ್ ಕ್ರ್ಯಾಷ್' ಮಾಡಿದ್ದರು. ನಾನು ಆಗ ಹಿಂದಿ ಮಾತನಾಡುತ್ತಿದ್ದ ಒಬ್ಬ ಅತಿಥಿಯೊಡನೆ ಇದ್ದೆ. ಪರಂಜ್ಯೋತಿಯವರನ್ನು ಕಂಡ ಕೂಡಲೇ ಅತ್ಯಂತ ವಿಶ್ವಾಸ ಪ್ರೇಮಗಳಿಂದ ಅವರನ್ನು ಅತಿಥಿಗಳಿಗೆ 'ಯೇ ಕನ್ನಡ ಸಾಹಿತ್ಯ ಮೇ ಬಡಾ ಲೇಖಕ್ ಹೈ' ಎಂದು ಪರಿಚಯಿಸಿದೆ. ಪರಂಜ್ಯೋತಿಯವರು ಈ ಘಟನೆಯನ್ನು ಮುಂದೆ ಹೊಸತು ಪತ್ರಿಕೆಯ ತಮ್ಮ ಲೇಖನದಲ್ಲಿ 'ಕನ್ನಡದ ಈ 'ಬಡ' ಲೇಖಕನನ್ನು 'ಬಡಾ' ಲೇಖಕ್ ಎಂದು ಪರಿಚಯಿಸಿದರು' ಎಂದು ಸ್ಮರಿಸುತ್ತಾರೆ. ಅದು ಅವರ ಹಿರಿಯತನ. ಕನ್ನಡ ಸಾಹಿತ್ಯವನ್ನು ಪ್ರೋತ್ಸಾಹಿಸುವತ್ತ 'ಹೊಸತು' ಪತ್ರಿಕೆಯಲ್ಲಿ ಮಾತ್ರವಲ್ಲ ಇತರ ಅನೇಕ ಪತ್ರಿಕೆಗಳಲ್ಲಿ ಎಚ್.ಎಂ.ಟಿ. ಸತತವಾಗಿ ಜಾಹೀರಾತುಗಳನ್ನು ಕೊಡುತ್ತಿತ್ತು. ಅಲ್ಲದೆ ಅದರಲ್ಲಿ ಪ್ರಕಟವಾದ ಉತ್ತಮ ಪ್ರಬಂಧಕ್ಕೆ ಎಚ್.ಎಂ.ಟಿ. ಕೈಗಡಿಯಾರವನ್ನು ಬಹುಮಾನವಾಗಿ ಸಹ ನೀಡುತ್ತಿತ್ತು. ಒಮ್ಮೆ ಅ. ರಾ. ಮಿತ್ರ ಅವರು ಸಹ ಹೊಸತು ಪತ್ರಿಕೆಯಲ್ಲಿ ಪ್ರಕಟವಾದ ಒಂದು ಪ್ರಬಂಧಕ್ಕೆ ಈ ಬಹುಮಾನವನ್ನು ಪಡೆದಿದ್ದರು. ಇವೆಲ್ಲ ಕಾರ್ಯಗಳಲ್ಲಿಯೂ ಪರಂಜ್ಯೋತಿಯವರ ಪಾತ್ರ ಹಿರಿದು.

೨೦೧೫ರಲ್ಲಿ ಪರಂಜ್ಯೋತಿಯವರು ತಮ್ಮ ಹುಟ್ಟೂರು ನೀಲಗಿರಿಯ ಬುಡಕಟ್ಟು ಜನಾಂಗದ ಸಾಮಾಜಿಕ ಅಧ್ಯಯನವನ್ನು ಕೈಗೊಂಡಿದ್ದರು. ಅಲ್ಲದೆ ಅದನ್ನು ಪ್ರಕಟಿಸುವ ಉದ್ದೇಶವನ್ನು ಹೊಂದಿದ್ದರು. ಆಗ ಎಂ. ಪಿ. ಬಿರ್ಲಾ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಮತ್ತು ಬೆಂಗಳೂರು ಭಾರತೀಯ ವಿದ್ಯಾಭವನದ ಮುಖ್ಯಸ್ಥನಾಗಿರುವ ನನ್ನನ್ನು ಭೇಟಿಯಾಗಿ ಈ ಕೆಲಸಕ್ಕೆ ಬೆಂಬಲವನ್ನು ನೀಡಬೇಕು ಎಂದು ಕೇಳಿಕೊಂಡಿದ್ದರು. ಈ ಸಾಮಾಜಿಕ ಕಳಕಳಿಯ ಈ ಉತ್ತಮ ಕೆಲಸಕ್ಕೆ ಪ್ರೋತ್ಸಾಹ ನೀಡುವತ್ತ ಸಹಾಯ ಧನವನ್ನು ಅವರಿಗೆ ನೀಡಿದ್ದೆವು. 'ನೀಲಗಿರಿ – ಸಾಮಾಜಿಕ ಸಾಂಸ್ಕೃತಿಕ ಕಣ್ನೋಟ' ಪುಸ್ತಕದ ಮುನ್ನುಡಿಯಲ್ಲಿ ಇದನ್ನು ಪರಂಜ್ಯೋತಿ ಸ್ಮರಿಸುತ್ತಾರೆ.

ಸಾಮಾನ್ಯವಾಗಿ ಗೆಳೆಯರು ನಮ್ಮ ಜೀವನದ ಅವಿಭಾಜ್ಯ ಅಂಗ. ಆದರೆ ನಮ್ಮ ಜೀವನದ ವಿವಿಧ ಸ್ತರಗಳಲ್ಲಿ ತಮ್ಮ ಇರುವಿಕೆಯ ಛಾಪು ಮೂಡಿಸುವ ಪರಂಜ್ಯೋತಿಯವರಂತಹ ಗೆಳೆಯರು ಸಿಗುವುದು ವಿರಳ. ಆತ ನನ್ನ ಸಾಹಿತ್ಯದ ಒಡನಾಟ ಮಾತ್ರವಲ್ಲದೆ, ಛಾಯಾಚಿತ್ರಗಳು, ಸಾಮಾಜಿಕ ಅಧ್ಯಯನ ಮುಂತಾದ ಹತ್ತು ಹಲವಾರು ರೀತಿಯಲ್ಲಿ ನನ್ನನ್ನು ಪ್ರಭಾವಿಸಿದ್ದಾರೆ. ಪರಂಜ್ಯೋತಿ ನನ್ನ

ಸ್ಮೃತಿಪಟಲದಲ್ಲಿ ಶಾಶ್ವತವಾಗಿ ಉಳಿಯುವ ಗೆಳೆಯ. ಅಪ್ರತಿಮ ಛಾಯಾಚಿತ್ರಗಾರ, ಪರಂಜ್ಯೋತಿಯವರ ಸೋಮನಾಥಪುರದ ಛಾಯಾಚಿತ್ರ ಅವರ ಪ್ರೀತಿಯ ದ್ಯೋತಕವಾಗಿ ನನ್ನ ಬಳಿ ಈಗಲೂ ಇದೆ. ಆ ನೆನಪಿಗೆ ನನ್ನ ಪ್ರಣಾಮಗಳು.

**ಎಸ್. ರಾಮಾನುಜ**

ನಂ. ೯, 'ಹರಿದೀಪ್', ಯಾದವಗಿರಿ, ೧ನೇ ಮುಖ್ಯರಸ್ತೆ, ಮೈಸೂರು – ೫೭೦ ೦೨೦

✶ ✶ ✶

# ನಮ್ಮ ಸ್ವಾಮಿಯ ಯಾನ

ನೆನಪು ಇನ್ನೂ ಹಸುರಾಗಿದೆ. ೧೯೯೨ರಲ್ಲಿ ನನ್ನ ಕೆಲವು ಲೇಖನಗಳನ್ನು ಹಿಡಿದುಕೊಂಡು ನವಕರ್ನಾಟಕ ಸಂಸ್ಥೆಯ ಮುಖ್ಯಸ್ಥರಾಗಿದ್ದ ಆರ್. ಎಸ್. ರಾಜಾರಾಮ್ ಅವರನ್ನು ಕಂಡಾಗ, ಅವರ ಜೊತೆ ಸ್ವಾಮಿಯೂ ಇದ್ದರು (ಕೆ. ಪಿ. ಸ್ವಾಮಿ ಅಥವಾ ಪರಂಜ್ಯೋತಿ). ಕೆಲವು ಹಸ್ತಪ್ರತಿಗಳ ತಿದ್ದುಪಡಿ ಬಗ್ಗೆ ಚುಟುಕು ಅಭಿಪ್ರಾಯಕೊಟ್ಟು ಆಫೀಸಿನ ಅದೇ ಮೂಲೆಗೆ ಹೋಗಿದ್ದರು. ಅವರದು ತಿದ್ದುಪಡಿಗಳೊಡನೆ 'ಮಾತುಕತೆ'. ಬಹುತೇಕ ಮೌನಿ. ನನ್ನ ಟೈಪ್ ಮಾಡಿದ ಪ್ರತಿಗಳಲ್ಲಿ ಇಡೀ ಪುಟದ ತುಂಬ ವ್ಯಾಕರಣದ ಚಿಹ್ನೆಗಳನ್ನು ಕೂಡಿಸಿದ್ದರು. ನನಗೆ ಗಾಬರಿಯಾಗಿತ್ತು. ಅವರ ತಿದ್ದುಪಡಿ ಎಂದರೆ ಇರಿಯುವಂತಹವಲ್ಲ, ಬರವಣಿಗೆ ಸುಧಾರಿಸುವಂಥವು. ಅನಂತರ ನವಕರ್ನಾಟಕದ ಯಾವುದೇ ಕಾರ್ಯಕ್ರಮವಾಗಲಿ ಸ್ವಾಮಿ ಅವರು ಕಾಣುತ್ತಿದ್ದುದು ನೇತುಹಾಕಿಕೊಂಡ ಕ್ಯಾಮೆರಾದೊಡನೆ, ಅಲ್ಲೂ ಅಷ್ಟೇ, ಹರಟೆ ಮಾತು ಇಲ್ಲ. ನವಕರ್ನಾಟಕಕ್ಕೆ ಹೋದಾಗಲೆಲ್ಲ ಅವರನ್ನು ಮಾತನಾಡಿಸಿಯೇ ಬರುತ್ತಿದ್ದೆ. ಸಲುಗೆ ಬೆಳೆಯಿತು 'ನೀವ್ ಬಿಡಿ, ಕಾಡು–ಮೇಡು, ನದಿ–ತೊರೆಗಳ ಸಂಗಡವೇ ಇರುತ್ತೀರಿ' ಎಂದು ಅವರು ಹೇಳುವಾಗ ಅವರ ಮಾತಿನಲ್ಲಿ ನಿರಾಶೆ ಇರುತ್ತಿರಲಿಲ್ಲ, ನಾನೇ ಪುಣ್ಯವಂತ ಎನ್ನುವ ಮೆಚ್ಚುಗೆ ಅದು.

ನಾನು ಸಂಶೋಧನೆಗೆಂದು ಕರ್ನಾಟಕದ ಹಲವು ಚಿನ್ನದ ಗಣಿಗಳನ್ನು ಶೋಧಿಸುತ್ತಿದ್ದೆ. 'ನಾನು ಬರ್ತೀನಿ' ಎಂದು ಒಮ್ಮೆ ಕೆ.ಜಿ.ಎಫ್.ಗೆ ಬಂದರು. ನಾನು ಹತ್ತಿದ ಬೆಟ್ಟವನ್ನೆಲ್ಲ ಅವರೂ ಹತ್ತಿದರು 'ಅಯ್ಯೋ, ಇದಕ್ಕೆ ೨೫೦ ಕೋಟಿ ವರ್ಷ ಅಂತೀರಾ' ಎಂದು ಕಲ್ಲು ನೋಡಿ ಸಂಶಯದ ನಗೆ ಬೀರಿದ್ದರು. ಅವರ ಜಗತ್ತಿನ ನೋಟ ಎಂದರೆ ಅದು ಕ್ಯಾಮೆರಾದ ಮೂಲಕವೇ. ಮುಂದೆ ಇಂಥದೇ ಉದ್ದೇಶಕ್ಕೆಂದು ನಾನು ೧೯೯೮ರಲ್ಲಿ ಹಟ್ಟಿ ಚಿನ್ನದ ಗಣಿಗೆ ಹೊರಟೆ. ಸ್ವಾಮಿಯೂ ತಯಾರಾಗಿದ್ದರು; ಖುಷಿಯಾಗಿ ಚರಿತ್ರೆಯ ಪುಟಗಳನ್ನು ಹುಡುಕುವ ಹುಡುಗನಾಗಿ. ನನ್ನೊಡನೆ ಬಂದು ಚಿನ್ನದ ಪುರಾತನ ಗಣಿಗಳ ಫೋಟೋ ಹಿಡಿದು ಸೊಗಸಾದ ಪ್ರವಾಸಿ ಕಥನ ಬರೆದರು. ಅದನ್ನು 'ಚಿನ್ನದ ಬೆನ್ನೇರಿ' ಎಂಬ ಅವರ ಪುಸ್ತಕದಲ್ಲಿ ದಾಖಲಿಸಿದ್ದಾರೆ. ನಾನು ಆಫೀಸಿನಲ್ಲಿದ್ದಾಗ ಒಮ್ಮೆ ಅವರ ಫೋನ್ ಬಂತು. 'ಎಲ್ಲಿದ್ದೀರಿ' ಎಂದು ಕೇಳುವ ಮೊದಲೇ 'ರಾಮನಗರದಲ್ಲಿ' ಎಂದಿದ್ದರು. ಅಲ್ಲಿನ ಹೆಬ್ಬಂಡೆಗಳು ಇವರಿಗೆ ಸೌಂದರ್ಯದ ಪ್ರತೀಕವಾಗಿ ಕಂಡಿದ್ದವೇನೋ, ಫೋಟೋ ತೆಗೆಯಲೇ ಬಂದಿದ್ದರಂತೆ. 'ಅಲ್ಲಿ ನಿಮ್ಮ ನೆನಪಾಯಿತು' ಎಂದಿದ್ದರು. ಉಡುಪಿಗೆ ನವಕರ್ನಾಟಕದ ವ್ಯಾನಿನಲ್ಲೇ ಅವರೂ–ಅವರ ಪತ್ನಿ, ನಾನೂ–ನನ್ನ ಪತ್ನಿ, ಮೂಡುಬಿದರೆಯಲ್ಲಿ ಸನ್ಮಾನ ಕಾರ್ಯಕ್ರಮಕ್ಕೆ ಹೋಗಿದ್ದೆವು. ಹಿಂತಿರುಗಿ ಬರುವಾಗ ಮಣಿಪಾಲ ಮೆಡಿಕಲ್ ಕಾಲೇಜಿನಲ್ಲಿ ಬುರುಡೆಗಳನ್ನು ಇಟ್ಟಿರುವ ಮ್ಯೂಸಿಯಂಗೆ ಹೋಗಿ ಕ್ಲಿಕ್ಕಿಸಿದ್ದೂ ಕ್ಲಿಕ್ಕಿಸಿದ್ದೇ. ಮುಂದೆ ಮಂಗಳೂರಿಗೆ ಬಂದು ಸೇಂಟ್ ಅಲೋಷಿಯಸ್ ಕಾಲೇಜಿನಲ್ಲಿ ಇನ್ನೊಂದು ಮ್ಯೂಸಿಯಂ ಭೇಟಿಮಾಡಿ ನಾನು ಕಣ್ಣಲ್ಲಿ ನೋಡುತ್ತಿದ್ದರೆ, ಅವರು ಕ್ಯಾಮೆರಾದಲ್ಲಿ ನೋಡುತ್ತಿದ್ದರು. ಇಡೀ ಪಶ್ಚಿಮಘಟ್ಟ ಅವರನ್ನೇ ತಬ್ಬಿದೆಯೋ ಎನ್ನುವಂತೆ ಮೈಮರೆತು ಪ್ರವಾಸದುದ್ದಕ್ಕೂ ದೃಶ್ಯವನ್ನು ಸವಿಯುತ್ತಿದ್ದರು.

ಈಗ? ಗೊತ್ತಿಲ್ಲ, ಎಲ್ಲಿದ್ದಾರೋ.. ಸ್ವರ್ಗ ಇದ್ದರೆ ಅಲ್ಲೊಂದು ಲೊಕೇಷನ್ ಹುಡುಕಿ ಭೂಮಿಯ ಭರ್ಜರಿ ಚಿತ್ರವನ್ನು ಸೆರೆಹಿಡಿಯುತ್ತಿರಬಹುದೋ ಏನೋ. ಬಿ. ಎಂ. ಶ್ರೀ. ಅವರ ಕವನದ ಒಂದು ಸಾಲು ನೆನಪಾಗುತ್ತಿದೆ: 'ಎಲ್ಲೋ ಎಲ್ಲೋ ಮಾಯವಾದವು ಹಳೆಯ ಪಳಕೆಯ ಮುಖಗಳು'. ಬಹುಶಃ ನಮ್ಮನ್ನು ಕುರಿತು ಮುಂದಿನ ಪೀಳಿಗೆ ಇದೇ ಮಾತು ಹೇಳುವ ಸಂದರ್ಭವೂ ಬರುತ್ತದೆ. ಬದುಕೇ ಹೀಗೆ, ಸರಿಯುವ ಕಥೆ; ಸರಿದು ಮರೆಯಾಗುವ ಕಥೆ.

**ಟಿ. ಆರ್. ಅನಂತರಾಮು**

೫೩೪, ೭೦ನೇ ಅಡ್ಡರಸ್ತೆ, ಕುಮಾರಸ್ವಾಮಿ ಬಡಾವಣೆ ೧ನೇಹಂತ, ಬೆಂಗಳೂರು–೫೬೦ ೧೧೧

✶ ✶ ✶

# 'ಬೆಟ್ಟದ ಗಾಳಿ'ಯ ಪರಂಜ್ಯೋತಿ

ಬಹಳ ಹಿಂದೆ 'ವಿಜಯಮಾಲ' ಹೆಸರಿನ ಮಾಸಪತ್ರಿಕೆ ಬೆಂಗಳೂರಿನ ಚಿಕ್ಕಪೇಟೆಯಿಂದ ಪ್ರಕಟವಾಗುತ್ತಿತ್ತು. ತಮಿಳು ಮನೆಮಾತಿನ ಮುತ್ತುಸ್ವಾಮಿಯವರು ಇದರ ಮಾಲಕ, ಸಂಪಾದಕರಾಗಿದ್ದರು. ಕಲಾವಿದ ಕುಕ್ಕೆಯವರು ಮುಖಪುಟದ ಚಿತ್ರ ರಚಿಸುತ್ತಿದ್ದರು. ಅದು ಬಣ್ಣದಲ್ಲಿರುತ್ತಿತ್ತು. ಕೆ. ಪಿ. ಸ್ವಾಮಿಯವರ ಕತೆಗಳು ಅದರಲ್ಲಿ ಪ್ರಕಟವಾಗುತ್ತಿದ್ದವು. ಅವರು ನೀಲಗಿರಿಯ ಕೋರಕುಂದದಲ್ಲಿದ್ದರು. ಸುಳ್ಯದಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದ ನನ್ನ ಕವಿತೆ, ಲೇಖನಗಳೂ ಆ ಪತ್ರಿಕೆಯಲ್ಲಿ ಪ್ರಕಟವಾಗತೊಡಗಿದವು.

ಮುಂದೊಂದು ದಿನ ನಾನಿದ್ದ ಪುತ್ತೂರಿನಲ್ಲಿ ಸ್ವಾಮಿಯವರು ಪ್ರತ್ಯಕ್ಷರಾದರು. ಶಿಂಗಣ್ಣ ಎಂದೇ ಖ್ಯಾತರಾಗಿದ್ದ ರಘು ಅವರು ವ್ಯಂಗ್ಯ ಚಿತ್ರಗಳಿಗೆ ಮೀಸಲಾದ 'ಇಂದ್ರಧನುಸ್' ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಸ್ವಾಮಿಯವರು ಉಪಸಂಪಾದಕನಾಗಿ ಸೇರಿಕೊಂಡರು. ವಿಜಯಮಾಲದ ಓದಿನ ಮೂಲಕ ಆಗಿದ್ದ ಪರಿಚಯ ಇಂದ್ರಧನುಸ್ ಮೂಲಕ ಗಟ್ಟಿಯಾಯಿತು. ಆದರೆ ಆ ಪತ್ರಿಕೆ ಹೆಚ್ಚು ಕಾಲ ಬದುಕಲಿಲ್ಲ. ಸ್ವಾಮಿಯವರು ಪರಂಜ್ಯೋತಿಯಾಗಿ ಬೆಂಗಳೂರಿನ ಪ್ರಪಂಚ ವಾರಪತ್ರಿಕೆಯಲ್ಲಿ ಕೆಲಸಕ್ಕೆ ಸೇರಿಕೊಂಡರು. ಅಲ್ಲಿ ಪಾಟೀಲ ಪುಟ್ಟಪ್ಪ ಅವರ ಮಾರ್ಗದರ್ಶನದ ಪ್ರಯೋಜನ ಪಡೆದರು. ನನ್ನ ಉದ್ಯೋಗವೂ ನನ್ನನ್ನು ಬೆಂಗಳೂರಿಗೆ ಕರೆದುಕೊಂಡು ಹೋಯಿತು. ಅಲ್ಲಿ ನಾವು ಮತ್ತೆ ಜೊತೆಗಿದ್ದೆವು. ಕೆ.ಎಸ್.ನ, ನಿರಂಜನ, ತಿ. ತಾ. ಶರ್ಮ, ಮಾಸ್ತಿ ಮುಂತಾದವರನ್ನು ಭೇಟಿಯಾದೆವು. ಸ್ವಾಮಿಯವರು ಅವರ ಫೋಟೊ ಕ್ಲಿಕ್ಕಿಸುತ್ತಿದ್ದರು.

ಬೇಂದ್ರೆಯವರು ಬೆಂಗಳೂರಿಗೆ ಬಂದಿದ್ದಾಗ ಸ್ವಾಮಿಯವರು ಕಾದು ನಿಂತು ಫೋಟೊ ತೆಗೆದಿದ್ದರು. ಪುತ್ತೂರಿನಲ್ಲಿದ್ದಾಗಲೂ ಶಿವರಾಮ ಕಾರಂತರ ಮನೆಗೆ ಹೋಗಿ ಫೋಟೋ ತೆಗೆದಿರಿಸಿಕೊಂಡಿದ್ದರು.

ಸ್ವಾಮಿಯವರು 'ಪ್ರಪಂಚ' ಪತ್ರಿಕೆಯನ್ನು ತೊರೆದು ಮದ್ರಾಸಿನಲ್ಲಿ 'ಸೋವಿಯತ್ ದೇಶ'ವನ್ನು ಸೇರಿಕೊಂಡರು. ನಮ್ಮೊಳಗೆ ಪತ್ರ ಸಂವಾದ ನಡೆಯುತಿತ್ತು. ಮುಂದೆ ಸೋವಿಯತ್ ದೇಶದಿಂದ ನಿವೃತ್ತರಾದ ಮೇಲೆ ಬೆಂಗಳೂರಿಗೆ ಬಂದು ನವಕರ್ನಾಟಕ ಸಂಸ್ಥೆಯಲ್ಲಿ ಕಾರ್ಯಪ್ರವೃತ್ತರಾದರು. ಅವರು ಸುಳ್ಯಕ್ಕೆ ಬರುತ್ತಿದ್ದರು. ನಮ್ಮ ಮನೆಗೆ ಬಂದಾಗಲೆಲ್ಲ ಮಕ್ಕಳ ಫೋಟೋ ತೆಗೆದು ಕೊಡುತ್ತಿದ್ದರು. ಮಕ್ಕಳ ಮದುವೆಗೆ ಬಂದು ಫೋಟೋ ತೆಗೆದುಕೊಟ್ಟಿದ್ದಾರೆ. ಆ ಫೋಟೋಗಳು ನನ್ನಲ್ಲಿವೆ; ಅವರ ನೆನಪು ಕೊಡುತ್ತಿವೆ. ನಮ್ಮೂರ ಪಯಸ್ವಿನಿ ನದಿಯ ಯೋಗಕ್ಷೇಮ ವಿಚಾರಿಸುವುದನ್ನು ಅವರು ಮರೆಯುತ್ತಿರಲಿಲ್ಲ.

ಸ್ವಾಮಿಯವರು ಇಂಚರ ಪ್ರಕಾಶನದ ಮೂಲಕ ತಮ್ಮ ಪುಸ್ತಕಗಳನ್ನು ಮಾತ್ರವಲ್ಲದೆ ಸಾಹಿತಿ ಗೆಳೆಯರ ಪುಸ್ತಕಗಳನ್ನೂ ಪ್ರಕಟಿಸಿದ್ದಾರೆ. ನೀಲಗಿರಿಯ ಬುಡಕಟ್ಟು ಜನರ ಭಾಷೆ, ಆಚರಣೆಗಳ ಕುರಿತು ಅಧ್ಯಯನ ನಡೆಸಿ, ಪುಸ್ತಕ ಬರೆದು ತನ್ನ ಇಂಚರ ಪ್ರಕಾಶನದ ಮೂಲಕ ಪ್ರಕಟಿಸುವ ಸಾಹಸ ಮಾಡಿದರು.

ಪರಂಜ್ಯೋತಿಯವರು ಕತೆಗಾರ, ಕಾದಂಬರಿಕಾರ. ಅಸಹಾಯಕ, ಅಲಕ್ಷಿತ ಜನರಿಗಾಗಿ ಮಿಡಿಯುವ ಅವರ ಮನಸು ಅವರ ಕತೆ, ಕಾದಂಬರಿಗಳಲ್ಲಿ ದುಡಿದಿರುವುದನ್ನು ಕಾಣುತ್ತೇವೆ. ಅವರ ಇತ್ತೀಚಿನ ಕಾದಂಬರಿ 'ಬೆಟ್ಟದ ಗಾಳಿ'ಯನ್ನು ನಾನು ಆಗಾಗ ನೆನಪು ಮಾಡಿಕೊಳ್ಳುತ್ತೇನೆ. ಅದು ಕಲ್ಲೂರಿನವರ ಕತೆ. ಅವರು ಅಕ್ಷರಲೋಕದಿಂದ ದೂರ ಉಳಿದ ಜನರು. ಇಂಪಾದ ವದಂತಿಗಳಿಗೆ ಮಾರುಹೋದವರು. ಜನ, ದನ, ಹೋತ, ಪ್ರೇತಗಳಂತೆ ಕಲ್ಲೂರಿನ ಬಕಾಸುರನ ಬೆಟ್ಟವೂ ಇದರಲ್ಲಿ ಒಂದು ಪಾತ್ರ. ನೆರೆ, ಬರ, ಜಾತಿ ಜಗಳ, ಪ್ರೇತಗಳ ಆರ್ಭಟ, ದಲಿತ ಹುಡುಗಿಯನ್ನು ಮೇಲ್ಜಾತಿಯ ಹುಡುಗ ಹಾರಿಸಿಕೊಂಡು ಹೋದದ್ದು, ಗೋಮೂತ್ರದ ಕಪಿಲೆ ಪರಾರಿಯಾದದ್ದು, ಹೊಲದಲ್ಲಿ ಕೆಲಸ ಮಾಡಿ ಬಂದ ದಲಿತನಿಗೆ ರಾಗಿಮುದ್ದೆಯನ್ನು ನೆಲದ ಮೇಲೆ ಎಸೆದದ್ದು, ಚೆನ್ನಮ್ಮ ಸ್ನೇಹಿತನಿಂದ ಬಸುರಾದದ್ದು, ಕಲ್ಲೂರು ನಿಧಾನವಾಗಿ ಶಿಕ್ಷಿತರ ಗ್ರಾಮವಾದದ್ದು, ಬಹಿಷ್ಕೃತ ಕ್ಷೌರಿಕನ ಮಗ ತಜ್ಞ ವೈದ್ಯನಾದದ್ದು ಇದಕ್ಕೆಲ್ಲ ಸಾಕ್ಷಿಯಾಗಿ ಮೌನವನ್ನು ಕಾಪಾಡಿಕೊಂಡಿರುವಂತೆ ನಿಂತಿರುವ ಬಕಾಸುರನ ಬೆಟ್ಟ ಗಾಳಿಯ ಮೂಲಕ ಪರಿವರ್ತನೆಯ ಸಂದೇಶವನ್ನು ಬಿತ್ತರಿಸುತ್ತದೆ. ವೃತ್ತಿಯಿಂದ ಜಾತಿ, ಜಾತಿಯಿಂದ ವ್ಯಕ್ತಿಯನ್ನು ಗುರುತಿಸುವ ಪದ್ಧತಿಗೆ ನಿಷ್ಠರಾಗಿರುವ ಕಲ್ಲೂರಿನವರು ದಲಿತರಿಗೆ ಕ್ಷೌರ ಮಾಡಿದ್ದಕ್ಕಾಗಿ ಕ್ಷೌರಿಕ ಸಿಂಗಯ್ಯನಿಗೆ ಬಹಿಷ್ಕಾರ ಹಾಕುತ್ತಾರೆ.







*ಕೆ. ಪಿ. ಸ್ವಾಮಿಯವರ ಛಾಯಾಚಿತ್ರಗಳು*

ಮಹಾತ್ಮ ಗಾಂಧಿಯಿಂದ ಪ್ರಭಾವಿತನಾದ ಸಿಂಗಯ್ಯ ಕ್ಷೌರಿಕ ವೃತ್ತಿಯನ್ನೆ ತ್ಯಜಿಸುತ್ತಾನೆ. ಅವನ ಮಗ ಓದಿ ತಜ್ಞವೈದ್ಯನಾಗುತ್ತಾನೆ. ಜಾತಿವಾದ ಸೋಲುತ್ತದೆ. ಅರ್ಹತೆ ಗೆಲ್ಲುತ್ತದೆ.

ಇದು ಬಕಾಸುರ ಬೆಟ್ಟದ ಗಾಳಿ ಬಿತ್ತರಿಸುವ ಸಂದೇಶ.

ಇದು ಪರಂಜ್ಯೋತಿಯವರ ತುಡಿತವೂ ಹೌದು. ಅವರು ನುಡಿದಂತೆ ನಡೆದರು. ನಡೆದಂತೆ ನುಡಿದರು. ಪ್ರಶಸ್ತಿ, ಸಮ್ಮಾನಗಳಿಗಾಗಿ ಬೇಟೆಯಲ್ಲಿ ತೊಡಗಲಿಲ್ಲ. ಸಿಗಲಿಲ್ಲವೆಂದು ಕೊರಗೂ ಇಲ್ಲ. ಅವರೀಗ ನೆನಪಾಗಿ ಉಳಿದಿದ್ದಾರೆ.

**ಕುತ್ಯಾಳ ನಾಗಪ್ಪ ಗೌಡ (ಕಿರಣ)**
ಕಿರಣ ಕುಟೀರ , ಸುಳ್ಯ ೫೭೪೨೩೯ email : kngkirana@gmail.com

✶ ✶ ✶

## ಬಹುಮುಖ ಪ್ರತಿಭೆಯ ಕೆ. ಪಿ. ಸ್ವಾಮಿ ಒಂದು ನೆನಪು

**ಕ**ತೆಗಾರ, ಕಾದಂಬರಿಕಾರ, ಸಂಪಾದಕ, ಪ್ರಕಾಶಕ, ಛಾಯಾಗ್ರಾಹಕ ಎಲ್ಲವೂ ಆಗಿದ್ದ ಕೆ. ಪಿ. ಸ್ವಾಮಿ ಇನ್ನಿಲ್ಲ. ನವಕರ್ನಾಟಕ ಸಂಸ್ಥೆಯ ಅವಿಭಾಜ್ಯ ಅಂಗವೇ ಆಗಿದ್ದ ಸ್ವಾಮಿಯವರು ಸಂಸ್ಥೆಯ ಎಲ್ಲ ಪ್ರಮುಖ ಯೋಜನೆಗಳಲ್ಲೂ ಭಾಗಿಯಾಗಿದ್ದರು. ಒಂದು ರೀತಿಯಲ್ಲಿ ಅಧಿಕೃತ ಛಾಯಾಗ್ರಾಹಕರೇ ಆಗಿದ್ದರು. ಪ್ರಾರಂಭಿಕ ವರ್ಷಗಳಲ್ಲಿ ಬಹುತೇಕ 'ಹೊಸತು' ಮಾಸಪತ್ರಿಕೆಯ ಸಂದರ್ಶನಗಳಲ್ಲಿ ಪ್ರಕಟವಾದ ಎಲ್ಲ ಛಾಯಾಚಿತ್ರಗಳೂ ಅವರದ್ದೇ. ಅದಲ್ಲದೆ ಅವರು ಜನಸಾಮಾನ್ಯರ ಸಂದರ್ಶನಗಳ ಬರಹವನ್ನು ನೀಡುತ್ತಿದ್ದರು ಛಾಯಾಚಿತ್ರ ಸಮೇತ. 'ಹೊಸತು' ಪತ್ರಿಕೆಯ ಸಂಪಾದಕ ಮಂಡಳಿಯ ಸದಸ್ಯರಾಗಿದ್ದರು. ಅವರ ನಿಧನದಿಂದ ಸಂಸ್ಥೆ ಬಡವಾಗಿದೆ. ಅವರಿಗೆ ನವಕರ್ನಾಟಕ ಪ್ರಕಾಶನ ಹಾಗೂ 'ಹೊಸತು' ಪತ್ರಿಕೆ ನಮನ ಸಲ್ಲಿಸುತ್ತದೆ.

೧೯೯೧ರಲ್ಲಿ ನವಕರ್ನಾಟಕ ಸಂಸ್ಥೆ ಸೇರಿದ ಕೆ. ಪಿ. ಸ್ವಾಮಿ ವ್ಯವಸ್ಥಾಪಕ ನಿರ್ದೇಶಕ ಆರ್. ಎಸ್. ರಾಜಾರಾಮ್ ಅವರಿಗೆ ಪುಸ್ತಕ ಪ್ರಕಟಣೆಯ ವಿಷಯದಲ್ಲಿ ಬಲಭುಜದಂತೆ ಇದ್ದರು. ರಾಜಾರಾಮ್ ಅವರಿಗೆ ಸ್ವಾಮಿಯವರು ಹಳೇ ಪರಿಚಯ. ಪ್ರಾಯಶಃ ಪುತ್ತೂರಿನಲ್ಲಿ 'ಇಂದ್ರಧನುಷ್' ಪತ್ರಿಕೆಯಲ್ಲಿ ಉಪಸಂಪಾದಕರಾಗಿದ್ದಾಗಿನಿಂದ ಇರಬಹುದು. ಪರಂಜ್ಯೋತಿ, ನೀಲಾಂಬರಿ ಹೆಸರಿನಲ್ಲಿ ನವಕರ್ನಾಟಕಕ್ಕಾಗಿ ಹಲವು ಪುಸ್ತಕಗಳು ಮುಖ್ಯವಾಗಿ ಮಕ್ಕಳ ಪುಸ್ತಕಗಳನ್ನು ನೀಡಿದ್ದಾರೆ. ಅವರ 'ಮಾನವ ನಿರ್ಮಿತ ಅದ್ಭುತಗಳು' ೧೧ ಮುದ್ರಣಗಳನ್ನು ಕಂಡಿದೆ. ನವಕರ್ನಾಟಕದಿಂದ ಪ್ರಕಟಣೆ ಬಯಸಿ ಬರುತ್ತಿದ್ದ ಲೇಖಕರು ಮೊದಲು ಸಂಪರ್ಕಿಸುತ್ತಿದ್ದುದು ಸಾಮಾನ್ಯವಾಗಿ ಸ್ವಾಮಿಯವರನ್ನೇ. ಪ್ರಕಟಿತವಾದ ಬಹುತೇಕ ಹಸ್ತಪ್ರತಿಗಳು ಅವರಿಂದ ಪರಿಷ್ಕೃತವಾದುವೇ ಎನ್ನಬಹುದು. ಸ್ವಾಮಿಯವರು ತೆಗೆದ ಛಾಯಾಚಿತ್ರಗಳು ನವಕರ್ನಾಟಕದ ಪ್ರಕಟಣೆಗಳಲ್ಲಿ ಈಗಲೂ ಕಾಣಿಸಿಕೊಳ್ಳುತ್ತಿವೆ. ಪ್ರವಾಸಪ್ರಿಯರಾಗಿದ್ದ ಅವರು ಪ್ರಕಟಿಸಿದ ಪ್ರವಾಸ ಕಥನಗಳು ಹಲವು. ನೀಲಗಿರಿಗೂ ಅವರಿಗೂ ಅವಿನಾಭಾವ ಸಂಬಂಧ. ಅಲ್ಲಿನ ಬುಡಕಟ್ಟುಗಳ ಕುರಿತು ಅವರು ರಚಿಸಿರುವ ಸಚಿತ್ರ ಕೃತಿ ಒಂದು ಸಂಶೋಧನಾ ಅಧ್ಯಯನವೇ ಆಗಿದೆ. 'ಇಂಚರ' ಪ್ರಕಾಶನ ಅವರೇ ಸ್ಥಾಪಿಸಿದ ಪ್ರಕಾಶನ ಸಂಸ್ಥೆ. ಅವರ ಅನೇಕ ಕೃತಿಗಳು ಪ್ರಕಟಗೊಂಡಿವೆ. ಆದರೂ ಸ್ವಂತ ಪ್ರಕಟಣೆಯಿಂದ ಕೈಸುಟ್ಟುಕೊಂಡಿದ್ದೇ ಹೆಚ್ಚು.

ನನಗೆ ಕೆ. ಪಿ. ಸ್ವಾಮಿಯವರ ಪರಿಚಯವಾಗಿದ್ದು 'ಜನಶಕ್ತಿ' ಪತ್ರಿಕೆಯ ಸಂಪಾದಕನಾಗಿದ್ದಾಗ ೧೯೬೦ರ ಸುಮಾರಿನಲ್ಲಿ ಸಹಾಯಕ ಸಂಪಾದಕರಾಗಿದ್ದ ವೆಂಕಟರಾಜ ಪಾನಸೆಯವರ ಮೂಲಕ. ಬೆಂಗಳೂರಿನಲ್ಲಿ ವಾಸ್ತವ್ಯಹೂಡಿದ್ದ ಅವರು 'ಪ್ರಪಂಚ' ವಾರಪತ್ರಿಕೆಯಲ್ಲಿ ಉಪಸಂಪಾದಕರಾಗಿ ಸೇರಿಕೊಂಡರು. ಆನಂತರ ಅವರು ಮದರಾಸಿನಲ್ಲಿದ್ದ (ಈಗ ಚೆನ್ನೈ) ಸೋವಿಯತ್ ವಾರ್ತಾ ವಿಭಾಗದಲ್ಲಿ ಪಾನಸೆಯವರ ಜೊತೆ ಸೇರಿದರು. ೧೯೬೬ರಲ್ಲಿ ನಾನು ಚೆನ್ನೈಗೆ ಹೋದ ಮೇಲೆ ಅವರು 'ಸೋವಿಯತ್ ಸಮೀಕ್ಷೆ' ಮಾಸಪತ್ರಿಕೆಯ ಉಪಸಂಪಾದಕರಾದರು. ಆಗಿನಿಂದ ನಮ್ಮ ಒಡನಾಟ ಪ್ರಾರಂಭವಾಯಿತು. ನಮ್ಮ ಮನೆಗೆ ಸಮೀಪದಲ್ಲೇ ವಾಸಿಸುತ್ತಿದ್ದ ಅವರು ವಿವಾಹದ ನಂತರ ಕಚೇರಿಗೆ ಸಮೀಪದಲ್ಲೇ ಇದ್ದ ತೇನಾಮ್ ಪೇಟೆಯಲ್ಲಿ ವಾಸ್ತವ್ಯ ಹೂಡಿದರು. ಸಂಕೋಚ ಪ್ರವೃತ್ತಿಯ ಸ್ವಾಮಿಯವರು ಮಾತುಗಾರರಲ್ಲ. ಇಬ್ಬರು ಹೆಣ್ಣುಮಕ್ಕಳು, ಮಗ ಮತ್ತು ಪತ್ನಿಯನ್ನು ಅಗಲಿರುವ ಅವರು ಎಲ್ಲ ಕನ್ನಡಪರ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಸೋವಿಯತ್ ವಾರ್ತಾ ಇಲಾಖೆಯಲ್ಲಿದ್ದಾಗಲೇ ಅವರು ಪ್ರಜಾವಾಣಿ, ತರಂಗ, ಸುಧಾ ಮೊದಲಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದರು. ಆಗಲೇ ಅವರು ಕಾದಂಬರಿಯೊಂದನ್ನು ರಚಿಸಿದ್ದರು. ಅದನ್ನು ನನಗೆ ಓದಲು ನೀಡಿದರು. ಆಗೆಲ್ಲ ಪತ್ರಿಕೆಗಳಲ್ಲಿ ಕಾದಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುತ್ತಿದ್ದರು. ನಾನು ಓದಿದ್ದ ಅವರ ಕಾದಂಬರಿಯನ್ನು ಧಾರಾವಾಹಿಗೆ ನೀಡಲು ಸೂಚಿಸಿದೆ. ಅದು ಪ್ರಕಟಣೆಯಾದ ಮೇಲೆ ಪುಸ್ತಕವಾಗಿಯೂ ಪ್ರಕಟಗೊಂಡಿತು. ಕಚೇರಿಯಲ್ಲಿದ್ದಾಗಲೇ ಅವರು ಛಾಯಾಗ್ರಹಣದಲ್ಲಿ ಆಸಕ್ತಿ ಬೆಳೆಸಿಕೊಂಡರು. ಅದಕ್ಕೆ ಬೇಕಾದ ಕ್ಯಾಮೆರಾ ಹಾಗೂ ಅಗತ್ಯವಾದ ಪರಿಕರಗಳನ್ನು ಸಂಗ್ರಹಿಸಿದರು. ಸ್ವಾಮಿಯವರ ಈ ಛಾಯಾಗ್ರಹಣ ಹವ್ಯಾಸಕ್ಕೆ ಮಾಸ್ಕೋದಲ್ಲಿದ್ದ ಗೋಪಾಲಕೃಷ್ಣ ರಾವ್ ನೆರವಾಗಿದ್ದರು. ಬೆಂಗಳೂರಿಗೆ ಬಂದ ಮೇಲೆ ಅದನ್ನು ಬೆಳೆಸಿಕೊಂಡರು. ಸ್ವಾಮಿಯವರ ಜೊತೆ ನಾನು ಐದು ದಶಕಗಳಿಗೂ ಮೇಲೆ ಕೆಲಸ ಮಾಡಿದ್ದೇನೆ. ಅದರಲ್ಲಿ ನವಕರ್ನಾಟಕ ಸಂಸ್ಥೆಯಲ್ಲಿ ಮಾಡಿದ ಕೆಲಸಕಾರ್ಯಗಳು ಸದಾ ನನ್ನ ನೆನಪಿನಲ್ಲಿ ಉಳಿಯುತ್ತದೆ.

**ಸಿ. ಆರ್. ಕೃಷ್ಣರಾವ್**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩
೩ನೇ ಅಡ್ಡರಸ್ತೆ, ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫

✶ ✶ ✶

## ಇನ್ನಿಲ್ಲದ ಇಂಚರ

**ಇ**ದ್ದಲ್ಲೇ ಬಿದ್ದುಕೊಂಡಿರುವ ಒಂದು ರಸ್ತೆ ಮತ್ತು ಒಬ್ಬ ವ್ಯಕ್ತಿಯ ಮಧ್ಯೆ ಭಾವನಾತ್ಮಕ ಸಂಬಂಧ ಇರಲು ಸಾಧ್ಯವೇ? ಮೈಸೂರು – ಊಟಿ ರಸ್ತೆಯಲ್ಲಿ ತಿರುಗಾಡುವಾಗ ಮನಸ್ಸಿನಲ್ಲಿ ಉಕ್ಕುವ ಸಂಭ್ರಮದ ಭಾವನೆ ಅಂಥ ಭಾವನಾತ್ಮಕ ಸಂಬಂಧ ಇರಲು ಸಾಧ್ಯ ಎಂಬುದರ ಸಂಕೇತ ಎನಿಸುತ್ತದೆ ನನಗೆ. ಈ ವಾಕ್ಯಗಳು ಇತ್ತೀಚೆಗೆ (ಜುಲೈ ೨೭, ೨೦೧೯) ನಿಧನರಾದ ಗೆಳೆಯ ಪರಂಜ್ಯೋತಿ (ಕೆ. ಪಿ. ಸ್ವಾಮಿ) ಅವರ ಸಚಿತ್ರ ಲೇಖನಗಳ ಸಂಗ್ರಹ 'ಮನೆಯಂಗಳದ ಮಿತ್ರರು'ವಿನ 'ರಾಷ್ಟ್ರೀಯ ಹೆದ್ದಾರಿಯಲ್ಲಿ ಸಫಾರಿ!' ಲೇಖನದ ಆರಂಭದಲ್ಲಿ ವ್ಯಕ್ತವಾಗಿರುವ ಅಂಶ. ಪರಂಜ್ಯೋತಿಯವರ ವ್ಯಕ್ತಿತ್ವಕ್ಕೆ ತಕ್ಕ ಸಾಕ್ಷಿಯಂತಿದೆ ಈ ವಾಕ್ಯಗಳು. ಮೈಸೂರು – ಊಟಿ ರಸ್ತೆಯಲ್ಲಿ ಹಳತೆಲ್ಲವೂ ಅವರಿಗೆ ನೆನಪಾಗಿದೆ. ೧೯೪೦ರಿಂದ (ಅಥವಾ ಅದಕ್ಕೂ ಮುಂಚಿನಿಂದ) ಈ ರಸ್ತೆಯಲ್ಲಿ ಓಡಾಡುತ್ತಲೇ ಇದ್ದ ಪರಂಜ್ಯೋತಿಯವರಿಗೆ ಈ ರಸ್ತೆಯಂತೆ ಊಟಿಯೂ ಪರಮಪ್ರಿಯ. ಅವರು

  

*ಕೆ. ಪಿ. ಸ್ವಾಮಿಯವರ ಛಾಯಾಚಿತ್ರಗಳು*

ಹುಟ್ಟಿದ್ದು ಮತ್ತು ಬಾಲ್ಯ ಕಳೆದದ್ದು ಊಟಿಯಲ್ಲಿ. ಆದುದರಿಂದಲೇ ಊಟಿಗೂ ಅವರಿಗೂ ಕರುಳ ಸಂಬಂಧ. ಈ ಸಂಬಂಧವೇ ಅವರ 'ನೀಲಗಿರಿ : ಸಾಮಾಜಿಕ ಸಾಂಸ್ಕೃತಿಕ ಕಣ್ನೋಟ' ಎಂಬ ಅತ್ಯುತ್ತಮ ಕೃತಿ ಪ್ರಕಟವಾಗಲು ಕಾರಣವಾಗಿದೆ.

ಕಳೆದ ಅರುವತ್ತರ ದಶಕದಿಂದ ಈಚೆಗೆ ನನ್ನ ಅಂತರಂಗದ ಗೆಳೆಯರಾಗಿದ್ದ ಪರಂಜ್ಯೋತಿಯವರು ತಮ್ಮ 'ಇಂಚರ ಪ್ರಕಾಶನ'ದ ಮೂಲಕ ಇಂಚರದಂತಹ ಕೃತಿಗಳನ್ನು ಹಂಚಿದವರು. 'ನವಕರ್ನಾಟಕ ಪ್ರಕಾಶನ'ವೂ ಅವರ ಅನೇಕ ಕೃತಿಗಳನ್ನು ಪ್ರಕಟಿಸಿದೆ. ಕತೆ, ಕಾದಂಬರಿ, ಪ್ರವಾಸ ಕಥನ, ವ್ಯಕ್ತಿಚಿತ್ರ, ಮಕ್ಕಳ ಕತೆ – ಹೀಗೆ ಅನೇಕ ಬಗೆಯ ಕೃತಿಗಳನ್ನು ಪ್ರಕಟಿಸಿರುವ ಪರಂಜ್ಯೋತಿಯವರು, ತಮ್ಮ ಕೃತಿಗಳಿಂದಲೇ ನಮ್ಮ ನೆನಪಲ್ಲಿ ಉಳಿದವರು. 'ನವಕರ್ನಾಟಕ ಪ್ರಕಾಶನ' ಇತ್ತೀಚೆಗೆ ಪ್ರಕಟಿಸಿದ ಪರಂಜ್ಯೋತಿಯವರ 'ಬಹುಮುಖ ಪ್ರತಿಭೆಯ ಕುಮಾರ ವೆಂಕಣ್ಣ' ಎಂಬ ಕೃತಿ ವ್ಯಕ್ತಿಚಿತ್ರ ಹೇಗಿರಬೇಕು ಎಂಬುದಕ್ಕೆ ಒಂದು ಶ್ರೇಷ್ಠ ಮಾದರಿ. ಕುಮಾರ ವೆಂಕಣ್ಣನವರಂತೆ ಪಟ್ಟುಬಿಡದ ಸಾಹಸಿಯಾಗಿದ್ದ ಪರಂಜ್ಯೋತಿ, ಆ ಕೃತಿಗೆ ನನ್ನಿಂದಲೇ ಮುನ್ನುಡಿಯನ್ನು ಬರೆಯಿಸಿದವರು. ಅವರು ನಿಜಕ್ಕೂ 'ಕವಿಗೆ ಕವಿ ಮಣಿವಂ' ಜಾತಿಯವರಾಗಿದ್ದರು. ಅವರ ಸಾಹಿತ್ಯ ಪರಿಚಾರಿಕೆ – ನವಕರ್ನಾಟಕ ಪ್ರಕಾಶನದ 'ಪುಸ್ತಕಗಳ ಮೂಲಕ ಮನುಕುಲದ ಸೇವೆ' ಎಂಬ ಧ್ಯೇಯವಾಕ್ಯಕ್ಕೆ ಅನುಗುಣವಾಗಿದೆ. ಅವರು ಸ್ವತಃ ಕವಿಯಲ್ಲದಿದ್ದರೂ ಕವಿ ಹೃದಯವುಳ್ಳವರಾಗಿದ್ದರು. ಆದುದರಿಂದಲೇ ಅವರ ಬರಹಗಳ ಶೈಲಿಯೂ ಕಾವ್ಯಮಯವಾಗಿದೆ.

ಪರಂಜ್ಯೋತಿಯವರ ಬೆಟ್ಟ ಸಾಲಿನ ಮೋಡಿ (ಪ್ರಬಂಧ ಸಂಕಲನ), ಮಂಜಿನೆಡೆಯ ಚಿತ್ರಗಳು (ಅನುಭವ ಕಥನ), ಪ್ರವಾಸದಲ್ಲಿ ಕಂಡದ್ದು, ಕಾಣದ್ದು (ಪ್ರವಾಸ ಲೇಖನಗಳು), ಮನೆಯಂಗಳದ ಮಿತ್ರರು (ಪ್ರಬಂಧ ಸಂಕಲನ), ಬೆಟ್ಟದ ಗಾಳಿ (ಕಾದಂಬರಿ) ಮೊದಲಾದ ಕೃತಿಗಳು ನಮ್ಮನ್ನು ಚಿಂತನೆಗೆ ಹಚ್ಚುತ್ತವೆ.

ಪರಂಜ್ಯೋತಿಯವರು ಅನುಪಮ ಅಮಲ ಅಂತಃಕರಣವುಳ್ಳ ಗೆಳೆಯರಾಗಿದ್ದರು. ಅವರ ಗೆಳೆತನವನ್ನು ನಾನು ಯಾವತ್ತೂ ಮರೆಯುವಂತಿಲ್ಲ. ಅವರು ನಮ್ಮ ಮನೆಗೆ ಬಂದುಹೋದವರು. ಸುಳ್ಯದಲ್ಲಿ ಅವರಿಗೆ ಗೆಳೆಯರಾಗಿದ್ದವರು ಕಿರಣ, ಚೊಕ್ಕಾಡಿ ಮತ್ತು ನಾನು. ನಾವೆಲ್ಲ ಅವರೊಂದಿಗೆ ಬೆಟ್ಟಗುಡ್ಡಗಳಲ್ಲಿ, ಪಯಸ್ವಿನಿ, ಕುಮಾರಧಾರಾ ನದಿ ತೀರಗಳಲ್ಲಿ ಅಲೆದಾಡಿದ್ದು ಮತ್ತು ಅವರು ಪ್ರಕೃತಿ ದೃಶ್ಯಗಳನ್ನು, ನಮ್ಮ ಮನೆಮಂದಿಯ ಭಾವಚಿತ್ರಗಳನ್ನು ತಮ್ಮ ಕ್ಯಾಮರಾ ಕಣ್ಣಿನಿಂದ ಕ್ಲಿಕ್ಕಿಸಿದ್ದು ಎಲ್ಲ ನಿನ್ನೆ ಮೊನ್ನೆ ನಡೆದಂತೆ ಹಸಿರಾಗಿ ಉಳಿದುಕೊಂಡಿದೆ.

ಪರಂಜ್ಯೋತಿಯವರು ಒಮ್ಮೆ ತಮ್ಮ ಪತ್ನಿ ಶಾಂತಾ, ಕವಿ ಹೃದಯಿ, ಭೂವಿಜ್ಞಾನಿ ಮತ್ತು ಲೇಖಕ ಟಿ. ಆರ್. ಅನಂತರಾಮು ಮತ್ತು ಅವರ ಪತ್ನಿ ಅನ್ನಪೂರ್ಣ – ಹೀಗೆ ಒಟ್ಟಾಗಿ ಕಿರಣ, ಚೊಕ್ಕಾಡಿ ಮತ್ತು ನಮ್ಮ ಮನೆಗೆ ಬಂದು ಹೋದ ಸಂದರ್ಭವನ್ನು ನಾನು ಯಾವತ್ತೂ ಮರೆಯುವಂತಿಲ್ಲ. ಪರಂಜ್ಯೋತಿಯವರ 'ಪ್ರವಾಸದಲ್ಲಿ ಕಂಡದ್ದು ಕಾಣದ್ದು' ಕೃತಿಯಲ್ಲಿ ಈ ರಸಾನುಭವದ ವರ್ಣನೆ ಇದೆ.

ಪರಂಜ್ಯೋತಿಯವರು ನನಗೆ ಫೋನಿಸಿದಾಗಲೆಲ್ಲ – ಚೊಕ್ಕಾಡಿ ಸಿಕ್ಕಿದ್ದಾರಾ? ಕಿರಣರನ್ನು ಕಂಡಿದ್ದೀರ? ಎಂದು ಕೇಳುತ್ತಿದ್ದರಲ್ಲದೆ, ನನ್ನ ಪತ್ನಿ, ಮಕ್ಕಳು, ಸೊಸೆ, ಮೊಮ್ಮಗ – ಹೀಗೆ ಪ್ರತಿಯೊಬ್ಬರ ಯೋಗಕ್ಷೇಮ ವಿಚಾರಿಸುತ್ತಿದ್ದರು. ಫೋನಿನಲ್ಲಿ ಮಾತು ಕೊನೆಗೊಳಿಸುವ ಪ್ರತಿ ಸಂದರ್ಭದಲ್ಲೂ ನಿಮ್ಮ ಶ್ರೀಮತಿಗೆ ನನ್ನ ಮತ್ತು ನನ್ನ ಶ್ರೀಮತಿಯ ನಮಸ್ಕಾರ ತಿಳಿಸಿ ಎಂದು ತುಂಬ ಪ್ರೀತಿಯಿಂದ ಹೇಳುತ್ತಿದ್ದರು. ಕೆಲವೊಮ್ಮೆ ನನ್ನ ಪತ್ನಿ ಸತ್ಯವತಿ ರಿಸೀವರನ್ನು ಎತ್ತಿಕೊಂಡು ಕಿವಿಗಿಟ್ಟಾಗಲೆಲ್ಲ 'ಉಬರಡ್ಕ ಇದ್ದಾರ?' ಎಂಬ ನೇರ ಪ್ರಶ್ನೆ ಇರುತ್ತಿತ್ತು. 'ಗೊತ್ತಾಯಿತು ಪರಂಜ್ಯೋತಿಯವರೇ, ಉಬರಡ್ಕ ಇದ್ದಾರೆ. ನೀವು, ನಿಮ್ಮ ಶ್ರೀಮತಿ ಹೇಗಿದ್ದೀರ?' ಹೀಗೆ ನನ್ನ ಪತ್ನಿಯ ಉತ್ತರ – ಪ್ರಶ್ನೆ ಎರಡೂ ಇರುತ್ತಿತ್ತು. ಆಗ ಪರಂಜ್ಯೋತಿಯವರು, 'ಅರೆ! ನನ್ನ ಧ್ವನಿ ಗೊತ್ತಾಗಿ ಬಿಟ್ಟಿತೆ!' ಎಂದು ಖುಷಿಪಡುತ್ತಿದ್ದರು.

ಪರಂಜ್ಯೋತಿಯವರು ವಾಹನ (ಆಟೋರಿಕ್ಷಾ) ಅಪಘಾತವೊಂದರಲ್ಲಿ ಮೂಳೆ ಮುರಿತಕ್ಕೆ ಒಳಗಾಗಿ ಆಸ್ಪತ್ರೆ ಸೇರಿದವರು, ಬಹುಪಾಲು ಗುಣಮುಖರಾಗಿ ತಮ್ಮ ಮನೆ ಸೇರಿದ ಸಂದರ್ಭದಲ್ಲಿ – ಮಾರ್ಚ್ ೭, ೨೦೧೮ರಂದು ಬೆಂಗಳೂರಿನ ಈಜೀಪುರದಲ್ಲಿರುವ ಅವರ ಮನೆಗೆ ನಾನು ಭೇಟಿ ನೀಡಿದ್ದೆ. ಜತೆಯಲ್ಲಿ ತನ್ನ ಕಾರಲ್ಲಿ ನನ್ನನ್ನು ಕರೆತಂದಿದ್ದ ನನ್ನ ಅಳಿಯ (ಅಕ್ಕನ ಮಗ) ಶ್ರೀಪತಿಯಿದ್ದ.

ಪರಂಜ್ಯೋತಿಯವರು ನನ್ನನ್ನು ಕಂಡದ್ದೇ, ವಾಕರ್‌ನ ಆಧಾರದಿಂದ ಎದ್ದುನಿಂತು ಸಂತೋಷದಿಂದ ನಮ್ಮಿಬ್ಬರನ್ನು ಬರಮಾಡಿಕೊಂಡರು. ಅವರ ಪತ್ನಿ ಶಾಂತಾ ನಗುಮುಖದಿಂದಲೇ ಸ್ವಾಗತಿಸಿದರು. "ಇವತ್ತು ಮಧ್ಯಾಹ್ನ ನಿಮ್ಮ ಊಟ ನಮ್ಮಲ್ಲೇ" ಎಂದರು ಪರಂಜ್ಯೋತಿ. ಅವರ ಪ್ರೀತಿಯ ಆತಿಥ್ಯವನ್ನು ನಿರಾಕರಿಸುವ ಸ್ಥಿತಿಯಲ್ಲಿ ನಾನಿರಲಿಲ್ಲ. ಮತ್ತೆ ಯಥಾಪ್ರಕಾರ ಪರಂಜ್ಯೋತಿಯವರು ಸುಳ್ಯದ ಗೆಳೆಯರನ್ನು ನಮ್ಮ ಮನೆಯವರನ್ನು ವಿಚಾರಿಸಿಕೊಂಡರು. ಕಾಫಿ ತಿಂಡಿ ಮುಗಿಸಿದ ಬಳಿಕ, ಪ್ರಕಟಗೊಳ್ಳಬೇಕಾಗಿರುವ ತಮ್ಮ ಕೃತಿಗಳ ವಿಶ್ಲೇಷಣೆಗೆ ತೊಡಗಿದರು. "ನನ್ನ 'ಕೋಡೆ ಮಳೆ' ಕಾದಂಬರಿ ಈಗಾಗಲೇ ಪ್ರಕಟವಾಗಬೇಕಾಗಿತ್ತು ಮಾರಾಯರೇ, 'ಸೂರಿ'ಯವರ ಚಿತ್ರಕ್ಕಾಗಿ ಕಾಯುತ್ತಿದ್ದೇನೆ" ಎಂದರು. ಮತ್ತೆ ಯಾವುದೋ ಲಹರಿಯಲ್ಲಿ ಇದ್ದವರಂತೆ ನನ್ನ ಮುಖವನ್ನೇ ನೋಡುತ್ತ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್‌ನ ವ್ಯವಸ್ಥಾಪಕ ನಿರ್ದೇಶಕರಾಗಿದ್ದ ಆರ್. ಎಸ್. ರಾಜಾರಾಮ್ ಈಗಿನ ನಿರ್ದೇಶಕರಾಗಿರುವ ಎ. ಆರ್. ಉಡುಪ, 'ಹೊಸತು' ಗೌರವ ಸಂಪಾದಕ ಜಿ. ರಾಮಕೃಷ್ಣ, ಸಂಪಾದಕ ಸಿದ್ದನಗೌಡ ಪಾಟೀಲ, ಡಾ॥ ವಿಜಯಾ, ಟಿ. ಆರ್. ಅನಂತರಾಮು, ಪದ್ಮಾ ಶ್ರೀರಾಮ, ಸಿ. ಜಿ. ಮಂಜುಳ, ನಾ. ರಾಮಾನುಜ, ಬಾಕಿನ, ಪ್ರಸಾದ್ ರಕ್ಷಿದಿ, ಅರವಿಂದ ಚೊಕ್ಕಾಡಿ – ಹೀಗೆ ಪುಂಖಾನುಪುಂಖವಾಗಿ ಅನೇಕರನ್ನು ನೆನಪಿಸಿಕೊಂಡರು.

ಪರಂಜ್ಯೋತಿಯವರ ಮನೆಯಲ್ಲಿ ಊಟ ಮುಗಿಸಿದ ಬಳಿಕ, ಅವರ ಪತ್ನಿ ಶಾಂತಾ ಅವರಲ್ಲಿದ್ದ ಫೋಟೋ ಆಲ್ಬಮ್ಮುಗಳನ್ನು ತೆಗೆದು ತೋರಿಸಿದರಲ್ಲದೆ, "ಇವರು ನನ್ನ ಮಕ್ಕಳು, ಇದು ನಾವು ನಿಮ್ಮಲ್ಲಿಗೆ ಬಂದಿದ್ದಾಗ ತೆರೆದ ಫೋಟೋ" – ಹೀಗೆ ವಿವರಣೆಗಳನ್ನು ನೀಡುತ್ತ ಹಳೆಯದೆಲ್ಲವನ್ನೂ ನೆನಪಿಸಿಕೊಂಡು ಸಂತೋಷ ಪಟ್ಟರು. ಸಂಜೆಯ ಕಾಫಿ ತಿಂಡಿಯೊಂದಿಗೆ ನಮ್ಮ ಮಾತುಕತೆ ಮುಕ್ತಾಯಗೊಂಡ ಬಳಿಕ ಪರಂಜ್ಯೋತಿ ದಂಪತಿಗಳಿಬ್ಬರೂ ನನಗೂ ಶ್ರೀಪತಿಗೂ ವಿದಾಯ ಕೋರಿದರು. ಬಿಡುವು ಮಾಡಿಕೊಂಡು ಮತ್ತೆ ಬರುವಂತೆ ಆಹ್ವಾನ ನೀಡಿದರು.

ನಾವಿಬ್ಬರೂ ಮನೆಯ ಮಹಡಿಯಿಂದ ಕೆಳಗೆ ಇಳಿಯುತ್ತಿದ್ದಂತೆ ವಸಾರೆ (ಪೋರ್ಟಿಕೋ)ಯಲ್ಲಿ ಹೂಗಿಡಗಳ ಚಟ್ಟಿ (ಪಾಟ್)ಗಳ ಬದಿಯಲ್ಲಿ ವಾಕರ್ ಊರಿಕೊಂಡು ನಿಂತಿದ್ದ ಪರಂಜ್ಯೋತಿ, ಅಲ್ಲಿಂದಲೇ ಮತ್ತೆ ಮತ್ತೆ ಕೈಬೀಸುತ್ತಲೇ ಇದ್ದರು. ಈ ದೃಶ್ಯದಿಂದ ಯಾಕೋ ನನ್ನ ಹೃದಯ ಭಾರವಾಯಿತು. ಗಂಟಲು ಕಟ್ಟಿಕೊಂಡಿತು. ದೂರದಲ್ಲಿದ್ದರೂ ಹತ್ತಿರದಲ್ಲಿದ್ದರು ಪರಂಜ್ಯೋತಿ. ಶ್ರೀಪತಿಯ ಕಾರು ಚಲಿಸತೊಡಗಿದಂತೆ ಪರಂಜ್ಯೋತಿಯವರ 'ಹತ್ತಿರದ ಮಾತು' ಕೂಡ ನನ್ನ ಮನದಾಳದಲ್ಲಿ ಚಲಿಸತೊಡಗಿತು.

ಪರಂಜ್ಯೋತಿಯವರು ಈಗ ಅವರ 'ಇಂಚರ ಪ್ರಕಾಶನ'ದಂತೆ ಇನ್ನಿಲ್ಲದ ಇಂಚರ. ಆದರೆ ನನ್ನಂಥವರ ಅಂತರಾಳದಲ್ಲಿ ಸದಾ ಉಲಿಯುತ್ತಿರುವ ಇಂಚರ.

**ಜಿ. ಎಸ್. ಉಬರಡ್ಕ**
'ಕಾರ್ತಿಕ' ನಾರ್ಣಕಜೆ, ಅಂಚೆ : ದೊಡ್ಡ ತೋಟ – ೫೭೪ ೨೧೮
ಸುಳ್ಯ ತಾಲ್ಲೂಕು, ದ.ಕ.ಜಿಲ್ಲೆ email : jaimini.u@gmail.com

ಇವರಿಗೆ ಸಾರ್ವಜನಿಕವಾಗಿ ಅವಮಾನ, ಉದ್ಯೋಗದಲ್ಲಿ ತಾರತಮ್ಯ, ಸಾರ್ವಜನಿಕ ಸೌಲಭ್ಯ ಬಳಸಲು ಅಡ್ಡಿ, ದಿನನಿತ್ಯದ ಅನುಭವ, ವೈದ್ಯಕೀಯ ಚಿಕಿತ್ಸೆ ನೀಡುವಲ್ಲಿ ವಿಳಂಬವಾಗುವ ವರದಿಗಳು ಮಾಧ್ಯಮದಲ್ಲಿ ಅಪರೂಪವೇನಲ್ಲ. ಹೆತ್ತವರು, ಸಮಾಜ, ಸ್ನೇಹಿತರು, ಸಹೋದ್ಯೋಗಿಗಳು, ಚಿಕಿತ್ಸೆ ನೀಡುವ ವೈದ್ಯ ಸಿಬ್ಬಂದಿ ಎಲ್ಲರೂ ಇವರೊಂದಿಗೆ ಕೀಳಾಗಿ ವರ್ತಿಸುತ್ತಾರೆ. ಬಾಲ್ಯದಿಂದಲೇ 'ಹೆಣ್ಣಿಗ' ಎಂದು ಸಹಪಾಠಿಗಳಿಂದ ಲೇವಡಿ. ಇದರಿಂದಾಗಿ ಇವರು ನಿಯಮಿತವಾಗಿ ಶಾಲೆಗೆ ಹೋಗುವುದಿಲ್ಲ. ಇದನ್ನು ಸಹಿಸದ ಹೆತ್ತವರು ಬೈದು ಹೊಡೆಯುತ್ತಾರೆ. ಕಡಿಮೆ ಅಂಕ ಅಥವಾ ನಪಾಸು ಆದರೆ 'ಕೆಲಸಕ್ಕೆ ಬಾರದವನು' ಎಂದು ಮನೆಯಿಂದ ಹೊರಹಾಕುತ್ತಾರೆ. ತಮಗೆ ಏನಾಗುತ್ತಿದೆ, ಹೀಗಾಗಲು ಕಾರಣವೇನು, ತನ್ನ ತೊಂದರೆಯನ್ನು ಯಾರಿಗೆ ಹೇಳಬೇಕು ಎಂದು ತಿಳಿಯದೆ, ಮಾನಸಿಕ ಒತ್ತಡದಲ್ಲಿರುತ್ತಾರೆ.

**ಡಾ|| ಎಮ್. ಡಿ. ಸೂರ್ಯಕಾಂತ**

ಎಲ್‌ಜಿಬಿಟಿಕ್ಯೂ ಅಥವಾ ಲೈಂಗಿಕ ಅಲ್ಪಸಂಖ್ಯಾತರ ಒಂದು ಭಾಗವಾದ ಮಂಗಳಮುಖಿಯರಿಗೆ ಅಪಮಾನ, ತಾರತಮ್ಯ ಅಪರೂಪವೇನಲ್ಲ. ಇವರು ಅನುಭವಿಸುವ ಅವಮಾನ, ಹಿಂಸೆ, ಯಾತನೆ, ಅಸಹಾಯಕತೆ, ಬಡತನ, ಹಸಿವೆ ಅನೇಕರಿಗೆ ಗೊತ್ತಿಲ್ಲ. ಯಾರು ಈ ಮಂಗಳಮುಖಿಯರು? ಏಕೆ ಇವರನ್ನು ಕೀಳಾಗಿ ಕಾಣಲಾಗುತ್ತಿದೆ? ಇವರಿಗೆ ನೆಮ್ಮದಿಯ ಜೀವನ ಹೇಗೆ?

* * *

ಬೀದಿಯಲ್ಲಿ, ಟ್ರ್ಯಾಫಿಕ್ ಸಿಗ್ನಲ್ ಹತ್ತಿರ, ಅಂಗಡಿಗಳಿಗೆ ಹೋಗಿ ಜೋರಾಗಿ ಚಪ್ಪಾಳೆ ತಟ್ಟಿ ಹಣಕ್ಕಾಗಿ ಪೀಡಿಸುವ ಗಡುಸು ಧ್ವನಿಯ ಗಂಡುಮುಖದ, ಹೆಣ್ಣು ವೇಷ ಧರಿಸಿದ ವ್ಯಕ್ತಿಯನ್ನು ಹೆಚ್ಚಾಗಿ ನಗರಗಳಲ್ಲಿ ನೋಡಿದ್ದೇವೆ. ಇದಲ್ಲದೆ, ಇವರು ಜಾತ್ರೆಗಳಲ್ಲಿ ಭಕ್ತಾದಿಗಳಿಗೆ ಅರಿಶಿಣ, ಕುಂಕುಮ ಕೊಟ್ಟು, ಬುಡಬುಡಿಕೆಯಿಂದ ಶಬ್ದ ಮಾಡುತ್ತ ಹಣ ಕೇಳುವ ದೃಶ್ಯ ಸಾಮಾನ್ಯ ಮತ್ತು ನಾಮಕರಣ ಸಮಾರಂಭದಲ್ಲಿ ಇವರು ಹಾಜರಿರುತ್ತಾರೆ. ನಮ್ಮಲ್ಲಿದ್ದಷ್ಟು ದುಡ್ಡು ಕೊಟ್ಟು ಅಥವಾ ಬೆಳ್ಳಂ ಬೆಳಿಗ್ಗೆಯೇ ಇವರನ್ನು ನೋಡಬೇಕಾಯಿತಲ್ಲ ಎಂದು ಬೇಸರದಿಂದ ಮುಖ ತಿರುಗಿಸುತ್ತೇವೆ.

ಸಾಮಾನ್ಯವಾಗಿ ಇವರನ್ನು ಮಂಗಳಮುಖಿ ಅಥವಾ ಲಿಂಗ ಪರಿವರ್ತಿತ-ಮಹಿಳೆ (ಟ್ರಾನ್ಸ್‌ಜೆಂಡರ್ - ವುಮೆನ್) ಎಂದು ಕರೆಯಲಾಗುತ್ತದೆ. ಇತ್ತೀಚೆಗೆ ಸಮ್ಮತಿಯ ಸಲಿಂಗಕಾಮದ ಬಗ್ಗೆ ಸುಪ್ರೀಂ ಕೋರ್ಟ್ ಎಲ್‌ಜಿಬಿಟಿಕ್ಯೂ ಸಮುದಾಯದ ಪರವಾಗಿ ತೀರ್ಪು ನೀಡಿದ್ದು, ಮಂಗಳಮುಖಿಯರು ಈ ಸಮುದಾಯದ ಒಂದು ಭಾಗವಾಗಿದ್ದಾರೆ.

ಮೇ ೨೦೧೯ರಲ್ಲಿ ಮಣಿಪುರದ ಇಬ್ಬರು ತೃತೀಯ ಲಿಂಗಿಗಳ ಮೇಲೆ ಮೂವರಿಂದ ಬೆಂಗಳೂರಿನ ಕೋರಮಂಗಲದಲ್ಲಿ ಅತ್ಯಾಚಾರ ಜರುಗಿತು. ೧೩-೦೮-೨೦೧೮ರಲ್ಲಿ ಹೈದ್ರಾಬಾದ್‌ನ ೩೪ ವರ್ಷದ ಮಂಗಳಮುಖಿಗೆ ಲೈಂಗಿಕ ಮತ್ತು ದೈಹಿಕ ಹಲ್ಲೆ ಜರುಗಿದ್ದು ವರದಿಯಾಗಿತ್ತು. ಇದೇ ವರ್ಷದ ಕೇರಳದ ಕೊಚ್ಚಿಯ ಇಬ್ಬರು ಮಂಗಳಮುಖಿಯರ ಮೇಲೆ ಹಲ್ಲೆಗೆ ಸಂಬಂಧಿಸಿದಂತೆ ದೂರು ದಾಖಲಾಗಿತ್ತು. ಇದಕ್ಕಿಂತ ಮೊದಲು ೨೦೧೨ರಲ್ಲಿ ಕೇರಳದ ಕೊಲಮ್‌ನಲ್ಲಿ ಎಲ್‌ಜಿಬಿಟಿಕ್ಯೂ ಪರ ಹೋರಾಟಗಾರ್ತಿಯ ಕುತ್ತಿಗೆ ಸೀಳಿದ್ದು, ಮೈ ಮೇಲೆ ಹಲವಾರು ಇರಿತದ ಗಾಯಗಳಾಗಿದ್ದು, ದೇಹದ ತುಂಬೆಲ್ಲಾ ಖಾರದ ಪುಡಿ ಎರಚಿದ್ದ ಮೃತದೇಹ ಪತ್ತೆಯಾಗಿತ್ತು.

**ಮಂಗಳಮುಖಿ ಆದದ್ದು ಹೇಗೆ?**

ಮಗುವಿನ ಲಿಂಗ ಗರ್ಭಾವಸ್ಥೆಯಲ್ಲಿ ರೂಪಗೊಂಡು ಜನಿಸಿದಾಗ ಗಂಡು ಅಥವಾ ಹೆಣ್ಣಿನ ಲಿಂಗ ಹೊಂದಿರುತ್ತದೆ. ಇದನ್ನು ನಿಯೋಜಿತ ಲಿಂಗ (ಅಸೈನ್ಡ್ ಸೆಕ್ಸ್ ) ಎನ್ನಲಾಗುತ್ತದೆ. ಮಂಗಳಮುಖಿಯರು ಗಂಡಾಗಿ ಜನಿಸಿರುತ್ತಾರೆ. ಗಂಡುಮಕ್ಕಳಿಗಿರುವ ಸಹಜವಾದ ಶಿಶ್ನ, ವೃಷಣ ಇರುತ್ತವೆ. ಆದರೆ ಮನಸ್ಸು ಮಾತ್ರ ಹೆಣ್ಣಿನದು. ಅರ್ಥಾತ್ ಗಂಡಿನ ದೇಹದೊಳಗೆ ಸಿಲುಕಿಕೊಂಡಿರುವ ಹೆಣ್ಣುತನ. ಗಂಡಾಗಿ ಹುಟ್ಟಿದ ಮಗು ತಾನು ಹೆಣ್ಣಾಗಬೇಕೆಂದು ಬಯಸುತ್ತದೆ. ಇಂತಹ ಭಾವನೆ ೩-೪ ವರ್ಷದಲ್ಲಿದ್ದಾಗಲೇ ಆರಂಭವಾಗಿ, ೧೦-೧೨ ವರ್ಷದಲ್ಲಿ ಭಾವನೆಗಳು ಹೆಚ್ಚು ಪ್ರಬಲಗೊಳ್ಳುತ್ತವೆ. ಆರಂಭದಲ್ಲಿ ಈ ಗಂಡುಮಗು ಲಂಗ, ಫ್ರಾಕ್ ಅಥವಾ ಅಕ್ಕನ ಬಟ್ಟೆ ಧರಿಸುತ್ತದೆ. ಬಾಲಕರಂತೆ ನಿಂತು ವಿಸರ್ಜನೆ ಮಾಡಲು ನಿರಾಕರಿಸುತ್ತದೆ. 'ನನಗೆ ಗಂಡುಮಗುವಿನ ಜನನಾಂಗ ಬೇಡ, ನಿನ್ನ ಹೊಟ್ಟೆಯೊಳಗೆ ಹೋಗಿ ಹೆಣ್ಣಾಗಿ ಮತ್ತೊಮ್ಮೆ ಜನಿಸಿಬರಲೇ?' ಎಂದು ಅಮ್ಮನನ್ನು ಪ್ರಶ್ನಿಸುತ್ತದೆ. ಉದ್ದ ಕೂದಲು ಬಿಡುವುದು, ಹೆಣ್ಣಿನಂತೆ ಶೃಂಗಾರ ಮಾಡಿಕೊಂಡು ಹೆಣ್ಣಿನಂತೆ ಕೈಬೀಸುತ್ತ ನಡೆಯುವುದು, ಹೆಂಗಸರೊಂದಿಗೆ ಸೇರಿಕೊಂಡು ಹೊಲದಲ್ಲಿ ಸಸಿ ನೆಡಲು ಹೋಗುವುದು, ಶಾಲೆ/ಕಾಲೇಜಿನ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಣ್ಣಿನ ಪಾತ್ರಬೇಕೆಂಬ ಹಟ, ಹೆಣ್ಣಿನ ಉಡುಪು ಧರಿಸಿ ಹಾಗೂ ಹೆಣ್ಣಿನಂತೆ ವರ್ತಿಸಲು ಬಯಸುತ್ತಾರೆ. ಜನನಾಂಗ ಬದಲಿಸಿಕೊಂಡು ಹೆಣ್ಣಾಗುವ ಮನೋಸ್ಥಿತಿ ಇರುತ್ತದೆ. ಒಟ್ಟಿನಲ್ಲಿ ತಮ್ಮ ಪ್ರಸ್ತುತ ಲಿಂಗಕ್ಕೆ ವಿರುದ್ಧವಾಗಿ ವರ್ತಿಸುತ್ತಾರೆ.

# ಮಂಗಳಮುಖಿಗೆ ಅಮಂಗಳ ಬೇಡ



ಮಕ್ಕಳು ಪ್ರಸ್ತುತ ಲಿಂಗದ ವಿರುದ್ಧವಾಗಿ ವರ್ತಿಸುವುದನ್ನು, ಅಂದರೆ ಗಂಡಾಗಿ ಹುಟ್ಟಿ ಬೆಳೆಯುತ್ತಾ ಹೋದಂತೆ ಹೆಂಗಸರಂತೆ ವರ್ತಿಸುವುದಕ್ಕೆ ವೈದ್ಯಕೀಯವಾಗಿ 'ಲಿಂಗ ಗುರುತಿಸುವಿಕೆಯ ಇರುಸು ಮುರುಸು' (ಜೆಂಡರ್ ಡಿಸ್ಪೋರಿಯಾ) ಎನ್ನುತ್ತೇವೆ. ಮಕ್ಕಳ ಈ ವರ್ತನೆಯನ್ನು ಬಹಳಷ್ಟು ತಂದೆ – ತಾಯಿ, ಸಂಬಂಧಿಗಳು, ಸ್ನೇಹಿತರು ಸಹಿಸುವುದಿಲ್ಲ. ತಲೆ ಕೆಟ್ಟಿದೆ, ಹೆಣ್ಣು ಪಿಶಾಚಿ ಬಡಿದುಕೊಂಡಿದೆ, ಯಾರದೋ ಶಾಪ ತಟ್ಟಿದೆ, ನಮಗೆ ಬೇಡವಾದವರು ಮಾಯ – ಮಾಟ ಮಾಡಿದ್ದಾರೆಂದು ಬೀದಿ ಬಳಿ ಜ್ಯೋತಿಷ, ಮಾಟ ಬಿಡಿಸುವವರ ಹತ್ತಿರ ಮಗುವನ್ನು ಸರಿಪಡಿಸಲು ಕರೆದುಕೊಂಡು ಹೋಗುತ್ತಾರೆ. ವೈದ್ಯರನ್ನೂ ಸಂಪರ್ಕಿಸುವುದಿಲ್ಲ. ಮಗ ಸರಿಯಾಗದಾಗ ದೈಹಿಕ ಹಿಂಸೆ ಕೊಡುತ್ತಾರೆ. ಮನೆಯಲ್ಲಿ ಕೂಡಿಹಾಕುತ್ತಾರೆ. ಸಹಪಾಠಿ, ಸ್ನೇಹಿತರು ಮತ್ತು ಊರಿನವರಿಂದ 'ಹೆಣ್ಣಿಗ' ಎಂದು ದಿನನಿತ್ಯ ಹೀಯಾಳಿಕೆ, ಅಪಮಾನ ಇವರಿಗೆ ತಪ್ಪುವದಿಲ್ಲ. ತನ್ನ ಹೆತ್ತವರು ಅರ್ಥ ಮಾಡಿಕೊಳ್ಳದಾಗ ಹಾಗೂ ಆತ್ಮೀಯರು ಕೀಳಾಗಿ ಕಾಣುವುದರಿಂದ ಮನೆಯಿಂದ ದೂರವಿರಲು ಬಯಸುತ್ತಾರೆ. ಊರಿನಿಂದ ಓಡಿಹೋಗಲು ಪ್ರಯತ್ನಿಸುತ್ತಾರೆ. ಊರಿನಲ್ಲಿ ತಮ್ಮಂತಹ ಸಮಸ್ಯೆಯಿರುವವರ ಅಥವಾ ಈಗಾಗಲೇ ಮಂಗಳಮುಖಿ ಆಗಿರುವವರನ್ನು ಸಂಪರ್ಕಿಸುತ್ತಾರೆ. ಮುಂದಿನ ಹಾದಿ ಹಾಗೂ ಜೀವಿಸುವುದರ ಬಗ್ಗೆ ಇವರ ಜೊತೆ ಮಾತನಾಡುತ್ತಾರೆ. ಈ ಮಂಗಳಮುಖಿಯರಿಗೆ ತಮ್ಮದೇ ಆದ ಸಮುದಾಯವಿರುತ್ತದೆ. ಹೆಣ್ಣಿನಂತೆ ವರ್ತಿಸುವ ಈ ಗಂಡು ವ್ಯಕ್ತಿಗಳ ಸಮುದಾಯದ ಸದಸ್ಯರಾಗುತ್ತಾರೆ. ಏಕೆಂದರೆ, ಮನೆಯವರ, ಸಮಾಜದ ನಿರ್ಲಕ್ಷ್ಯ, ತಾರತಮ್ಯ, ಹೀಯಾಳಿಕೆಯಿಂದಾಗಿ ಮನೆ ಬಿಟ್ಟು ಬಂದಿರುತ್ತಾರೆ. ವಾಸಕ್ಕೆ ಒಂದು ತಾಣ ಬೇಕು. ಹಸಿದ ಹೊಟ್ಟೆಗೆ ಅನ್ನ ಬೇಕು. ಸಮುದಾಯ ಇವರಿಗೆ ಆಸರೆ, ಆಹಾರ ನೀಡುತ್ತದೆ. ಹೀಗೆ ಆಸರೆ ಸಿಕ್ಕಿದ್ದರಿಂದ ಹೆತ್ತವರು ಮತ್ತು ಸಂಬಂಧಿಕರಿಂದ ದೂರವಿದ್ದು, ಸಮುದಾಯದ ಜೊತೆಗಿರಲು ಬಯಸುತ್ತಾರೆ. ಈ ಸಮುದಾಯದ ಮುಖ್ಯಸ್ಥೆ ಹಿರಿಯ ಮಂಗಳಮುಖಿಯಾಗಿದ್ದು, ಇವರಿಗೆ 'ಗುರು' ಎಂದು, ಮತ್ತು ಸದಸ್ಯರಿಗೆ 'ಚೆಲಾ'ಎಂದು ಕರೆಯುತ್ತಾರೆ.

> ## ವಿಪರ್ಯಾಸ
>
> ಸುದ್ದಿ ಮಾಡುವವ  
> ತಾನೇ ಸುದ್ದಿಯಾಗಿ  
> ಮುಖಪುಟದಲಿ  
> ಫೋಟೋ ಸಮೇತ  
> "ಇನ್ನಿಲ್ಲ" ವೆಂದು ಸುದ್ದಿಯಾಗಿ ಬಿಟ್ಟ !!  
> ನಿನ್ನೆಯಷ್ಟೇ  
> ವಂಚಕರ, ಜಾಲ  
> ಜಾಲಾಡಿಸಿ, ಎಳೆ – ಎಳೆಯಾಗಿ  
> ಅವರ ಕರ್ಮ ಕಾಂಡ ತೆರೆದಿಟ್ಟಿದ್ದ !!!
>
> **ಎಚ್.ಕೆ.ಕೊಟ್ರಪ್ಪ**  
> ಹರಿಹರ

ಸಮುದಾಯಕ್ಕೆ ಸೇರಿದ ಮೊದಲ ಒಂದೆರಡು ವರ್ಷ ಸೀರೆ ತೊಟ್ಟು ಭಿಕ್ಷಾಟನೆ ಮಾಡಬೇಕಾಗುತ್ತದೆ, ಇದರಿಂದ ಬಂದ ಎಲ್ಲ ಹಣವನ್ನೂ ಗುರುವಿಗೆ ಕೊಡಬೇಕು. ಸ್ವಲ್ಪ ಭಾಗ ಚೆಲಾಗೆ ದೊರೆಯುತ್ತದೆ. ಈ ಅವಧಿಯಲ್ಲಿ ಸೀರೆಯುಟ್ಟರೂ ಜನನಾಂಗ, ಎದೆ ಮಾತ್ರ ಗಂಡಸಿನದು. ಎದೆ ದೊಡ್ಡದಾಗಿ ಕಾಣಲು ಕೃತಕ ವಸ್ತು ಬಳಸುತ್ತಾರೆ. ಇವರ ವಾಸ ಸಾಮಾನ್ಯವಾಗಿ ಮುಖ್ಯ ರಸ್ತೆಗಳ ಪಕ್ಕದಲ್ಲಿರುವ 'ಹಮಾಮ್'ದಲ್ಲಿ. ಕೆಲವರು ಜೀವನ ಪರ್ಯಂತ ಹೀಗೆಯೇ ಇರಲು ಬಯಸುತ್ತಾರೆ. ಆದರೆ ಬಹುತೇಕರು ತಮ್ಮ ಲಿಂಗ ಬದಲಿಸಿಕೊಳ್ಳಲು 'ನಿರ್ವಾಣ' ಎಂಬ ಸಾಂಪ್ರದಾಯಿಕ, ಕಾನೂನುಬಾಹಿರ, ಅಸಹನೀಯ ನೋವಿನ ಲಿಂಗಪರಿವರ್ತನೆಯ ಅಪೂರ್ಣ ಆಪರೇಷನ್ ಮಾಡಿಸಿಕೊಳ್ಳುತ್ತಾರೆ. ಇದು ಲಿಂಗಪರಿವರ್ತನೆಯ ಅವೈಜ್ಞಾನಿಕ, ಕಾನೂನುಬಾಹಿರ ಶಸ್ತ್ರಚಿಕಿತ್ಸೆಯಾಗಿದ್ದು, ಕೇವಲ ಶಿಶ್ನ ಹಾಗೂ ವೃಷಣಗಳನ್ನು ತೆಗೆಯುತ್ತಾರೆ. ಯೋನಿ, ಸ್ತನದ ಮರುರಚನೆ ಮತ್ತು ಹೆಣ್ಣು ಧ್ವನಿ ಪರಿವರ್ತನೆಯಾಗುವುದಿಲ್ಲ. ಧ್ವನಿ ಮತ್ತು ಮುಖ ಗಂಡಸಿನಂತಿರುತ್ತದೆ. ಮುಖ ಮತ್ತು ದೇಹದ ಮೇಲಿನ ರೋಮಗಳು ಹಾಗೇ ಇರುತ್ತವೆ. ಹೆಣ್ಣಿನಂತೆ ಕಾಣಲು ಕೂದಲನ್ನು ಉದ್ದವಾಗಿಟ್ಟುಕೊಂಡಿರುತ್ತಾರೆ.



'ಹೆಣ್ಣುತನದ ವರ್ತನೆಗೆ ನಿರ್ದಿಷ್ಟ ಕಾರಣಗಳಿಲ್ಲ. ಇದು ಯಾವುದೇ ಮನಸ್ಸಿಗೆ ಸಂಬಂಧಪಟ್ಟ ಅಥವಾ ದೈಹಿಕ ಕಾಯಿಲೆ, ಕೈವಾಡ, ತಂತ್ರಗಾರಿಕೆಗಳಿಂದಲ್ಲ. ಇದೊಂದು ಮನೋಸ್ಥಿತಿ, ಅಥವಾ ಭಾವನೆ ಮಾತ್ರ' ಎನ್ನುತ್ತಾರೆ ಅಮೆರಿಕಾದ ಮಕ್ಕಳ ಮತ್ತು ಮನೋತಜ್ಞ ಡಾ॥ ಜಾಸನ್ ರಾಪರ್ಟ್.

**ಕಿರುಕುಳ, ತಾರತಮ್ಯಗಳು ಹಲವಾರು**

ಇವರಿಗೆ ಸಾರ್ವಜನಿಕವಾಗಿ ಅವಮಾನ, ಉದ್ಯೋಗದಲ್ಲಿ ತಾರತಮ್ಯ, ಸಾರ್ವಜನಿಕ ಸೌಲಭ್ಯ ಬಳಸಲು ಅಡ್ಡಿ, ದಿನನಿತ್ಯದ ಅನುಭವ, ವೈದ್ಯಕೀಯ ಚಿಕಿತ್ಸೆ ನೀಡುವಲ್ಲಿ ವಿಳಂಬವಾಗುವ ವರದಿಗಳು ಮಾಧ್ಯಮದಲ್ಲಿ ಅಪರೂಪವೇನಲ್ಲ. ಹೆತ್ತವರು, ಸಮಾಜ, ಸ್ನೇಹಿತರು, ಸಹೋದ್ಯೋಗಿಗಳು, ಚಿಕಿತ್ಸೆ ನೀಡುವ ವೈದ್ಯ ಸಿಬ್ಬಂದಿ ಎಲ್ಲರೂ ಇವರೊಂದಿಗೆ ಕೀಳಾಗಿ ವರ್ತಿಸುತ್ತಾರೆ. ಬಾಲ್ಯದಿಂದಲೇ 'ಹೆಣ್ಣಿಗ' ಎಂದು ಸಹಪಾಠಿಗಳಿಂದ ಲೇವಡಿ. ಇದರಿಂದಾಗಿ ಇವರು ನಿಯಮಿತವಾಗಿ ಶಾಲೆಗೆ ಹೋಗುವುದಿಲ್ಲ. ಇದನ್ನು ಸಹಿಸದ ಹೆತ್ತವರು ಬೈದು ಹೊಡೆಯುತ್ತಾರೆ. ಕಡಿಮೆ ಅಂಕ ಅಥವಾ ನಪಾಸು ಆದರೆ 'ಕೆಲಸಕ್ಕೆ ಬಾರದವನು' ಎಂದು ಮನೆಯಿಂದ ಹೊರ ಹಾಕುತ್ತಾರೆ. ತಮಗೆ ಏನಾಗುತ್ತಿದೆ, ಹೀಗಾಗಲು ಕಾರಣವೇನು, ತನ್ನ ತೊಂದರೆಯನ್ನು ಯಾರಿಗೆ ಹೇಳಬೇಕು ಎಂದು ತಿಳಿಯದೆ, ಮಾನಸಿಕ ಒತ್ತಡದಲ್ಲಿರುತ್ತಾರೆ. ಇದರಿಂದಾಗಿ ಇತರರು ಇವರಿಂದ ದೂರವಿರಲು ಪ್ರಯತ್ನಿಸುತ್ತಾರೆ ಅಥವಾ ಕೀಳಾಗಿ ಕಾಣುತ್ತಾರೆ. ಇವರಿಗೆ ವಾಸಿಸಲು ಯಾರೂ ಮನೆ ಕೊಡುವುದಿಲ್ಲ. ಲಭ್ಯವಾದರೂ ದುಬಾರಿ. ಹಾಗೊಮ್ಮೆ ಸಿಕ್ಕರೆ ಹಲವಾರು ಬಾರಿ ಮನೆ ಬದಲಿಸಬೇಕು. ಮನೆಯಿಂದ ಮನೆಗೆ ಬದಲಾಯಿಸುತ್ತಲೇ ಇರಬೇಕು. ಇವರು ಸಾರ್ವಜನಿಕ ಶೌಚಾಲಯಗಳನ್ನು ಬಳಸುವಂತಿಲ್ಲ. ಮಹಿಳೆಯ ಶೌಚಾಲಯ ಬಳಸಿದರೆ 'ಗಂಡಸರ ತರಹ ಕಾಣಿಸುತ್ತಿಯಾ, ಇಲ್ಲಿಗೇಕೆ ಬಂದೆ, ಸಂಪಾದನೆ ಮಾಡಿ ಜೀವಿಸಲು ಏನು ತೊಂದರೆ ನಿಮಗೆ' ಎಂದು ಟೀಕಿಸುತ್ತಾರೆ. ರೈಲಿನ ಲೇಡಿಸ್ ಕಂಪಾರ್ಟ್‌ಮೆಂಟ್‌ನಲ್ಲಿ ಟಿಕೆಟ್ ಪಡೆದು ಪ್ರಯಾಣಿಸಿದರೂ, ಅಲ್ಲಿ ಕುಳಿತುಕೊಳ್ಳಲು ಸೀಟು ಕೊಡುವುದಿಲ್ಲ, ನೆಲದ ಮೇಲೆ ಕುಳಿತುಕೊಳ್ಳಬೇಕು. ಬಸ್‌ನಲ್ಲಿ ಮಹಿಳೆಯ ಪಕ್ಕ ಕುಳಿತರೆ ಮುಖ ಮುಚ್ಚಿಕೊಳ್ಳುತ್ತಾರೆ, ಪುರುಷರ ಪಕ್ಕ ಕುಳಿತರೆ ಸಂಶಯದಿಂದ ನೋಡುತ್ತಾರೆ. ಹೀಗಾಗಿ ಪ್ರಯಾಣಿಸಲು ಲಾರಿ, ಆಟೋರಿಕ್ಷಾಗಳನ್ನು ಬಳಸುತ್ತಾರೆ. ಉತ್ತಮ ಹೋಟೆಲ್‌ಗೆ ಪ್ರವೇಶವಿರುವುದಿಲ್ಲ. ಜೀವನ ಸಾಗಿಸಲು ಇವರಿಗೆ ಯಾರೂ ಕೆಲಸ ಕೊಡಲು ಬಯಸುವದಿಲ್ಲ. ಹೇಗೋ ಕಷ್ಟಪಟ್ಟು ಕೆಲಸಕ್ಕೆ ಸೇರಿದರೆ ಅಲ್ಲಿಯೂ ಕಿರುಕುಳ ತಪ್ಪುವುದಿಲ್ಲ. ಕೆಲಸದ ಸ್ಥಳದಲ್ಲಿ ಬಹಿರಂಗವಾಗಿ ಎದುರಾಗುವ ಹಗೆತನದಿಂದಾಗಿ ಹತಾಶರಾಗುತ್ತಾರೆ. ಸಭೆಗಳಲ್ಲಿ, ಚರ್ಚೆಯಲ್ಲಿ ಭಾಗವಹಿಸಲು ಅಥವಾ ನಿರ್ಧಾರ ತೆಗೆದುಕೊಳ್ಳಲು ಅವಕಾಶವಿದ್ದಾಗ ಇವರನ್ನು ಗಣನೆಗೇ ತೆಗೆದುಕೊಳ್ಳುವುದಿಲ್ಲ. ಸಿಬ್ಬಂದಿಗಳ ವಿಶ್ರಾಂತಿ ಕೊಠಡಿಗಳನ್ನು ಬಳಸುವಂತಿಲ್ಲ. ಪದೇ ಪದೇ ವರ್ಗಾವಣೆ ಭಯ ಅಥವಾ ಕಿರುಕುಳ ತಡೆಯದೆ ತಾವಾಗಿಯೇ ವರ್ಗಾವಣೆ ಮಾಡಿಸಿಕೊಳ್ಳಬೇಕಾದ ಸ್ಥಿತಿ ಉಂಟಾಗುತ್ತದೆ.

ಕೆಲಸದ ಸ್ಥಳದಲ್ಲಿ ಇವರಿಗಾಗಿ ಪ್ರತ್ಯೇಕ ಶೌಚಾಲಯಗಳಿರುವದಿಲ್ಲ. ಕೆಲಸ ಮುಗಿಸಿ ಮನೆ

ತಲುಪಿದ ನಂತರವೇ ಮನೆಯ ಶೌಚಾಲಯವನ್ನು ಬಳಸಬೇಕು. ಈ ಯಾವುದೇ ತಾಪತ್ರಯವೂ ಬೇಡವೆಂದು ಕೆಲಸ ಬಿಟ್ಟುಬಿಡುವುದು ಸಾಮಾನ್ಯ. ಕೇರಳ ಮೆಟ್ರೋ ರೈಲಿನಲ್ಲಿ ಕೆಲಸಕ್ಕೆ ಸೇರಿದ ೩೩ ಎಲ್‌ಜಿಬಿಟಿಕ್ಯೂಗಳಲ್ಲಿ ೮ ಜನ ಕೆಲಸಕ್ಕೆ ಸೇರಿದ ಮೊದಲ ವಾರದಲ್ಲೇ ಕೆಲಸ ಬಿಟ್ಟಿದ್ದು ವರದಿಯಾಗಿದೆ.

ಒಬ್ಬ ವ್ಯಕ್ತಿಯನ್ನು ಭಿನ್ನವಾಗಿ ಅಥವಾ ಕೀಳಾಗಿ ಕಾಣುವುದನ್ನು ತಾರತಮ್ಯ ಅಥವಾ ಕೀಳರಿಮೆ ಎನ್ನುತ್ತೇವೆ. ಇವರ ಸಂಕಷ್ಟಗಳು ಮತ್ತು ಇವರನ್ನು ನಿರ್ಲಕ್ಷಿಸಿದರೆ ಆಗುವ ಅಪಾಯಗಳ ಬಗ್ಗೆ ಹೆತ್ತವರು ಮತ್ತು ಸಮಾಜದ ಅಜ್ಞಾನ ಮಂಗಳಮುಖಿಯಾಗಲು ಮುಖ್ಯ ಕಾರಣ. ಮಂಗಳಮುಖಿಯರು ಬಹಿಷ್ಕೃತರು, ಇತರರಿಗೆ ಶಾಪ ಕೊಡುವ ಶಕ್ತಿ ಅವರಿಗಿದೆ ಎಂಬ ಮೂಢನಂಬಿಕೆ ಇದೆ. ಹೆಚ್ಚಿನ ಶಿಕ್ಷಣ ಇವರಿಗಿಲ್ಲ, ಮನೆಗೆಲಸ ಸಿಗುವುದಿಲ್ಲ, ಜೀವನ ಸಾಗಿಸಲು ಉಳಿದ ದಾರಿ ಎಂದರೆ ವೇಶ್ಯಾವಾಟಿಕೆ ಮತ್ತು ಭಿಕ್ಷಾಟನೆ. ಆದರೆ ಇವೆರಡೂ ಕಾನೂನು ಬಾಹಿರ. ಇವರನ್ನು ದುರುಪಯೋಗಪಡಿಸಿಕೊಂಡು ಪೊಲೀಸ್ ಮತ್ತು ಸಮಾಜ ವಿರೋಧಿಗಳು ಇವರಿಗೆ ಕಾಟ ನೀಡುವ ಸುದ್ದಿಗಳು ಅಪರೂಪವೇನಲ್ಲ.

**ತಾರತಮ್ಯದ ಕೊನೆ ಹೇಗೆ ?**

**ಮಕ್ಕಳಾಗಿದ್ದಾಗಲೇ ಆರಂಭಿಸಿ:**

ಇದು ಮನೆಯಿಂದಲೇ ಆರಂಭವಾಗಬೇಕು. ಹೆತ್ತವರಿಗೆ ಆರಂಭದ ಲಕ್ಷಣಗಳ ಬಗ್ಗೆ ಅರಿವು ಅಗತ್ಯ. ಮಕ್ಕಳಲ್ಲಿ ಅಂತಹ ಲಕ್ಷಣ ಕಂಡಕೂಡಲೆ, ಅಂದರೆ ೧೦-೧೨ ವರ್ಷದಲ್ಲಿ ಮಕ್ಕಳು ತಮ್ಮ ಲಿಂಗತ್ವಕ್ಕೆ ವಿರುದ್ಧವಾಗಿ ವರ್ತಿಸುತ್ತಿದ್ದರೆ, ಉದಾ: ಗಂಡಾಗಿ ಜನಿಸಿದ ಮಗು ಹೆಣ್ಣಿನಂತೆ ಅಲಂಕಾರ ಮಾಡಿ ಕೊಳ್ಳುತ್ತಿದ್ದರೆ, ಹೆಣ್ಣಿನಂತೆ ನಡೆ ನುಡಿ ಇದ್ದರೆ ಅಕ್ಕನ ಪೋಷಾಕು ಹಾಕಿಕೊಳ್ಳುತ್ತಿದ್ದರೆ, ಶಾಲಾ ನಾಟಕದಲ್ಲಿ ಹೆಣ್ಣು ಪಾತ್ರ ಬೇಕೆಂಬ ಹಟ ಮಾಡುತ್ತಿದ್ದರೆ ಮಕ್ಕಳು ತಜ್ಞರ ಸಲಹೆ ಪಡೆಯಬೇಕು.

ಮಕ್ಕಳಲ್ಲಿ ಇಂತಹ ವರ್ತನೆ ಸಾಮಾನ್ಯ ಎಂದು ಹೆತ್ತವರು ಆದಷ್ಟು ಬೇಗ ಒಪ್ಪಿಕೊಳ್ಳಬೇಕು. ತಮ್ಮ ಮನಸ್ಸಿನ ಭಾವನೆಯನ್ನು ಮುಕ್ತವಾಗಿ ಹೇಳಿಕೊಳ್ಳಲು ಮಕ್ಕಳಿಗೆ ಪ್ರೋತ್ಸಾಹಿಸಬೇಕು. ಏಕೆಂದರೆ, ಹಿಂಸೆಯ ಭಯದಿಂದ ತಪ್ಪಿಸಿಕೊಳ್ಳಲು ಸಮಸ್ಯೆಯನ್ನು ಮಕ್ಕಳು ಮುಚ್ಚಿಡಬಹುದು.

ಇಂತಹ ಸಮಸ್ಯೆಗೆ ಮಾಯ, ಮಾಟ ಕಾರಣ ಎಂಬ ಮೂಢನಂಬಿಕೆ ಬೇಡ. ದೇವರಿಗೆ ಹರಕೆ ಅಥವಾ ನಾಟಿ ಔಷಧಿ ಉಪಯೋಗವಾಗದು. ಮನೆಯಲ್ಲಿ ಕೂಡಿಹಾಕಿ, ದೈಹಿಕ ಹಿಂಸೆ ನೀಡಬಾರದು. ದಿನ ಕಳೆದಂತೆ ಮನೆಯಿಂದಲೂ, ಊರಿನವರಿಂದಲೂ ಕಿರುಕುಳ ಹೆಚ್ಚಾದಾಗ, ಇದನ್ನು ಸಹಿಸದೆ ಮನೆ ಬಿಟ್ಟು ಬೀದಿ ಬಳಿ, ಸಿಗ್ನಲ್‌ಗಳ ಹತ್ತಿರ ನಿಂತು ಭಿಕ್ಷಾಟನೆ ಆರಂಭಿಸುತ್ತಾರೆ. ಇದರಿಂದ ಇವರದು ಗುರಿ ಇಲ್ಲದ ಅಸಂತೋಷದ ಜೀವನವಾಗುತ್ತದೆ. ಶೇ.೫೦ರಷ್ಟು ಮಕ್ಕಳು ಆತ್ಮಹತ್ಯೆಗೆ ಶರಣಾಗುತ್ತಾರೆ. ಶೇ. ೭೦ ಮಕ್ಕಳಿಗೆ ಖಿನ್ನತೆ, ಆತಂಕ, ಆಹಾರ ಸೇವನೆ ಸಮಸ್ಯೆ ಎದುರಾಗುವುದು. ಮದ್ಯಪಾನ, ಧೂಮಪಾನ,



ಮಾದಕ ಔಷಧಿ ವ್ಯಸನಗಳಂತಹ ಸಮಸ್ಯೆಗೆ ಶರಣಾಗುತ್ತಾರೆ. ಸಾಮಾನ್ಯವಾಗಿ ಇವರು ಮುಖ ಮೈಥುನ ಹಾಗೂ ಗುದ ಸಂಭೋಗ ಮಾಡುತ್ತಾರೆ. ಅಸುರಕ್ಷಿತ ಲೈಂಗಿಕ ಸಂಪರ್ಕದಿಂದ ಎಚ್‌ಐವಿ/ ಏಡ್ಸ್‌ಗಳಿಗೆ ಗುರಿಯಾಗಬಹುದು. ಹೀಗಾಗದಂತೆ ಮತ್ತು ಮನೆಯಿಂದ ಓಡಿಹೋಗದಂತೆ ನೋಡಿ ಕೊಂಡರೆ ಸಾವು, ನೋವುಗಳ ಅಪಾಯವಿರುವುದಿಲ್ಲ.

ಬಾಲ್ಯಾವಸ್ಥೆಯಲ್ಲೇ ಇದನ್ನು ಗುರುತಿಸಿ ಆಪ್ತ ಸಮಾಲೋಚನೆ ಕೊಡಿಸಬೇಕು. ಸಮಾಜ ಮತ್ತು ಮನೆಯವರು ಮಗುವಿನ ಜೊತೆ ಹೇಗೆ ಹೊಂದಿಕೊಳ್ಳಬೇಕು ಎಂಬ ಮಾರ್ಗದರ್ಶನ ಆಪ್ತ ಸಮಾಲೋಚನೆಯಿಂದ ಸಿಗುತ್ತದೆ ಮತ್ತು ಪ್ರೌಢಾವಸ್ಥೆ ತಲುಪುವಷ್ಟರಲ್ಲಿ ತಮಗಿರುವ ಲಕ್ಷಣಗಳನ್ನು ಮೀರಿ ಬೆಳೆದು, ತಮ್ಮ ನಿಯೋಜಿತ ಲಿಂಗಕ್ಕೆ ಅನುಗುಣವಾದ ವರ್ತನೆ ಬರುವುದು ಸಾಧ್ಯ ಎನ್ನುತ್ತಾರೆ ಟೊರಾಂಟೋ ಲೈಂಗಿಕತೆ ಕೇಂದ್ರದ ಸಂಶೋಧಕ ಡಾ॥ ಜೇಮ್ಸ್ ಕಾಂಟರ್.

ವಯಸ್ಸು ೧೮ ವರ್ಷಕ್ಕಿಂತಲೂ ಹೆಚ್ಚಿದ್ದರೆ ಕಾನೂನಿನ ಮಾನ್ಯತೆ ಇರುವ ಎಸ್. ಆರ್. ಎಸ್. ಎಂಬ ಲಿಂಗಪರಿವರ್ತನೆಯ ಶಸ್ತ್ರಕ್ರಿಯೆ ಬಗ್ಗೆ ಪ್ಲಾಸ್ಟಿಕ್ ಸರ್ಜನ್ ಅವರ ಸಲಹೆ ಅವಶ್ಯವಿರುತ್ತದೆ.

**ಮಂಗಳಮುಖಿ ಪುನರ್ವಸತಿ ಹೇಗೆ?**

'ಈಗಾಗಲೇ ಮಂಗಳಮುಖಿಯಾಗಿ, ಬೀದಿಗೆ ಇಳಿದಿರುವವರನ್ನು ಇತರ ಮನುಷ್ಯರಂತೆ ಕಾಣಬೇಕು. ಇವರಿಗೆ ಇರುವುದು ವಿಭಿನ್ನ ಮನೋಸ್ಥಿತಿ. ಇದೊಂದು ವಿಭಿನ್ನ ಜೀವನ ಕ್ರಮ, ಅಷ್ಟೆ. ಇವರ ದೈಹಿಕ ಮತ್ತು ಮಾನಸಿಕ ಬಯಕೆಗಳನ್ನು ಸಂತೋಷದಿಂದ ಸ್ವೀಕರಿಸಿ, ಇತರರಂತೆ ಬದುಕುವ ಧೈರ್ಯವನ್ನು ತುಂಬಬೇಕು. ಸೃಷ್ಟಿಯಲ್ಲಿ ಹಲವು ವಿಶೇಷಗಳಿರುವಂತೆ ಇದೂ ಒಂದು' ಎನ್ನುತ್ತಾರೆ ಲೇಖಕ ಹಾಗೂ ಎಲ್‌ಜಿಬಿಟಿಕ್ಯೂ ಪರ ಹೋರಾಟಗಾರ ವಸುಧೇಂದ್ರ. ಸರ್ವೋಚ್ಚ ನ್ಯಾಯಾಲಯದ ೨೦೧೮ರ ಸೆಪ್ಟೆಂಬರ್ ತೀರ್ಪಿನಂತೆ ಭಾರತೀಯ ದಂಡ ಸಂಹಿತೆ(ಐಪಿಸಿ) ಸೆಕ್ಷನ್ ೩೭೭ರ ಪ್ರಕಾರ ಮಹಿಳೆ ಹಾಗೂ ಪುರುಷರಿಗೆ ಇರುವ ಎಲ್ಲಾ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಎಲ್‌ಜಿಬಿಟಿಕ್ಯೂಗಳಿಗೂ ಅನ್ವಯ ಮತ್ತು ಇವರು ತಮ್ಮ ಇಷ್ಟದ ಲಿಂಗತ್ವವನ್ನು ಹೇಳಿಕೊಳ್ಳುವ ಹಕ್ಕನ್ನು ನೀಡಿದೆ ಮತ್ತು ದೇಹಕ್ಕೆ ಸಂಬಂಧಿಸಿದ ಲಕ್ಷಣಗಳ ಆಧಾರದಲ್ಲಿ ವ್ಯಕ್ತಿಯನ್ನು ತಾರತಮ್ಯದಿಂದ ನೋಡುವುದು ಮೂಲಭೂತ ಹಕ್ಕುಗಳ ಉಲ್ಲಂಘನೆ ಎಂದಿದೆ. ಭಾರತೀಯ ದಂಡ ಸಂಹಿತೆ ಸೆಕ್ಷನ್ ೩೪೭(ಹಲ್ಲೆ) ಹಾಗೂ ೩೨೪(ಕಾನೂನುಬಾಹಿರ ಬಂಧನ)ಗಳ ಪ್ರಕಾರ ಮಂಗಳಮುಖಿಯರಿಗೆ ತೊಂದರೆ ನೀಡುವವರನ್ನು ಶಿಕ್ಷಿಸಲು ಅವಕಾಶವಿದೆ.

ಇವರಿಗೆ ಹೆಚ್ಚಿನ ಶಿಕ್ಷಣದಿಂದ ಉದ್ಯೋಗಾವಕಾಶ ಗಳು ದೊರೆಯಬಹುದು. ಇವರ ಶಿಕ್ಷಣಮಟ್ಟ ಹೆಚ್ಚಿಸಲು ಕೇರಳದ ಕೊಚ್ಚಿನ್‌ನಲ್ಲಿ ವಿಶೇಷ ವಸತಿ ಶಿಕ್ಷಣ ಕೇಂದ್ರಗಳಿವೆ. ಕರ್ನಾಟಕ ಶಿಕ್ಷಣ ಕಾಯಿದೆಯ ಅಡಿ ಮೀಸಲಾತಿ ಶಿಕ್ಷಣ ಲಭ್ಯವಿದೆ. ಬೆಂಗಳೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯ ಉಚಿತ ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣ ನೀಡಲು ಮುಂದಾಗಿವೆ. ಇವರು ಸುಶಿಕ್ಷಿತರಾಗಿ, ಸ್ವಾವಲಂಬಿಗಳಾದರೆ ತಾರತಮ್ಯ, ಕಿರುಕುಳಗಳು ತಪ್ಪುತ್ತವೆ. ನ್ಯಾಯಾಲಯ ಇವರನ್ನು ಹಿಂದುಳಿದ ಪಂಗಡ(ಒ. ಬಿ. ಸಿ)ಎಂದು ಪರಿಗಣಿಸಿ ಮೀಸಲಾತಿಯಲ್ಲಿ ಉದ್ಯೋಗ ನೀಡಲು ಆದೇಶಿಸಿದೆ. ಇದರ ಅನ್ವಯ ಬೆಂಗಳೂರಿನ ಕೆಲವು ಸಾಫ್ಟ್‌ವೇರ್ ಕಂಪನಿಗಳು, ಮೆಟ್ರೋ ಹಾಗೂ ಭಾರತೀಯ ರೈಲು ವಿಭಾಗದಲ್ಲಿ ಎಲ್‌ಜಿಬಿಟಿಕ್ಯೂಗಳು ಕೆಲಸದಲ್ಲಿದ್ದಾರೆ. ನೌಕರಿ ಅರ್ಜಿಯ 'ಲಿಂಗ' ಕಾಲಂನಲ್ಲಿ 'ಇತರೆ' ಎಂದು ಬರೆಯಬೇಕು. ಕೆಲಸದ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಲಿಂಗತ್ವ ಅಲ್ಪ ಸಂಖ್ಯಾತರಿಗೆ ಪ್ರತ್ಯೇಕ ಶೌಚಾಲಯ ಅಥವಾ ಎಲ್ಲರೂ ಬಳಸಬಹುದಾದ "ಜೆಂಡರ್ ನ್ಯೂಟ್ರಲ್ ಟಾಯ್ಲೆಟ್‌ಗಳು" ಸಂಖ್ಯೆ ಹೆಚ್ಚಾಗಬೇಕು. ಮಂಗಳಮುಖಿಗಳ ಬಗ್ಗೆ ಇರುವ ಮೂಢನಂಬಿಕೆಯನ್ನು ದೂರ ಮಾಡುವ ಮತ್ತು ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ರೂಪಿಸುವ ಅಗತ್ಯವಿದೆ.

ವೈದ್ಯರು ಹಾಗೂ ವೈದ್ಯೇತರ ಸಿಬ್ಬಂದಿಗೆ ಮಂಗಳಮುಖಿಯರ ಬಗ್ಗೆ ಅರಿವು ಇರುವುದು ಅಗತ್ಯ. ಏಕೆಂದರೆ, ಒಂದು ಸಮೀಕ್ಷೆಯ ಪ್ರಕಾರ ಶೇ. ೧೭ ಮಂಗಳಮುಖಿಯರಿಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ನಿರಾಕರಿಸಲಾಗುತ್ತಿದೆ. 'ಮಂಗಳಮುಖಿಯರ' ದೂರು

ಸ್ವೀಕರಿಸಲು ಹಾಗೂ ಪರಿಹಾರ ನೀಡಲು ಲಿಂಗತ್ವ ನ್ಯಾಯ ಮಂಡಳಿ ರಚನೆಯಾಗಬೇಕು.

ಲೈಂಗಿಕವಾಗಿ ಸಂಪೂರ್ಣವಾಗಿ ಹೆಣ್ಣು ಗಂಡಾಗಿ ಬದಲಾಗಲು ಲಿಂಗ ಪರಿವರ್ತನೆ ಶಸ್ತ್ರಚಿಕಿತ್ಸೆ (ಎಸ್‌ಆರ್‌ಎಸ್) ಲಭ್ಯ. ಇದಕ್ಕೆ ಕಾನೂನಿನ ಮಾನ್ಯತೆ ಇದ್ದು, ಕೆಲವು ಖಾಸಗಿ ಆಸ್ಪತ್ರೆಗಳಲ್ಲಿ ಮತ್ತು ತಮಿಳುನಾಡಿನ ಕೆಲವು ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಉಚಿತವಾಗಿ ಲಭ್ಯ. ಶಿಶ್ನ ಮತ್ತು ವೃಷಣವನ್ನು ತೆಗೆದು, ಯೋನಿಯನ್ನು ಮರುರಚಿಸಲಾಗುವುದು. ಹೀಗಾಗಿ ಸಂಭೋಗ ಸಾಧ್ಯ, ಆದರೆ ಸಂತಾನೋತ್ಪತ್ತಿ ಇರದು. ಸ್ತನವರ್ಧನೆ, ಧ್ವನಿ ಪರಿವರ್ತನೆಗೆ ಚಿಕಿತ್ಸೆ ಇದೆ. ಹೆಣ್ಣಾಗಿ ಬದಲಾದ ಪ್ರಮಾಣಪತ್ರ ನೀಡಲಾಗುತ್ತದೆ. ಇದನ್ನು ಬಳಸಿ ದಾಖಲೆಗಳಲ್ಲಿ ನೀಡಿ ಲಿಂಗ ಬದಲಿಸಿ ಕೊಳ್ಳಬಹುದು. ಅವೈಜ್ಞಾನಿಕ ಅನಧಿಕೃತ ಮತ್ತು ಮಾನ್ಯತೆ ಇಲ್ಲದ ಜೀವಕ್ಕೆ ಅಪಾಯದ ಸಾಂಪ್ರದಾಯಿಕ ನಿರ್ವಾಣ ಎಂಬ ಶಸ್ತ್ರಚಿಕಿತ್ಸೆಯ ಅಗತ್ಯವಿಲ್ಲ.

ಎಸ್‌ಆರ್‌ಎಸ್ ಲಿಂಗಪರಿವರ್ತನೆ ಶಸ್ತ್ರಕ್ರಿಯೆಯ ಮೂಲಕ ಸಂಪೂರ್ಣವಾಗಿ ಲಿಂಗಪರಿವರ್ತನೆ ಗೊಂಡು, ನಮ್ಮ ದೇಶದಲ್ಲಿ ಹಲವರು ನ್ಯಾಯಾಧೀಶ, ಪ್ರಾಂಶುಪಾಲ, ಸಾಫ್ಟ್‌ವೇರ್ ಇಂಜನಿಯರ್, ಪೊಲೀಸ್ ಇನ್ಸ್‌ಪೆಕ್ಟರ್, ಮೇಯರ್‌ಗಳಾಗಿರುವುದು ಗಮನಾರ್ಹ. ಮಂಗಳಮುಖಿಯರು ಎಂದು ಗುರುತಿಸಿದಾಕ್ಷಣ ಬೀದಿ ಬಳಿಯ ಅವಮಾನದ, ಕತ್ತಲು ಮತ್ತು ನಿರಾಶಾ ದಾಯಕ ಜೀವನ ಆರಂಭ ಎಂಬ ನಿರಾಶೆ ಬೇಡ.

**ಸಮುದಾಯದ ಪಾತ್ರ**

ಇವರನ್ನು ಹಿಜ್ಡಾ, ಹಿಜರಾ, ಪೊಟ್ಟೈ, ಖೋಜಾ, ಕಟ್ಟವಾಡಿ, ನಪುಂಸಕ, ಶಿಖಂಡಿ, ಕೊಚ್ಚಿ, ಖೊಜ್ಜ, ಚಕ್ಕಾ, ಚನ್ನಪಟ್ಟಣ, ನಂಬರ್ ನೈನ್ ಎಂದೆಲ್ಲಾ ಅವಮಾನಿಸುವುದು ಸರಿಯಲ್ಲ.

ದುಡ್ಡು ಕೊಟ್ಟು ಭಿಕ್ಷಾಟನೆ ಪ್ರೋತ್ಸಾಹಿಸಬೇಡಿ. ಬದಲಾಗಿ, ಲಭ್ಯವಿದ್ದ ಶಿಕ್ಷಣ ಮತ್ತು ಉದ್ಯೋಗಾ ವಕಾಶಗಳ ಬಗ್ಗೆ ಮಾಹಿತಿ ನೀಡಿ ಸಹಾಯ ಮಾಡಿ.

ಇವರ ಶಿಕ್ಷಣ ಮಟ್ಟವನ್ನು ಹೆಚ್ಚಿಸಲು ಕೇರಳ ಮತ್ತು ತಮಿಳುನಾಡಿನಲ್ಲಿ ಇವರಿಗಾಗಿ ವಿಶೇಷ ಶಾಲೆಗಳಿವೆ. ಕೇರಳದ ಕೊಚ್ಚಿನ್‌ನಲ್ಲಿ ವಿಶೇಷ ವಸತಿ ಶಿಕ್ಷಣ ಕೇಂದ್ರಗಳಿವೆ. ಕರ್ನಾಟಕ ಶಿಕ್ಷಣ ಕಾಯಿದೆ ಯಡಿ ಮೀಸಲಾತಿ ಶಿಕ್ಷಣ ಲಭ್ಯವಿದೆ. ನ್ಯಾಯಾಲಯ ಇವರನ್ನು ಹಿಂದುಳಿದವರು (ಓ.ಬಿ.ಸಿ.)ಎಂದು ಪರಿಗಣಿಸಿ ಮೀಸಲಾತಿಯಲ್ಲಿ ಉದ್ಯೋಗ ನೀಡಲು ಸೂಚನೆ ನೀಡಿದೆ. ಮದುವೆಯಾಗುವ ಹಕ್ಕು, ಡ್ರೈವಿಂಗ್ ಲೈಸೆನ್ಸ್, ಪಾಸ್‌ಪೋರ್ಟ್, ಮತದಾನದ ಗುರುತಿನ ಚೀಟಿ ಇವನ್ನು ಮಂಗಳಮುಖಿಯರು ಪಡೆಯಲು ಅರ್ಹರು. ಸಮಾನ ಹಕ್ಕುಗಳ ಬಗ್ಗೆ ಸರ್ವೋಚ್ಚ ನ್ಯಾಯಾಲಯದ ೨೦೧೮ರ ಸೆಪ್ಟೆಂಬರ್‌ರ ತೀರ್ಪಿಗೆ ಸಮೂಹ ಮಾಧ್ಯಮಗಳು ಗರಿಷ್ಠ ಪ್ರಮಾಣದ ಪ್ರಚಾರ ನೀಡಬೇಕು. ಎಲ್‌ಜಿಬಿಟಿಕ್ಯೂ ಸಮುದಾಯದ ಬಗ್ಗೆ ಇರುವ ಸಾಮಾಜಿಕ ಕಳಂಕವನ್ನು ತೊಳೆಯುವುದು ಎಲ್ಲಕ್ಕಿಂತ ಮುಖ್ಯ. ಈ ಸಮುದಾಯ ಅನುಭವಿಸುತ್ತಿರುವ



ತಾರತಮ್ಯದ ಬಗ್ಗೆ ಸರ್ಕಾರಿ ಅಧಿಕಾರಿಗಳು ಮತ್ತು ಪೊಲೀಸರಲ್ಲಿ ಜಾಗೃತಿ ಮೂಡಿಸಬೇಕು ಎನ್ನುತ್ತಾರೆ ನ್ಯಾಯಮೂರ್ತಿ ನಾರಿಮನ್.

**ನಕಲಿ ಮಂಗಳಮುಖಿಯರು!**

ಹೊಟ್ಟೆಪಾಡಿಗಾಗಿ ಮಂಗಳಮುಖಿಯರು ಭಿಕ್ಷೆ ಬೇಡುವುದು ಹೊಸದೇನಲ್ಲ. ಆದರೆ ಇದನ್ನೇ ಕೆಲವು ಪುರುಷರು ಬಂಡವಾಳ ಮಾಡಿಕೊಳ್ಳುತ್ತಿದ್ದಾರೆ. ಕೆಲವು ಗ್ರಾಮದ ಪುರುಷರು ಹಣ ಬೇಕಾದಾಗ ನಗರಕ್ಕೆ ಬಂದು, ಗಂಡು ವೇಷ ಕಳಚಿ, ಹೆಣ್ಣಿನ ಹಾಗೆ ಬಟ್ಟೆ ತೊಟ್ಟು ರಸ್ತೆ ಬಳಿ ಭಿಕ್ಷೆಗೆ ನಿಲ್ಲುತ್ತಾರೆ. ಸಂಜೆ ಪುರುಷ ರಂತೆ ಉಡುಪು ತೊಟ್ಟು ಮತ್ತೆ ಊರಿಗೆ ಮರಳುತ್ತಾರೆ!

ಮಂಗಳೂರಿನ ಕದ್ರಿ ಪಾರ್ಕ್‌ನಲ್ಲಿ ಇತ್ತೀಚೆಗೆ ಮಂಗಳಮುಖಿ ವೇಷ ಧರಿಸಿದ ಯುವಕನೊಬ್ಬ ಜನರನ್ನು ಹಣಕ್ಕಾಗಿ ಸುಲಿಗೆ ಮಾಡುತ್ತಿದ್ದಾಗ ಸೆರೆಯಾಗಿದ್ದ.

ಮಧ್ಯಪ್ರದೇಶದ ಉಜ್ಜನಿಯ ಬಸ್ ನಿಲ್ದಾಣದಲ್ಲಿ ಕುಡಿತಕ್ಕೆ ದಾಸನಾದ ಯುವಕನೊಬ್ಬ ಹೆಣ್ಣಿನ ವೇಷ ಧರಿಸಿ ಭಿಕ್ಷೆ ಬೇಡುತ್ತಿದ್ದ. ಇದನ್ನು ನೋಡಿದ ಮಂಗಳಮುಖಿಯರು ಈತನ ಬಟ್ಟೆ ಬಿಚ್ಚಿ, ಒದೆ ನೀಡಿ ಪೊಲೀಸರ ವಶಕ್ಕೆ ಒಪ್ಪಿಸಿದ್ದಾರೆ. ಈತ ಸಾರಾಯಿಗೆ ಹಣ ಹೊಂದಿಸಲು ಈ ಕೆಲಸ ಮಾಡುತ್ತಿದ್ದ.

**ಇವರ ಸಂಖ್ಯೆ ಎಷ್ಟು?**

ಸತ್ಯಮೇಯ ಜಯತೆ ಎಂಬ ಸಾಮಾಜಿಕ ಸಂಸ್ಥೆಯ ಪ್ರಕಾರ ಮಂಗಳಮುಖಿಯರು ಭಾರತವೂ ಸೇರಿದಂತೆ ನೇಪಾಳ, ಪಾಕಿಸ್ತಾನ, ಬಾಂಗ್ಲಾದೇಶ ದಲ್ಲಿದ್ದಾರೆ. ಕರ್ನಾಟಕವೂ ಸೇರಿದಂತೆ ೧೭ ರಾಜ್ಯಗಳಲ್ಲಿ ಇವರಿದ್ದಾರೆ. ಇವರು ಹೆಚ್ಚಿನ ಸಂಖ್ಯೆಯಲ್ಲಿರುವುದು ಮಹಾರಾಷ್ಟ್ರ, ಉತ್ತರ ಪ್ರದೇಶ, ಓಡಿಸಾ, ಪಶ್ಚಿಮ ಬಂಗಾಳ, ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ. ಭಾರತೀಯ ವೈದ್ಯಕೀಯ ಸಂಶೋಧನೆ ಕೇಂದ್ರ ಮತ್ತು ಎನ್. ಐ. ಈ. ಸಂಸ್ಥೆ ಸಮೀಕ್ಷೆ ನಡೆಸಿ ೨೯೦೭ ಮಂಗಳಮುಖಿಯರನ್ನು ಗುರುತಿಸಿವೆ. ಕರ್ನಾಟಕದಲ್ಲಿ ಸುಮಾರು ೧೫೦೦ ಮತ್ತು ಅತ್ಯಧಿಕ ಸಂಖ್ಯೆಯಲ್ಲಿ ಮಹಾರಾಷ್ಟ್ರ (೫೦೦೦)ದಲ್ಲಿದ್ದಾರೆ. ನಗರವಾಸಿಗಳು ಶೇ. ೨೧, ಗ್ರಾಮವಾಸಿಗಳು ಶೇ. ೭೯. ಶೇ. ೬೨ ಲೈಂಗಿಕ ಕಾರ್ಯಕರ್ತೆಯರಾಗಿದ್ದು, ಇಂಥವರು ಉತ್ತರ ಪ್ರದೇಶದಲ್ಲಿ ಅತ್ಯಧಿಕ (ಶೇ. ೬೨) ಸಂಖ್ಯೆಯಲ್ಲಿದ್ದಾರೆ. ಕರ್ನಾಟಕ ಮೂರನೆಯ ಸ್ಥಾನದಲ್ಲಿದೆ. ಇವರು ಶಿವ ಮತ್ತು ಬಹುಚಾರಾ ಮಾತೆಯ ಭಕ್ತಾದಿಗಳು. ಇವರ ಚಪ್ಪಾಳೆ ವಿಶಿಷ್ಟವಾಗಿದೆ. ಸಾಮಾನ್ಯವಾಗಿ, ಕಾರ್ಯ ಕ್ರಮಗಳಲ್ಲಿ ಪ್ರಶಂಸೆ ಮಾಡುವಾಗ ಕೈ ಬೆರಳುಗಳನ್ನು ಜೋಡಿಸಿ, ಎರಡು ಹಸ್ತಗಳನ್ನು ಲಂಬವಾಗಿಟ್ಟುಕೊಂಡು ಎದೆ ಹತ್ತಿರಕ್ಕೆ ತರುತ್ತಾರೆ. ಆದರೆ ಇವರು ಬೆರಳುಗಳನ್ನು ಬಿಡಿಸಿ, ಹಸ್ತವನ್ನು ಸಮತಲವಾಗಿಟ್ಟುಕೊಳ್ಳುತ್ತಾರೆ.

**ಜನನ ಹೆಣ್ಣು , ಮನೋಸ್ಥಿತಿ ಗಂಡು**

ಡಿ. ಎಸ್. ಎಂ-೪ ಪ್ರಕಾರ ಇಪ್ಪತ್ತು ಸಾವಿರ ಪುರುಷರಲ್ಲಿ ಒಬ್ಬರಿಗೆ ಸ್ತ್ರೀಯಾಗಿ ಪರಿವರ್ತನೆಗೊಳ್ಳ ಬೇಕೆಂಬ ಮತ್ತು ಐವತ್ತು ಸಾವಿರ ಮಹಿಳೆಯರಲ್ಲಿ ಒಬ್ಬಳಿಗೆ ಪುರುಷನಾಗಬೇಕೆಂಬ ಆಸಕ್ತಿ ಇರುತ್ತದೆ. ಅಂದರೆ ಪುರುಷನಾಗಬೇಕೆಂಬ ಆಸಕ್ತಿಯುಳ್ಳವರು ಅಪ್ಪಿಲ್ಲ. ಇಂಥವರನ್ನು ಲಿಂಗ ಪರಿವರ್ತಿತ – ಪುರುಷ (ಟ್ರ್ಯಾನ್ಸ್‌ಜೆಂಡರ್–ಮೆನ್) ಎಂದು ಕರೆಯುತ್ತಾರೆ. ಸಹಜವಾದ ಹೆಣ್ಣು ಜನನಾಂಗವಿರುವ ಹೆಣ್ಣು ಮಗುವಿಗೆ ಬಸ್, ಟ್ರಕ್, ಕ್ರಿಕೆಟ್, ಕಬಡ್ಡಿ, ಶರ್ಟ್, ಪ್ಯಾಂಟ್ ಮೇಲೆ ಹೆಚ್ಚು ಆಸಕ್ತಿ ಇರುತ್ತದೆ. ಗಟ್ಟಿ ಧ್ವನಿಯ, ಧೈರ್ಯಶಾಲಿಯಂತೆ ಮಾತು ಮತ್ತು ಉದ್ದ ಕೂದಲನ್ನು ಕತ್ತರಿಸಿಕೊಂಡು ಹುಡುಗರಂತೆ ಸಣ್ಣದಾಗಿಸಲು ಬಯಸುತ್ತದೆ. ಮಂಗಳಮುಖಿಯರ ಕಷ್ಟ, ತಾರತಮ್ಯ ಇವರಿಗೂ ತಪ್ಪಿದ್ದಲ್ಲ.

ಲಿಂಗ ಪರಿವರ್ತನೆ ಶಸ್ತ್ರಚಿಕಿತ್ಸೆ (ಎಸ್‌ಆರ್‌ಎಸ್) ಮೂಲಕ ಇವರನ್ನು, ಕಾನೂನುಬದ್ಧವಾಗಿ, ಪುರುಷರನ್ನಾಗಿ ಪರಿವರ್ತಿಸಲು ಸಾಧ್ಯವಿದೆ.

**ಡಾ॥ ಎಮ್. ಡಿ. ಸೂರ್ಯಕಾಂತ**
ಮಕ್ಕಳ ತಜ್ಞರು, ಫ್ಲಾಟ್ ನಂ. ೩೦೭
ಎಂ. ಆರ್. ಎನ್‌ಕ್ಲೇವ್ ಅಪಾರ್ಟ್‌ಮೆಂಟ್
ಸಿಂಗಸಂದ್ರ, ಮಣಿಪಾಲ್ ಕೌಂಟ್ ರೋಡ್
ಬೆಂಗಳೂರು–೫೬೦ ೦೬೮
email : evanpapu@gmail.com

ಮೂಲ : **ಲಿಯೋ ಟಾಲ್‌ಸ್ಟಾಯ್**  ಅನುವಾದ : **ಪ್ರೊ || ಬಿ. ಕೆ. ಹನುಮಂತಯ್ಯ**

**ವ್ಲಾ**ದಿಮೀರ್ ನಗರದಲ್ಲಿ ಯುವ ವ್ಯಾಪಾರಸ್ಥ ಐವಾನ್ ಡಿ ಮಿಟ್ರಿಚ್ ಆಕ್ಸಿನೋವ್ ವಾಸಿಸುತ್ತಿದ್ದ. ಆತನಿಗೆ ಸ್ವಂತ ಮನೆ ಮತ್ತು ಎರಡು ವ್ಯಾಪಾರದ ಮಳಿಗೆಗಳು ಇದ್ದವು. ಆಕ್ಸಿನೋವ್ ಸುಂದರ ಪುರುಷ. ಸೊಂಪಾದ ಗುಂಗುರು ಕೂದಲು ಆತನ ಸೌಂದರ್ಯಕ್ಕೆ ಕಳೆಕಟ್ಟುವಂತಿತ್ತು. ತಮಾಷೆ ಮಾಡುವುದು ಮತ್ತು ಹಾಡುವುದೆಂದರೆ ತುಂಬ ಇಷ್ಟಪಡುತ್ತಿದ್ದ. ನಡು ಪ್ರಾಯದವನಾಗಿದ್ದು, ಪಾನಪ್ರಿಯನೂ ಸಹ. ಹೆಚ್ಚು ಕುಡಿದಿದ್ದಾಗ ಮಿತಿಮೀರಿ ವರ್ತಿಸುತ್ತಿದ್ದ. ಮದುವೆ ಆದನಂತರ ಇತಿಮಿತಿಯಲ್ಲೇ ಇರುತ್ತಿದ್ದು ಯಾವಾಗಲಾದರೂ ಒಮ್ಮೆ ಕುಡಿಯುತ್ತಿದ್ದುದೂ ಉಂಟು.

ಬಿಸಿಲು ಕಾಲದ ಒಂದು ದಿನ ಯುವ ಆಕ್ಸಿನೋವ್ ನಿಸ್ನಿ ಸಂತೆಗೆ ಹೊರಟ. ಹೆಂಡತಿ ಮಕ್ಕಳಿಗೆ ವಿದಾಯ ಹೇಳುತ್ತಿರುವಾಗ ತನ್ನ ಹೆಂಡತಿ ಬಾಯಿ ಹಾಕಿ "ಐವಾನ್ ಈ ದಿನ ಪ್ರಯಾಣ ನಿಲ್ಲಿಸು. ಕಳೆದ ರಾತ್ರಿ ನಿನ್ನ ಬಗ್ಗೆ ತುಂಬ ಕೆಟ್ಟ ಕನಸನ್ನು ಕಂಡೆ" ಎಂದಳು. ಆಕ್ಸಿನೋವ್ ನಕ್ಕು, "ನಾನು ಮಿತಿ ಮೀರಿ ಕುಡಿಯುತ್ತೇನೆ ಎಂದು ನಿನಗೆ ಭಯ ಅಲ್ಲವೇ?" ಎಂದ. ಹೆಂಡತಿ ಹೇಳಿದಳು: "ನನಗೆ ಏಕೆ ಭಯ ಎಂದು ನನಗೆ ತಿಳಿಯದು. ಕೆಟ್ಟ ಕನಸು ಕಂಡೆ ಎನ್ನುವುದು ನಿಜ. ನೀನು ಸಂತೆಯಿಂದ ಹಿಂತಿರುಗಿದೆ. ನೀನು ನಿನ್ನ ಟೋಪಿಯನ್ನು ತೆಗೆದಾಗ ನಿನ್ನ ಕೂದಲು ಬಿಳಿಚಿದ್ದನ್ನು ಕಂಡೆ." ಆಕ್ಸಿನೋವ್ ನಕ್ಕು, "ನಿನ್ನ ಕನಸು ಶುಭಸೂಚಕವಾಗಿದೆ. ಸಂತೆಯಲ್ಲಿ ಎಲ್ಲಾ ಸಾಮಗ್ರಿಗಳನ್ನು ಮಾರಿ, ಸಂತೆಯಿಂದ ನಿನಗೆ ಒಳ್ಳೆಯ ಪಾರಿತೋಷಕಗಳನ್ನು ತರುವೆನೊ ಇಲ್ಲವೊ ನೋಡುವೆಯಂತೆ" ಎಂದು ಹೇಳಿ ಮನೆಯವರಿಗೆ ವಿದಾಯ ಹೇಳಿ ಗಾಡಿಯಲ್ಲಿ ಪ್ರಯಾಣ ಹೊರಟ.

ಅರ್ಧ ದಾರಿ ಪ್ರಯಾಣಿಸಿದ ಬಳಿಕ, ತನಗೆ ಪರಿಚಿತನಾದ ಇನ್ನೊಬ್ಬ ವ್ಯಾಪಾರಿಯನ್ನು ಭೇಟಿಯಾದ. ಇಬ್ಬರೂ ಒಂದೇ ಹೋಟೆಲ್‌ನಲ್ಲಿ ರಾತ್ರಿ ತಂಗಿದ್ದರು. ಇಬ್ಬರೂ ಉಪಾಹಾರ ಸೇವಿಸಿ ಅಕ್ಕಪಕ್ಕದ ರೂಮುಗಳಲ್ಲಿ ಉಳಿದುಕೊಂಡರು.

ಆಕ್ಸಿನೋವ್ ಹೆಚ್ಚು ನಿದ್ರೆ ಮಾಡುವವನಲ್ಲ. ಬೆಳಗಿನ ತಂಪು ಹವೆಯಲ್ಲಿ ಪ್ರಯಾಣ ಮಾಡಲು ಇಚ್ಛಿಸಿ ಗಾಡಿ ಚಾಲಕನನ್ನು ಎಬ್ಬಿಸಿ, ಗಾಡಿಗೆ ಕುದುರೆ ಕಟ್ಟಲು ಹೇಳಿದ. ಹೋಟೆಲಿನ ಯಜಮಾನನನ್ನು ಪಕ್ಕದಲ್ಲಿದ್ದ ಆತನ ಮನೆಯಿಂದ ಕರೆತಂದು ಖರ್ಚು ಕೊಟ್ಟು ಪ್ರಯಾಣವನ್ನು ಮುಂದುವರಿಸಿದ.

ಸುಮಾರು ೨೫ ಮೈಲಿ ದೂರ ಪ್ರಯಾಣಿಸುತ್ತಿದ್ದಂತೆ ಗಾಡಿಯನ್ನು ನಿಲ್ಲಿಸಿ ಕುದುರೆಗಳಿಗೆ ನೀರು ಕೊಟ್ಟು, ಒಂದು ಹೋಟೆಲಿನ ಪ್ಯಾಸೇಜಿನಲ್ಲಿ ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು, ಟೀ ಮಾಡಲು ಹೇಳಿ ತನ್ನ ಗಿಟಾರ್ ತೆಗೆದು ಶ್ರುತಿಮಾಡಿ ಅದನ್ನು ನುಡಿಸಲು ಆರಂಭಿಸಿದ.

ಇದ್ದಕ್ಕಿದ್ದ ಹಾಗೆ ಒಂದು ಕುದುರೆಗಾಡಿ ಗಂಟೆಗಳ ಶಬ್ದ ಮಾಡುತ್ತ ಅದೇ ಹೋಟೆಲ್ ಬಳಿ ಬಂತು. ಒಬ್ಬ ಅಧಿಕಾರಿ ಗಾಡಿಯಿಂದ ಇಳಿದು, ಇಬ್ಬರು ಪೊಲೀಸ್ ಸಿಬ್ಬಂದಿಯೊಂದಿಗೆ ಅವನ ಬಳಿ ಬಂದು ಪ್ರಶ್ನಿಸತೊಡಗಿದ. "ಯಾರು, ಎಲ್ಲಿಂದ ಬಂದೆ" ಎಂಬ ಎಲ್ಲ ಪ್ರಶ್ನೆಗಳಿಗೆ ಆಕ್ಸಿನೋವ್ ಬಳಿ ಸೂಕ್ತ ಉತ್ತರವಿತ್ತು, "ನನ್ನ ಜೊತೆ ಚಹಾ ತೆಗೆದುಕೊಳ್ಳಿವಿರಾ?" ಎಂದು ಅಧಿಕಾರಿಯನ್ನು ಆಹ್ವಾನಿಸಿದ. ಆದರೆ ಆ ಅಧಿಕಾರಿ ಮತ್ತಷ್ಟು ಪ್ರಶ್ನೆಗಳನ್ನು ಹಾಕಿದ. "ಹಿಂದಿನ ರಾತ್ರಿ ಎಲ್ಲಿದ್ದೆ? ಒಬ್ಬನೆ ಇದ್ದೆಯೋ ಇಲ್ಲ ಯಾರಾದರೂ ಜೊತೆಯಲ್ಲಿದ್ದರಾ? ಬೆಳಿಗ್ಗೆ ಜೊತೆಗೆ ಇದ್ದ ವ್ಯಾಪ್ಯಾರಿಯನ್ನು ನೋಡಿದೆಯಾ? ಬೆಳ್ಳಂ ಬೆಳಗ್ಗೆ ಏಕೆ ಅಲ್ಲಿಂದ ಹೊರಟು ಬಂದೆ?" ಎಂಬ ಅನುಮಾನಕ್ಕೆ ಎಡೆಕೊಡುವ ಪ್ರಶ್ನೆಗಳನ್ನು ಹಾಕಿದ.

ಆಕ್ಸಿನೋವ್‌ಗೆ ಆಶ್ಚರ್ಯವಾಗಿ ಏಕಾಗಿ ಈ ಪ್ರಶ್ನೆಗಳನ್ನು ಹಾಕುತ್ತಿದ್ದಾರೆ ಎಂದು ಅರ್ಥವಾಗಲಿಲ್ಲ. ಆತ ಎಲ್ಲ ವಿವರಗಳನ್ನು ಕೊಟ್ಟು, "ಏತಕ್ಕಾಗಿ ಈ ರೀತಿ ಪ್ರಶ್ನಿಸುತ್ತಿದ್ದೀರಿ? ನಾನು ಕಳ್ಳನೂ ಅಲ್ಲ, ದರೋಡೆಕೋರನೂ ಅಲ್ಲ. ನನ್ನ

# ದೈವಲೀಲೆ ನಿಗೂಢ



ಕೂದಲು ಮಂಜಿನಂತೆ ಬಿಳುಪಾಯ್ತು, ಗಡ್ಡ ಉದ್ದವಾಗಿ ಬೆಳೆಯಿತು, ಹಿಂದಿನ ಸಂತೋಷದ ಪ್ರವೃತ್ತಿ ಇಲ್ಲವಾಯ್ತು, ಬೆನ್ನು ಬಗ್ಗಿತು, ನಡಿಗೆ ನಿಧಾನಿಸಿತು, ಮಾತು ಇಲ್ಲವಾಯ್ತು, ನಗುವು ಶೂನ್ಯವಾಯ್ತು. ಸದಾ ಧ್ಯಾನಾಸಕ್ತನಾಗಿ ಕಾಲ ಕಳೆಯುತ್ತಿದ್ದ. ಜೈಲಿನಲ್ಲಿ ಶೂ ಮಾಡುವುದನ್ನು ಕಲಿತ. ಅದರಿಂದ ಅಲ್ಪ ಆದಾಯ ಬರುತ್ತಿತ್ತು. ಆ ಹಣದಿಂದ ದೈವಭಕ್ತರ ಜೀವನ ಚರಿತ್ರೆಗಳನ್ನು ಕೊಂಡು, ಜೈಲಿನಲ್ಲಿ ಬೆಳಕು ಇದ್ದಾಗ ಓದಲು ಮೊದಲಿಟ್ಟ. ರವಿವಾರದಂದು ಜೈಲಿನ ಚರ್ಚ್‌ನಲ್ಲಿ ಆ ಪುಸ್ತಕದಿಂದ ಆಯ್ದ ಭಾಗಗಳನ್ನು ಓದುತ್ತಿದ್ದ, ತನ್ನ ಕಂಠ ಇನ್ನೂ ಮಧುರವಾಗಿತ್ತು. ಹಾಗಾಗಿ ಗಾನಗುಂಪಿನಲ್ಲಿ ಭಾಗವಹಿಸಿ ಹಾಡುತ್ತಿದ್ದ.

ವ್ಯಾಪಾರಕ್ಕಾಗಿ ಪ್ರಯಾಣಿಸುತ್ತಿರುವೆ" ಎಂದ. ಆಫೀಸರ್ ತಾನು ಆ ಜಿಲ್ಲೆಯ ಪೊಲೀಸ್ ಅಧಿಕಾರಿ ಎಂದೂ, ಕಳೆದ ರಾತ್ರಿ ಆಕ್ಸಿನೋವ್ ಇಳಿದುಕೊಂಡಿದ್ದ ಹೋಟೆಲಿನಲ್ಲಿ ಪಕ್ಕದ ಕೋಣೆಯಲ್ಲಿದ್ದ ವ್ಯಾಪಾರಿಯ ಕೊಲೆ ಆಗಿದೆ ಎನ್ನುತ್ತಾ "ನಿನ್ನ ಸಾಮಾನನ್ನು ಜಪ್ತಿ ಮಾಡಬೇಕೆಂದು" ಹೇಳಿ ಸಹಾಯಕರಿಗೆ ಆಜ್ಞಾಪಿಸಿದ. ಅವರು ಆತನ ಸಾಮಾನುಗಳನ್ನು ಹುಡುಕಿದರು. ಒಂದು ಚೀಲದಿಂದ ಒಂದು ರಕ್ತಸಿಕ್ತ ಚಾಕುವನ್ನು ಕಂಡು ಹೊರತೆಗೆದು, "ಏನಿದು ರಕ್ತಸಿಕ್ತ ಚಾಕು? ಇದು ನಿನ್ನ ಸಾಮಾನಿನಲ್ಲಿ ಹೇಗೆ ಬಂತು?" ಎಂದು ಆಶ್ಚರ್ಯಗೊಂಡು ಆಕ್ಸಿನೋವ್‌ನನ್ನು ಪ್ರಶ್ನಿಸಿದರು. ಉತ್ತರ ಹೇಳಲಾರದೆ ಭಯಗ್ರಸ್ತನಾದ ಆಕ್ಸಿನೋವ್ ತಡವರಿಸುತ್ತ "ಆ ಚಾಕು ನನ್ನದಲ್ಲ" ಎಂದು ಉತ್ತರಿಸಿದ.




ಅಧಿಕಾರಿ, "ಈ ಬೆಳಗ್ಗೆ ಆ ವ್ಯಾಪಾರಿ ಕತ್ತು ಕತ್ತರಿಸಿದ ಸ್ಥಿತಿಯಲ್ಲಿ ಹಾಸಿಗೆಯಲ್ಲಿ ಬಿದ್ದಿದ್ದ. ಹೋಟೆಲ್‌ನ ಕೋಣೆ ಒಳಗಿನಿಂದ ಬೀಗ ಹಾಕಲ್ಪಟ್ಟಿತ್ತು. ಬೇರೆ ಯಾರೂ ಹೊರಗಡೆಯಿಂದ ಬರಲು ಸಾಧ್ಯವಿರಲಿಲ್ಲ. ನೀನೊಬ್ಬನೇ ಈ ಕೃತ್ಯ ಮಾಡಿರಲಿಕ್ಕೆ ಸಾಧ್ಯ. ಹೇಳು, ಕತ್ತು ಕತ್ತರಿಸಿ ಎಷ್ಟು ಹಣ ದೋಚಿದೆ. ರಕ್ತಸಿಕ್ತ ಚಾಕು ನಿನ್ನ ಚೀಲದಲ್ಲಿ ಇತ್ತು. ಹೇಳು ಏಕೆ ಆತನನ್ನು ಕೊಂದೆ?" ಆಕ್ಸಿನೋವ್ ತಾನು ಆ ವ್ಯಾಪಾರಿಯನ್ನು ಆ ರಾತ್ರಿ ಬೀಳ್ಕೊಟ್ಟ ಮೇಲೆ ಭೇಟಿಯಾಗಿಲ್ಲವೆಂದೂ ಆ ಕೃತ್ಯವನ್ನು ಮಾಡಿಲ್ಲವೆಂದೂ, ತನ್ನಲ್ಲಿ ಸ್ವಂತ ೮ ಸಾವಿರ ರೂಬಲ್ಸ್ ಮಾತ್ರ ಇದೆಯೆಂದೂ ಪ್ರಮಾಣ ಮಾಡಿ ಹೇಳತೊಡಗಿದ, ಆದರೆ ಆತ ನಡುಗುತ್ತಿದ್ದ, ಆ ಚಾಕು ನನ್ನದಲ್ಲವೆಂದ. ಅವನ ಸ್ವರ ಕ್ಷೀಣಿಸಿತ್ತು ಮುಖ ಬಿಳಿಚಿಕೊಂಡಿತ್ತು. ಇದೆಲ್ಲವೂ ತಪ್ಪಿತಸ್ಥನ ಚಿಹ್ನೆಗಳಾಗಿ ಕಂಡವು.

ಪೊಲೀಸ್ ಅಧಿಕಾರಿ ಆತನನ್ನು ಬಂಧಿಸಿ ಸರ್ಕಾರಿಗಾಡಿಯಲ್ಲಿ ಹಾಕಲು ಆಜ್ಞೆಮಾಡಿದ. ಕೆಳ ಅಧಿಕಾರಿಗಳು ಆತನ ಕೈಕಾಲು ಕಟ್ಟಿ ಅವರ ಗಾಡಿಯಲ್ಲಿ ಹಾಕಿದರು. ಆತನ ಹಣ ಮತ್ತು ಸರಕನ್ನು ಮುಟ್ಟುಗೋಲು ಹಾಕಿಕೊಂಡರು. ಹತ್ತಿರದ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಜೈಲಿನಲ್ಲಿಟ್ಟರು. ಅವನ ಊರಿನಲ್ಲಿ ಆತನ ಬಗ್ಗೆ ವಿಚಾರಣೆ ಮಾಡಿದರು. ಅಲ್ಲಿನ ಜನ ಆತನು ಮದುವೆಗೆ ಮುಂಚೆ ಕುಡಿಯುತ್ತಿದ್ದ, ಆದರೆ ಆತನು ಒಳ್ಳೆಯ ನಡೆತೆಯವನೆಂದು ಹೇಳಿದರು. ಕೋರ್ಟಿನಲ್ಲಿ ವಿಚಾರಣೆ ನಡೆಸಿ ಈತ ವರ್ತಕನನ್ನು ಕೊಂದ ಎಂಬ ಆಪಾದನೆ ಹೊರಿಸಿದರು ಮತ್ತು ೨೦ ಸಾವಿರ ರೂಬಲ್‌ಗಳನ್ನು ದೋಚಿದನೆಂದು ಆಪಾದಿಸಿದರು.

ಆಕ್ಸಿನೋವ್‌ನ ಹೆಂಡತಿಗೆ ದಿಕ್ಕೇ ತೋಚಲಿಲ್ಲ. ಯಾವುದು ಸತ್ಯ ಎಂಬ ತೊಳಲಾಟದಲ್ಲಿ ಸಿಲುಕಿದಳು. ಮಕ್ಕಳು ತುಂಬಾ ಚಿಕ್ಕ ವಯಸ್ಸಿನವರು. ಒಂದು ಮಗುವಂತೂ ತಾಯಿಯ ಹಾಲು ಕುಡಿಯುತ್ತಿದ್ದ ಚಿಕ್ಕ ವಯಸ್ಸಿನದು. ಎಲ್ಲರನ್ನೂ ಕಟ್ಟಿಕೊಂಡು ಜೈಲಿನಲ್ಲಿದ್ದ ಗಂಡನನ್ನು ಭೇಟಿಮಾಡಲು ಪ್ರಯಾಣಿಸಿದಳು. ಭೇಟಿಮಾಡಲು ಮೊದಲು ಅವಕಾಶ ಕೊಡಲಿಲ್ಲ. ಆಕೆ ಕಾಡಿ ಬೇಡಿ ಭೇಟಿಗೆ ಅವಕಾಶ ದೊರಕಿಸಿಕೊಂಡಳು. ಕಳ್ಳಕಾಕರು ಮತ್ತು ಕೊಲೆಗಾರ ಅಪರಾಧಿಗಳ ಜೊತೆ ಜೈಲು ಬಟ್ಟೆಗಳಲ್ಲಿದ್ದ ಗಂಡನನ್ನು ಕಂಡು ಪ್ರಜ್ಞೆ ತಪ್ಪಿ ಬಿದ್ದು ಪ್ರಲಾಪಿಸಿದಳು. ಪ್ರಜ್ಞೆ ಬಂದ ನಂತರ ಮಕ್ಕಳೊಂದಿಗೆ ಗಂಡನ ಬಳಿ ಕುಳಿತು ಆದದ್ದನ್ನೆಲ್ಲಾ ಕೇಳಿದಳು. ಮನೆಯ ವಿಚಾರವನ್ನು ಆತನಿಗೆ ತಿಳಿಸಿದಳು. ತಾನು ಏನು ಮಾಡಬೇಕು ಎಂದು ಕೇಳಿದಳು. ಆತ ಏನು ಮಾಡಲು ಸಾಧ್ಯವಿದೆ ಎನ್ನುವುದನ್ನು ಹೇಳಿದ. ಚಕ್ರವರ್ತಿಗೆ ಅಪೀಲು ಮಾಡಿ ತಪ್ಪು ಮಾಡದ ತನ್ನ ಗಂಡ ಶಿಕ್ಷೆಗೆ ಗುರಿಯಾಗುವುದನ್ನು ತಪ್ಪಿಸಿ ಎಂದು ಬೇಡುವುದೊಂದೇ ದಾರಿ ಎಂದು ಹೇಳಿದ.



ಚಕ್ರವರ್ತಿಗೆ ಅಪೀಲು ಅರ್ಜಿಯನ್ನು ಹಾಕಿರುವುದಾಗಿಯೂ, ಆದರೆ ಅದನ್ನು ತಿರಸ್ಕರಿಸಲಾಗಿದೆ ಎಂದು ಹೆಂಡತಿ ತಿಳಿಸಿದಳು. ಆಕ್ಸಿನೋವ್ ಏನೂ ಹೇಳದೆ ದುಃಖದಿಂದ ತಲೆತಗ್ಗಿಸಿದ. ಆಗ ಹೆಂಡತಿ "ನನ್ನ ಕನಸು ಸುಮ್ಮನೆ ಬಿದ್ದದ್ದಲ್ಲ, ನಿನ್ನ ಕೂದಲು ಬಿಳುಪಾಗಿತ್ತು ಎಂದು ನಾನು ಹೇಳಿದ್ದು ಜ್ಞಾಪಕವಿದೆಯೇ ? ನೀನು ಅಂದು ಪ್ರಯಾಣ ಮಾಡಬಾರದಿತ್ತು" ಎಂದಳು. ಗಂಡನ ಕೂದಲಿನ ಮೇಲೆ ತನ್ನ ಕೈಬೆರಳುಗಳನ್ನು ಆಡಿಸುತ್ತ "ವನ್ಯಾ, ನಿನ್ನ ಹೆಂಡತಿಗೆ ನಿಜ ಸಂಗತಿಯನ್ನು ಹೇಳು. ಆ ಕೃತ್ಯ ಮಾಡಿದವನು ನೀನೆ ಅಲ್ಲವೆ?" ಎಂದಳು. ಆತ, "ನೀನೂ ಸಹ ನನ್ನನ್ನು ಅನುಮಾನಿಸುತ್ತೀಯಲ್ಲವೆ?" ಎಂದು ತನ್ನ ಮುಖವನ್ನು ಮುಚ್ಚಿಕೊಂಡು ಕಣ್ಣೀರು ಸುರಿಸಿದ. ಅಷ್ಟರಲ್ಲಿ ಒಬ್ಬ ಸಿಪಾಯಿ ಬಂದು "ಹೆಂಡತಿ ಮಕ್ಕಳು ಇನ್ನು ಹೊರಡಬೇಕು" ಎಂದು ಎಚ್ಚರಿಸಿದ. ಕೊನೆಯ ಬಾರಿಗೆ ಆಕ್ಸಿನೋವ್ ತನ್ನ ಹೆಂಡತಿ ಮಕ್ಕಳಿಗೆ ವಿದಾಯ ಹೇಳಿ ತನ್ನ ಹೆಂಡತಿಯೂ ಸಹ ತನ್ನನ್ನು ಅನುಮಾನಿಸಿದ್ದನ್ನು ನೆನೆಸಿಕೊಂಡು ತನಗೆ ತಾನೇ ಹೇಳಿಕೊಂಡ. "ದೇವರಿಗೆ ಮಾತ್ರ ಸತ್ಯ ತಿಳಿದಿದೆ. ಆತನಿಗೆ ಮೊರೆಹೋಗಬೇಕು. ಆತನೇ ದಯೆ ತೋರಿಸಲು ಶಕ್ತ". ಆಕ್ಸಿನೋವ್ ಮತ್ತೆ ಯಾರಿಗೂ ಅರ್ಜಿ ಸಲ್ಲಿಸಲಿಲ್ಲ. ದೇವರನ್ನಷ್ಟೇ ಪ್ರಾರ್ಥಿಸಿದ.

ಆಕ್ಸಿನೋವ್‌ಗೆ ಛಡಿ ಏಟಿನ ಶಿಕ್ಷೆ ವಿಧಿಸಲಾಯಿತು. ಆ ಶಿಕ್ಷೆಯ ನಂತರ ಗಣಿಗಳಲ್ಲಿ ದುಡಿಯಲು ಕಳುಹಿಸಲು ಆಜ್ಞೆಯಾಯಿತು. ಛಡಿ ಏಟಿನಿಂದ ಆದ ಗಾಯಗಳು ಮಾಗಿದ ನಂತರ ಇತರೆ ತನ್ನಂತೆ ಶಿಕ್ಷೆಗೆ ಒಳಪಟ್ಟವರ ಜೊತೆಯಲ್ಲಿ ಸೈಬೀರಿಯಕ್ಕೆ ರವಾನಿಸಲ್ಪಟ್ಟ. ೨೬ ವರ್ಷ ಅಲ್ಲಿ ಜೀವಿಸಬೇಕಾಯ್ತು. ಕೂದಲು ಮಂಜಿನಂತೆ ಬಿಳುಪಾಯ್ತು, ಗಡ್ಡ ಉದ್ದವಾಗಿ ಬೆಳೆಯಿತು, ಹಿಂದಿನ ಸಂತೋಷದ ಪ್ರವೃತ್ತಿ ಇಲ್ಲವಾಯ್ತು, ಬೆನ್ನು ಬಗ್ಗಿತು, ನಡಿಗೆ ನಿಧಾನಿಸಿತು, ಮಾತು ಇಲ್ಲವಾಯ್ತು, ನಗುವು ಶೂನ್ಯವಾಯ್ತು, ಸದಾ ಧ್ಯಾನಾಸಕ್ತನಾಗಿ ಕಾಲ ಕಳೆಯುತ್ತಿದ್ದ. ಜೈಲಿನಲ್ಲಿ ಶೂ ಮಾಡುವುದನ್ನು ಕಲಿತ. ಅದರಿಂದ ಅಲ್ಪ ಆದಾಯ ಬರುತ್ತಿತ್ತು. ಆ ಹಣದಿಂದ ದೈವಭಕ್ತರ ಜೀವನ ಚರಿತ್ರೆಗಳನ್ನು ಕೊಂಡು, ಜೈಲಿನಲ್ಲಿ ಬೆಳಕು ಇದ್ದಾಗ ಓದಲು ಮೊದಲಿಟ್ಟ. ರವಿವಾರದಂದು ಜೈಲಿನ ಚರ್ಚ್‌ನಲ್ಲಿ ಆ ಪುಸ್ತಕದಿಂದ ಆಯ್ದ ಭಾಗಗಳನ್ನು ಓದುತ್ತಿದ್ದ. ತನ್ನ ಕಂಠ ಇನ್ನೂ ಮಧುರವಾಗಿತ್ತು. ಹಾಗಾಗಿ ಗಾನಗುಂಪಿನಲ್ಲಿ ಭಾಗವಹಿಸಿ ಹಾಡುತ್ತಿದ್ದ. ಜೈಲಿನ ಅಧಿಕಾರಿಗಳು ಈತನ ಮೃದುನಡವಳಿಕೆಯನ್ನು ಮೆಚ್ಚಿಕೊಂಡಿದ್ದರು. ಅಲ್ಲಿದ್ದ ಖೈದಿಗಳು ಈತನನ್ನು ಗೌರವದಿಂದ ಕಾಣುತ್ತಿದ್ದರು. ಅಲ್ಲದೆ ತಾತ, ದೈವ ಭಕ್ತ ಎಂದು ಕರೆಯುತ್ತಿದ್ದರು. ಖೈದಿಗಳು ಜೈಲ್ ಅಧಿಕಾರಿಗಳಿಗೆ ಏನಾದರೂ ಮನವಿ ಸಲ್ಲಿಸಬೇಕಾದಾಗ ಈತನನ್ನು ತಮ್ಮ ಮುಂದಾಳಾಗಿ ಮಾಡಿಕೊಳ್ಳುತ್ತಿದ್ದರು. ಖೈದಿಗಳಲ್ಲಿ ಯಾವಾಗಲಾದರೂ ಜಗಳ, ತಂಟೆ ತಕರಾರಾದಾಗ ಆಕ್ಸಿನೋವ್‌ನ ಹತ್ತಿರ ಬಂದು ವೈಮನಸ್ಸನ್ನು ತಿದ್ದಿ ಸರಿಪಡಿಸಲು ಕೋರುತ್ತಿದ್ದರು. ಆತನ ನಿರ್ಧಾರವನ್ನು ಗೌರವಿಸುತ್ತಿದ್ದರು. ಮನೆಯಿಂದ ಯಾವ ವರ್ತಮಾನವೂ ಬರುತ್ತಿರಲಿಲ್ಲ. ಹೆಂಡತಿ ಮಕ್ಕಳು ಬದುಕಿರುವರೋ ಇಲ್ಲವೋ ಎನ್ನುವುದು ತಿಳಿಯಲಿಲ್ಲ.

ಒಂದು ದಿನ ಖೈದಿಗಳ ಹೊಸ ಗುಂಪು ಇದೇ ಜೈಲಿಗೆ ಆಗಮಿಸಿತು. ಹಳೆ ಖೈದಿಗಳು ಹೊಸಬರನ್ನು ಆ ಸಂಜೆ ಭೇಟಿ ಮಾಡಿ ಯಾವ ಊರಿನವರು ಮತ್ತು ಯಾವ ತಪ್ಪಿಗಾಗಿ ಈ ಶಿಕ್ಷೆಗೆ ಒಳಪಟ್ಟರು ಎಂದು ವಿಚಾರಿಸಿದರು. ಆಕ್ಸಿನೋವ್ ಕೂಡ ಇತರರ ಜೊತೆಗೆ ಒಂದು ಕಡೆ ಕುಳಿತು ಹೊಸಬರು ಹೇಳಿದುದನ್ನು ಕೇಳುತ್ತಿದ್ದ. ಒಬ್ಬ ದೃಢಕಾಯದ, ಎತ್ತರ ಸುಮಾರು ೬೦ ವರ್ಷದ ಖೈದಿ ತನ್ನ ಕತ್ತರಿಸಿದ ಬಿಳಿ ಗಡ್ಡವನ್ನು ಸವರುತ್ತ ಯಾವ ತಪ್ಪಿಗಾಗಿ ತನಗೆ ಶಿಕ್ಷೆ ಆಯಿತು ಎನ್ನುವುದನ್ನು ವಿವರಿಸುತ್ತಿದ್ದ. ಆತ, "ಸ್ನೇಹಿತರೆ, ನಾನು ನೊಗಕ್ಕೆ ಕಟ್ಟಿದ್ದ ಒಂದು ಕುದುರೆಯನ್ನು ಕದ್ದೆ ಎಂದು ನನ್ನನ್ನು ಬಂಧಿಸಿದರು. ನಾನು ಬೇಗ ಮನೆ ಸೇರಲು ಕುದುರೆಯನ್ನು ತೆಗೆದುಕೊಂಡಿದ್ದೆ. ಆನಂತರ ಅದನ್ನು ಬಿಟ್ಟುಬಿಟ್ಟೆ ಎಂದು ಹೇಳಿದೆ. ಅಲ್ಲದೆ ಆ ಕುದುರೆಯ ಮಾಲೀಕ ನನ್ನ ಸ್ನೇಹಿತ. ಇದರಲ್ಲಿ ತಪ್ಪೇನಿದೆ" ಎಂದೆ. ಆದರೆ ಅಧಿಕಾರಿಗಳು "ಇಲ್ಲ, ನೀನು ಅದನ್ನು ಕದ್ದೆ" ಎಂದರು. ಆದರೆ ಕುದುರೆಯನ್ನು ಎಲ್ಲಿ ಹೇಗೆ ಕದ್ದೆ ಎಂದು ಅವರು ಹೇಳಲಿಲ್ಲ. "ನಾನು ಹಿಂದೊಮ್ಮೆ ನಿಜಕ್ಕೂ ದೊಡ್ಡ ತಪ್ಪು ಮಾಡಿದ್ದೆ. ಆಗ ನನ್ನನ್ನು ಅವರು ಹಿಡಿಯಲಾಗಲಿಲ್ಲ. ಇಲ್ಲಿಗೆ ಕಳುಹಿಸಿರುವುದು ಸಣ್ಣ ತಪ್ಪಿಗಾಗಿ. ದೊಡ್ಡ ತಪ್ಪಿಗಾಗಿ ಹಿಂದೆಯೇ ನಾನು ಇಲ್ಲಿಗೆ ಬರಬೇಕಾಗಿತ್ತು. ಆಗ ನಾನು ತಪ್ಪಿಸಿಕೊಂಡೆ. ನಾನು ಹೇಳುತ್ತಿರುವುದು ಬರೀ ಸುಳ್ಳು. ಹಿಂದೆ ಒಮ್ಮೆ ಇಲ್ಲಿಗೆ ಬಂದಿದ್ದೆ. ಆದರೆ ಬಹಳ ದಿನ ಇರಲಿಲ್ಲ" ಎಂದ.

"ನೀನು ಯಾವ ಕಡೆಯವನು?" ಎಂದು ಒಬ್ಬ ಕೇಳಿದ. "ನಾನು ವ್ಲಾದಿಮೀರ್ ನಗರದವನು. ನನ್ನ ಸಂಸಾರ ಅಲ್ಲಿದೆ. ನನ್ನ ಹೆಸರು ಮಾಕಾರ್. ನನ್ನನ್ನು ಸೆಮ್ಯೊನಿಚ್ ಎಂದೂ ಕರೆಯುತ್ತಾರೆ" ಎಂದು ಉತ್ತರಿಸಿದ. ಆಕ್ಸಿನೋವ್ ತಲೆ ಎತ್ತಿ "ಸೆಮ್ಯೊನಿಚ್, ನಿನಗೆ ವ್ಲಾದಿಮೀರ್‌ನ ವ್ಯಾಪಾರಿಗಳಾದ ಆಕ್ಸಿನೋವ್ ಅವರ ಬಗ್ಗೆ ಏನಾದರೂ ತಿಳಿದಿದೆಯೆ? ಅವರು ಜೀವಂತವಾಗಿರುವರೆ ?" ಎಂದ. "ಗೊತ್ತಿದೆಯೆ ಎಂದೆಯಾ ? ಓ, ಗೊತ್ತು. ತುಂಬ ಹಣವಂತರು ಆ ಮನೆಯ ಯಜಮಾನ ಸೈಬೀರಿಯದಲ್ಲಿದ್ದಾನೆ ಎಂದು ತಿಳಿದಿದ್ದೆ. ನಮ್ಮಂತೆಯೇ ಆತನೂ ಪಾಪ ಎಸಗಿದವನಾಗಿರಬಹುದು. ಹಿರಿಯರೇ, ನೀವು ಇಲ್ಲಿಗೆ ಹೇಗೆ ಬಂದಿರಿ?" ಎಂದು ಕೇಳಿದರು.

ಆಕ್ಸಿನೋವ್ ತನ್ನ ದುರದೃಷ್ಟದ ಬಗ್ಗೆ ಮಾತನಾಡಲು ಇಷ್ಟಪಡಲಿಲ್ಲ. ನಿಟ್ಟುಸಿರು ಬಿಟ್ಟು ಹೇಳಿದ. "ನನ್ನ ಪಾಪ ಕೃತ್ಯಕ್ಕಾಗಿ ೨೬ ವರ್ಷಗಳಿಂದ ಇಲ್ಲಿದ್ದೇನೆ." ಅದೇನು ಪಾಪಕೃತ್ಯ ಎಂದು ಮಾಕಾರ್ ಕೇಳಿದ. ಆಕ್ಸಿನೋವ್ ಹೇಳಿದ : "ಇದು ನಾನು ಮಾಡಿದ ಕೃತ್ಯಕ್ಕೆ ಸರಿಯಾದ ಶಿಕ್ಷೆಯೇ ಇರಬಹುದು." ನಂತರ ಹೆಚ್ಚು ಹೇಳಲು ಇಚ್ಛಿಸಲಿಲ್ಲ. ಆದರೆ ವಿಷಯ ತಿಳಿದಿದ್ದ ಖೈದಿಗಳು ಹೊಸಬನಿಗೆ ಆ ಹಿರಿಯ ಜೀವಿ ಹೇಗೆ ಸೈಬೀರಿಯಾಕ್ಕೆ ಬಂದ ಎಂಬುದನ್ನು ತಿಳಿಸಿದರು. ಬೇರೆ ಯಾರೋ ಒಬ್ಬ ವ್ಯಾಪಾರಿಯನ್ನು ಕೊಂದು ಚಾಕುವನ್ನು ಇವರ ಸಾಮಾನಿನ ಜೊತೆಯಲ್ಲಿದ್ದ ಚೀಲದಲ್ಲಿ ಇಟ್ಟುಹೋಗಿದ್ದು, ಅದರಿಂದಾಗಿ ಅನ್ಯಾಯವಾಗಿ ಈ ವ್ಯಕ್ತಿ ಶಿಕ್ಷೆಗೆ ಒಳಗಾಗಿ ಸೈಬೀರಿಯಕ್ಕೆ ಬಂದ ವಿಷಯವನ್ನು ಹೇಳಿದರು. ಮಾಕಾರ್ ಸೆಮ್ಯೊನಿಚ್ ಇದನ್ನು ಕೇಳಿ ತನ್ನ ಮೊಣಕಾಲನ್ನು ತಟ್ಟುತ್ತಾ, "ಇದು ಆಶ್ಚರ್ಯ, ನಿಜಕ್ಕೂ ತುಂಬ ಆಶ್ಚರ್ಯ. ಹಿರಿಯರೇ, ಎಷ್ಟು ವಯಸ್ಸಾದವರಂತೆ ಕಾಣುತ್ತೀರಿ?" ಎಂದು ಆಶ್ಚರ್ಯಪಟ್ಟ. ಬೇರೆಯವರು ಅವನನ್ನು ಅದೇಕೆ ಅಷ್ಟು ಆಶ್ಚರ್ಯಪಡುತ್ತಿರುವೆ ಎನ್ನುತ್ತ ಎಲ್ಲಿ ಆಕ್ಸಿನೋವ್‌ಅನ್ನು ನೋಡಿದ್ದೆ ಎಂದು ಪ್ರಶ್ನಿಸಿದರು. ಮಾಕಾರ್ ಸೆಮ್ಯೊನಿಚ್ ಅದಕ್ಕೆ ಉತ್ತರಿಸದೆ, "ಇದು ನಿಜಕ್ಕೂ ಆಶ್ಚರ್ಯ ತರುವ ವಿಷಯವೆ. ನಾವು ಇಲ್ಲಿ ಭೇಟಿಯಾಗುತ್ತಿರುವುದು" ಎಂದ. ಈ ಮಾತುಗಳನ್ನು ಕೇಳಿದ ಮೇಲೆ ಆಕ್ಸಿನೋವ್‌ಗೆ "ಈತನಿಗೆ ಆ ವ್ಯಾಪಾರಿಯನ್ನು ಯಾರು ಕೊಂದರು ಎನ್ನುವುದು ತಿಳಿದಿರಬಹುದು" ಎನಿಸಿತು. ಮತ್ತೆ ಆತ ಹೇಳಿದ: "ಸೆಮ್ಯೊನಿಚ್, ಬಹುಶಃ ನೀನು ಆ ವಿಷಯದ ಬಗ್ಗೆ ಕೇಳಿರಬಹುದು ಅಥವಾ ನನ್ನನ್ನು ಹಿಂದೆ ನೋಡಿರಬಹುದು." ಇದಕ್ಕೆ ಹೊಸ ಖೈದಿ, "ನಾನು ಕೇಳದೆ ಇರಲು ಹೇಗೆ ಸಾಧ್ಯ? ಪ್ರಪಂಚದಲ್ಲಿ ತುಂಬಾ ಸುದ್ದಿಗಳು ಇರುತ್ತವೆ. ಅದೆಲ್ಲಾ ಬಹಳ ಹಿಂದಿನ ಸಂಗತಿ. ಏನು ಎನ್ನುವುದು ಮರೆತಿದ್ದೇನೆ" ಎಂದ.

ಆಕ್ಸಿನೋವ್ ಮತ್ತೆ ಕೇಳಿದ: "ಆ ವ್ಯಾಪಾರಿಯನ್ನು ಯಾರು ಕೊಂದರು ಎನ್ನುವುದನ್ನು ಕೇಳಿದೆಯೇ?" ಮಾಕಾರ್ ಸೆಮ್ಯೊನಿಚ್ ನಕ್ಕು ಉತ್ತರಿಸಿದ : "ಯಾರ ಚೀಲದಲ್ಲಿ ಚಾಕು ಸಿಕ್ಕಿತೊ 'ಆತನೆ' ಇರಬಹುದು. ಇನ್ನಾರೋ ಕೊಂದು ಚಾಕುವನ್ನು ಬೇರೆಯವರ ಚೀಲದಲ್ಲಿ ಇಟ್ಟು ಪರಾರಿ ಆಗಿದ್ದರೂ, ಆತ ಸಿಗುವವರೆವಿಗೂ ಆತ



ಕೊಲೆಗಡುಕನಲ್ಲ ಎನ್ನುವುದು ಸಾಮಾನ್ಯ ನಂಬಿಕೆ. ನಿನ್ನ ತಲೆಯ ಕೆಳಗೆ ಇದ್ದ ಚೀಲದಲ್ಲಿ ಬೇರೆ ಯಾರು ಚಾಕುವನ್ನು ಇಡಲು ಸಾಧ್ಯ? ಹಾಗೆ ಆಗಿದ್ದರೆ ನಿನಗೆ ಎಚ್ಚರವಾಗುತ್ತಲಿತ್ತು" ಎಂದ.

ಈ ಮಾತನ್ನು ಕೇಳಿದ ಮೇಲೆ ಆಕ್ಸಿನೋವ್‌ಗೆ ಹೊಸಬನೇ ಕೊಲೆ ಮಾಡಿದವನು ಎಂಬುದು ಖಚಿತವಾಯಿತು. ಎದ್ದು ಹೋದ. ಆ ರಾತ್ರಿಯೆಲ್ಲಾ ನಿದ್ರೆ ಮಾಡಲಾಗಲಿಲ್ಲ.

ಆಕ್ಸಿನೋವ್‌ಗೆ ತುಂಬ ನೋವಾಯಿತು. ಹಿಂದಿನ ಜೀವನದ ಆಗುಹೋಗುಗಳೂ ಕಣ್ಣಿಗೆ ಕಟ್ಟಿದಂತೆ ಹೊಳೆದವು. ಒಂದೊಂದೂ ಚಿತ್ರಪಟದಂತೆ ಮರುಕಳಿಸಿದವು. ತನ್ನ ಹೆಂಡತಿ ಮಕ್ಕಳು ಕಣ್ಮುಂದೆ ಸುಳಿದರು. ಕಳೆದ ಸಂತೋಷದ ಜೀವನ ಹೆಂಡತಿಯೊಡನೆ ಕಳೆದ ದಿನಗಳು, ಒಂದು ಮಗು ಹಾಕುತ್ತಿದ್ದ ಬಟ್ಟೆ ಬರೆ, ಇನ್ನೊಂದು ಎಳೆಯ ಮಗು ತಾಯಿಯ ಬಳಿ ಹಾಲು ಉಣ್ಣುತ್ತಿದ್ದ ದೃಶ್ಯ, ತಾನು ಸಂತೋಷದಿಂದ ಗಿಟಾರ್ ನುಡಿಸುತ್ತಿದ್ದುದು, ಸಂತೆಗೆ ಹೊರಟ ದಿನ ಹೆಂಡತಿಗೆ ವಿದಾಯ ಹೇಳಿದ್ದು, ಎಲ್ಲವೂ ಜ್ಞಾಪಕಕ್ಕೆ ಬಂದು ಸಂಕಟಪಟ್ಟ. ತನ್ನನ್ನು ಬಂಧಿಸಿ, ಜೈಲಿಗೆ ಕರೆದುಕೊಂಡುಹೋಗಿ ಇತರೆ ಖೈದಿಗಳ ಎದುರು ಛಡಿ ಏಟು ಕೊಟ್ಟಿದ್ದು, ಅದರಿಂದ ಆದ ಯಾತನೆ, ಎಲ್ಲವೂ ಕಣ್ಮುಂದೆ ಮರುಕಳಿಸಿ ಪ್ರಾಣತ್ಯಾಗ ಮಾಡುವಷ್ಟು ನೋವನ್ನು ಅನುಭವಿಸಿದ. ಇದೆಲ್ಲಕ್ಕೆ ಕಾರಣಕರ್ತನಾದ ಮಾಕಾರ್ ಮೇಲೆ ಸೇಡು ತೀರಿಸಿಕೊಳ್ಳುವ ಮನಸ್ಸಾಯಿತು. ರಾತ್ರಿಯೆಲ್ಲಾ ಧ್ಯಾನಮಾಡುತ್ತ ಸಮಯ ಕಳೆದ. ಮರು ದಿನ ಮಾಕಾರ್ ಬಳಿ ಸುಳಿಯಲಿಲ್ಲ. ಅವನ ಮುಖ ದರ್ಶನವನ್ನೂ ಮಾಡಲಿಲ್ಲ.

ಈ ರೀತಿಯ ಮಾನಸಿಕ ತುಮುಲಕ್ಕೆ ಸಿಕ್ಕಿ ೧೫ ದಿನ ಕಳೆಯಿತು. ಏನು ಮಾಡಲೂ ತೋಚಲಿಲ್ಲ.

ಒಂದು ರಾತ್ರಿ ಜೈಲಿನಲ್ಲಿ ಓಡಾಡುತ್ತಿರುವಾಗ ಖೈದಿಗಳು ಮಲಗುವ ಶೆಲ್ಫ್ ಕೆಳಗಡೆಯಿಂದ ಮಣ್ಣು ಬರುತ್ತಿದ್ದುದನ್ನು ಗಮನಿಸಿ ಅದೇನು ಎಂದು ನಿಂತು ಪರಿಶೀಲಿಸಿದ. ಶೆಲ್ಫ್‌ನ ಅಡಿಯಿಂದ ಮಾಕಾರ್ ನುಸುಳಿ ಹೊರಬಂದ. ಹೆದರಿ

ಆಕ್ಸಿನೋವ್ ಅಲ್ಲಿಂದ ನಿರ್ಗಮಿಸುವುದನ್ನು ಕಂಡ. ಆತನ ಕೈಹಿಡಿದು ನಿಲ್ಲಿಸಿ ತಾನು ಪ್ರತೀ ರಾತ್ರಿ ಈ ರೀತಿ ಭೂಮಿಯನ್ನು ಕೊರೆದು ಮಣ್ಣನ್ನು ಬೂಟುಗಳಲ್ಲಿ ತುಂಬಿ ಮರುದಿನ ಬೆಳಗ್ಗೆ ಖೈದಿಗಳನ್ನು ಕೆಲಸಕ್ಕೆ ಕರೆದಾಗ ಅದನ್ನು ಹೊರಗೆ ಹಾಕುತ್ತಿರುವುದಾಗಿ ಹೇಳಿದ. "ಏ ಮುದುಕ, ನೀನು ಬಾಯಿ ಮುಚ್ಚಿಕೊಂಡಿರು. ನೀನೂ ತಪ್ಪಿಸಿಕೊಂಡು ಹೋಗುವೆಯಂತೆ. ನೀನು ಬಾಯಿ ಬಿಟ್ಟರೆ ನನ್ನನ್ನು ಛಡಿ ಏಟಿನಿಂದ ಸಾಯಿಸುತ್ತಾರೆ. ನೀನು ಬಾಯಿ ಬಿಟ್ಟರೆ ನಿನ್ನನ್ನು ಮೊದಲು ಕೊಲ್ಲುತ್ತೇನೆ" ಎಂದು ಬೆದರಿಸಿದ.



ಆಕ್ಸಿನೋವ್ ಸಿಟ್ಟಿನಿಂದ ಕಂಪಿಸಿ ತನ್ನ ಶತ್ರುವನ್ನು ನೋಡಿ ಕೊಸರಿ ತನ್ನ ಕೈ ಬಿಡಿಸಿಕೊಂಡು, "ನಾನು ತಪ್ಪಿಸಿಕೊಂಡು ಹೋಗಲು ಇಷ್ಟವಿಲ್ಲ. ನೀನು ನನ್ನನ್ನು ಕೊಲ್ಲಬೇಕಾಗಿಲ್ಲ. ಬಹಳ ಹಿಂದೆಯೇ ನನ್ನನ್ನು ಕೊಂದಿದ್ದೀಯೆ. ನಿನ್ನ ಮೇಲೆ ದೂರು ಕೊಡುವ ಬಗ್ಗೆ ದೇವರು ದಾರಿ ತೋರಿದಂತೆ ನಡೆಯುತ್ತೇನೆ" ಎಂದು ಹೇಳಿ ಅಲ್ಲಿಂದ ಹೊರಟ.

ಮರುದಿನ ಖೈದಿಗಳನ್ನು ಕೆಲಸಕ್ಕೆ ಕರೆದುಕೊಂಡು ಹೋದಾಗ ಸೈನಿಕರು ಖೈದಿಗಳಲ್ಲಿ ಯಾರೋ ತನ್ನ ಬೂಟ್‌ನಲ್ಲಿ ತುಂಬಿ ತಂದು ಮಣ್ಣನ್ನು ಹೊರಹಾಕುತ್ತಿರುವುದನ್ನು ಗಮನಿಸಿದರು. ಜೈಲಿನಲ್ಲಿ ಹುಡುಕಿದಾಗ ಭೂಮಿಯನ್ನು ಕೊರೆಯುತ್ತಿರುವುದನ್ನು ಪತ್ತೆ ಹಚ್ಚಿದರು. ಗವರ್ನರ್ ಬಂದು ವಿಚಾರಣೆ ಮಾಡಿದರು. "ಯಾರು ಈ ರೀತಿ ಮಾಡಿದವರು" ಎಂದು ಎಲ್ಲರನ್ನೂ ಪ್ರಶ್ನಿಸಿದರು. ಎಲ್ಲರೂ ತಮಗೆ ತಿಳಿಯದು ಎಂದು ಹೇಳಿದರು. ತಿಳಿದಿದ್ದವರು ಮಾಕಾರ್‌ನನ್ನು ಬಿಟ್ಟುಕೊಡಲಿಲ್ಲ. ಕೊನೆಗೆ, ಗವರ್ನರ್ ಆಕ್ಸಿನೋವ್ ಕಡೆ ತಿರುಗಿ, ಆತನ ನ್ಯಾಯಪರತೆಯ ಬಗ್ಗೆ ತಿಳಿದಿದ್ದರಿಂದ "ನೀನು ಸತ್ಯ ಸಂಧನಾದ ಹಿರಿಯ, ದೇವರ ಮುಂದೆ ಸತ್ಯವನ್ನು ಹೇಳು. ಯಾರು ಈ ಕೆಲಸ ಮಾಡಿದವರು?" ಎಂದು ಕೇಳಿದರು. ಮಾಕಾರ್ ಏನೂ ತಿಳಿಯದವನಂತೆ ಗವರ್ನರ್ ಕಡೆ ಹಾಗೂ ಆಕ್ಸಿನೋವ್ ಕಡೆ ನೋಡಿದ. ಆಕ್ಸಿನೋವ್ ಕೆಲವು ಕ್ಷಣ ನಡುಗಿ ಏನೂ ಮಾತನಾಡಲಿಲ್ಲ. ಯೋಚನೆಗೆ ಒಳಗಾದ. "ನಾನು ಇವನನ್ನು ಏಕೆ ರಕ್ಷಿಸಬೇಕು. ಅವನ ತಪ್ಪಿಗೆ ತಕ್ಕ ಶಿಕ್ಷೆ ಅನುಭವಿಸಲಿ. ನನ್ನ ಎಲ್ಲ ಕಷ್ಟಗಳಿಗೆ ಇವನೇ ಕಾರಣ. ನಾನು ಸತ್ಯ ಹೇಳಿದರೆ ಅವನನ್ನು ಛಡಿ ಏಟಿನಿಂದ ಸಾಯಿಸುತ್ತಾರೆ. ಬಹುಶಃ ವ್ಯಾಪಾರಿಯನ್ನು ಕೊಂದವನು ಇವನೇ ಎಂದು ತಪ್ಪು ಗ್ರಹಿಸಿರಬಹುದು. ಸತ್ಯ ಹೇಳುವುದರಿಂದ ನನಗೆ ಬರುವ ಭಾಗ್ಯವೇನು?" ಎಂದುಕೊಂಡ.

ಗವರ್ನರ್ ಮತ್ತೆ ಕೇಳಿದ : "ಹಿರಿಯ, ಸತ್ಯವನ್ನು ಹೇಳು. ಯಾರು ಗೋಡೆಯ ಕೆಳಗೆ ಕೊರೆದವರು?" ಆಕ್ಸಿನೋವ್ ಒಮ್ಮೆ ಮಾಕಾರ್ ಕಡೆ ದೃಷ್ಟಿಸಿ ಹೇಳಿದ. "ಪ್ರಭುಗಳೇ ನಾನು ಏನೂ ಹೇಳಲಾರೆ, ದೇವರ ಇಚ್ಛೆ ನಾನು ಸತ್ಯ ನುಡಿಯಬಾರದು ಎಂಬುದಾಗಿದೆ. ನನ್ನನ್ನು ಏನು ಬೇಕಾದರೂ ಮಾಡಿ. ನಿಮ್ಮ ಕೈಯಲ್ಲಿದ್ದೇನೆ" ಎಂದ. ಗವರ್ನರ್ ಎಷ್ಟೇ ಪ್ರಶ್ನಿಸಿದರೂ ಆಕ್ಸಿನೋವ್ ಮೌನದಿಂದಿದ್ದ. ಆ ವಿಷಯ ಅಲ್ಲಿಗೇ ಮುಕ್ತಾಯಗೊಂಡಿತು.

ಆ ರಾತ್ರಿ ಆಕ್ಸಿನೋವ್ ತನ್ನ ಹಾಸಿಗೆ ಮೇಲೆ ಮಲಗಿ ನಿದ್ರೆಗೆ ಜಾರುತ್ತಿರುವಾಗ ಒಬ್ಬರು ಬಂದು ಸದ್ದಿಲ್ಲದೆ ಹಾಸಿಗೆಯ ಮೇಲೆ ಕುಳಿತರು. ಕತ್ತಲಲ್ಲಿ ಕಣ್ಣು ಹಾಯಿಸಿ ನೋಡಿ ಬಂದವನು ಮಾಕಾರ್ ಎಂದು ಗುರುತಿಸಿದ. "ನನ್ನಿಂದ ಇನ್ನೇನಾಗಬೇಕು. ಇಲ್ಲಿಗೇಕೆ ಬಂದೆ" ಎಂದು ಕೇಳಿದ. ಮಾಕಾರ್ ಮಾತನಾಡದೆ ಸುಮ್ಮನಿದ್ದ. ಆಕ್ಸಿನೋವ್ ಎದ್ದು ಕುಳಿತು, "ಏನು ಬೇಕು? ಹೋಗು ಇಲ್ಲಿಂದ ಇಲ್ಲವೇ ಗಾರ್ಡ್‌ನನ್ನು ಕರೆಯುತ್ತೇನೆ" ಎಂದ. ಮಾಕಾರ್ ಆಕ್ಸಿನೋವ್‌ನತ್ತಲೇ ಬಾಗಿ "ಐವಾನ್, ನನ್ನನ್ನು ಕ್ಷಮಿಸು" ಎಂದು ಅಂಗಲಾಚಿದ. 'ಏಕೆ' ಎಂದ ಆಕ್ಸಿನೋವ್. ಅವ ಹೇಳಿದ, "ನಾನೆ ಆ ವ್ಯಾಪಾರಿಯನ್ನು ಕೊಂದಿದ್ದು ಮತ್ತು ಚಾಕುವನ್ನು ನಿನ್ನ ಸಾಮಾನಿನಲ್ಲಿ ಹುದುಗಿಸಿಟ್ಟಿದ್ದು. ನಿನ್ನನ್ನು ಕೊಲ್ಲಲೂ ಬಂದಿದ್ದೆ. ಹೊರಗಡೆ ಶಬ್ದ ಕೇಳಿಸಿತು. ಚಾಕುವನ್ನು ನಿನ್ನ ಚೀಲದಲ್ಲಿಟ್ಟು ಕಿಟಕಿ ಮೂಲಕ ತಪ್ಪಿಸಿಕೊಂಡೆ."

ಆಕ್ಸಿನೋವ್ ಏನು ಹೇಳಲೂ ತೋಚದೆ ಸುಮ್ಮನಿದ್ದ. ಮಾಕಾರ್ ಹಾಸಿಗೆಯಿಂದ ಜಾರಿ ನೆಲದ ಮೇಲೆ ಬಗ್ಗಿ "ಐವಾನ್, ನನ್ನನ್ನು ಕ್ಷಮಿಸು, ದೈವ ಕೃಪೆಗಾಗಿ ಕ್ಷಮಿಸು, ನಾನೇ ಆ ವ್ಯಾಪಾರಿಯನ್ನು ಕೊಂದಿದ್ದು ಎಂದು ಒಪ್ಪಿಕೊಳ್ಳುತ್ತೇನೆ. ನಿನ್ನನ್ನು ಬಿಡುಗಡೆ ಮಾಡುತ್ತಾರೆ. ನೀನು ಮತ್ತೆ ಮನೆಗೆ ಹೋಗಬಹುದು" ಎಂದ. "ಆ ರೀತಿ ಮಾತನಾಡುವುದು ನಿನಗೆ ಈಗ ಸುಲಭ. ನಿನ್ನಿಂದಾಗಿ ಕಳೆದ ೨೬ ವರ್ಷ ಸಾಕಷ್ಟು ಕಷ್ಟ ಅನುಭವಿಸಿದ್ದೇನೆ. ನಾನು ಈಗ ಎಲ್ಲಿಗೆ ಹೋಗಲಿ, ನನ್ನ ಮಡದಿ ತೀರಿಕೊಂಡಿದ್ದಾಳೆ. ಮಕ್ಕಳು ನನ್ನನ್ನು ಮರೆತಿದ್ದಾರೆ. ನಾನು ಎಲ್ಲಿಗೆ ಹೋಗಲಿ" ಎಂದು ನಿಸ್ಸಹಾಯಕನಾಗಿ ನುಡಿದ ಆಕ್ಸಿನೋವ್. ಮಾಕಾರ್ ಏಳದೆ ತಲೆಯನ್ನು ನೆಲದ ಮೇಲೆ ಚಚ್ಚುತ್ತಾ, "ನನ್ನನ್ನು ಕ್ಷಮಿಸು ಐವಾನ್, ನನ್ನನ್ನು ಚಾಟಿಯಿಂದ ಹೊಡೆದಾಗಲೂ ನಿನ್ನನ್ನು ನೋಡಿದಾಗ ಆದಷ್ಟು ನೋವು ಕಾಣಿಸಲಿಲ್ಲ. ನನ್ನ ಮೇಲೆ ಎಂಥ ಕನಿಕರ ತೋರಿಸಿದೆ. ನೀನು ನನ್ನನ್ನು ಬಿಟ್ಟುಕೊಡಲಿಲ್ಲ. ಕ್ರಿಸ್ತನಿಗಾಗಿ ನನ್ನನ್ನು ಕ್ಷಮಿಸು" ಎಂದು ಗೋಳಾಡಿದ. ಆಕ್ಸಿನೋವ್‌ಗೂ ಅಳು ಬಂತು. "ನಿನಗಿಂತ ನೂರು ಬಾರಿ ನಾನು ಕೆಟ್ಟವನಿರಬಹುದು" ಎಂದ ಆಕ್ಸಿನೋವ್. ಆ ಮಾತು ತನ್ನ ಬಾಯಿಂದ ಹೊರಬಿದ್ದ ನಂತರ ತನ್ನ ಹೃದಯದ ಭಾರ ಕಡಿಮೆಯಾಯಿತು. ಮನೆಗೆ ಹಿಂತಿರುಗುವ ಆಸೆ ಇಲ್ಲವಾಯಿತು. ಜೈಲಿನಿಂದ ಹೊರಹೋಗುವ ಆಸೆ ಸಂಪೂರ್ಣ ಇಲ್ಲವಾಯಿತು. ಅಲ್ಲೇ ತನ್ನ ಅಂತ್ಯವನ್ನು ಕಾಣುವ ನಿರ್ಧಾರ ಬಲವಾಯಿತು. ಮಾಕಾರ್ ತನ್ನ ತಪ್ಪನ್ನು ಒಪ್ಪಿಕೊಂಡ. ಆಕ್ಸಿನೋವ್ ಬಿಡುಗಡೆಯ ನಿರ್ಧಾರ ಬರುವಷ್ಟರಲ್ಲಿ ಆ ಹಿರಿಯ ಜೀವ ಇಲ್ಲವಾಗಿತ್ತು.

ಮೂಲ : **ಲಿಯೋ ಟಾಲ್‌ಸ್ಟಾಯ್** ಅನುವಾದ : **ಪ್ರೊ॥ ಬಿ. ಕೆ. ಹನುಮಂತಯ್ಯ**
ನಂ. ೯೮, ೧೭ನೇ ಮುಖ್ಯರಸ್ತೆ, ಬಿಎಸ್‌ಕೆ ಮೊದಲನೆ ಹಂತ
ಬೆಂಗಳೂರು – ೫೬೦ ೦೫೦



## ರಾಮ ಮಂದಿರವನು ಕಟ್ಟಿ ಬಿಡಿ, ಕಟ್ಟಿ ಬಿಡಿ ಕಟ್ಟೇ ಬಿಡಿ

**ಕ**ಲಿಯುಗ
ದ್ವಾಪರವಾಗುವುದೆಂದಾದರೆ
ರಾಮ ಮಂದಿರವನು
ಕಟ್ಟಿ ಬಿಡಿ, ಕಟ್ಟಿ ಬಿಡಿ
ಕಟ್ಟೇ ಬಿಡಿ

ರೈತರ ಆತ್ಮಹತ್ಯೆಗಳು
ನಿಲ್ಲುವುದೆಂದಾದರೆ

ಏರುತ್ತಿರುವ ಬೆಲೆಗಳು
ಇಳಿಯುವುದೆಂದಾದರೆ

ನಿರುದ್ಯೋಗ ಸಮಸ್ಯೆ
ಪರಿಹಾರವಾಗುವುದೆಂದಾದರೆ

ಲಂಚ ರುಸುವತ್ತು
ಕೊನೆಯಾಗುವುದೆಂದಾದರೆ

ಮತಾಂಧತೆ
ತೊಲಗುವುದೆಂದಾದರೆ

ವೇಶ್ಯಾವಾಟಿಕೆ
ನಿಲ್ಲುವುದೆಂದಾದರೆ

ಆರ್ಥಿಕ ಸಮಾನತೆ
ಸಾಧ್ಯವಾಗುವುದೆಂದಾದರೆ
ರಾಮಮಂದಿರವನು
ಕಟ್ಟಿ ಬಿಡಿ, ಕಟ್ಟಿ ಬಿಡಿ
ಕಟ್ಟೇ ಬಿಡಿ

**ಎಸ್. ಸುರೇಂದ್ರ**
ನಂ. ೨೪, ೧೧ನೇ ಅಡ್ಡರಸ್ತೆ
ಕೆನರಾ ಬ್ಯಾಂಕ್ ಕಾಲನಿ
ಜಯನಗರ ಪೂರ್ವ
ಬೆಂಗಳೂರು – ೫೬೦ ೦೧೧

'ಭಾಗೀಚಿಕ್ಕಿ', ಭಾಗೀಚಿಕ್ಕಿಯ ಹೋರಾಟದ ಕಥೆ. ಈ ಹೋರಾಟ ಅವಳಗಾಗಿಯಲ್ಲ. ಉಪ್ಪುಂಡ ಮನೆಗೂ ಎಂಬುದು ಗಮನಾರ್ಹ. ಹೆಣ್ಣಾಗಿ ಹೆಣ್ಣಿನ ರಕ್ಷಣೆಗಾಗಿ ನಿಲ್ಲುತ್ತಾಳೆ. ಭಾಗೀಚಿಕ್ಕಿಯದು ಗಯ್ಯಾಳಿತನವಲ್ಲ. ಅದು ತನ್ನತನದ್ದು. ಇದಿರ ಒಳಿತಿಗಾದದ್ದು. ಸಾಚಾತನದ ಹೆಣ್ಣು ತನ್ನ ಗಟ್ಟಿತನವನ್ನು ವ್ಯಕ್ತಕ್ಕೆ ತರುವುದೇ ಹೀಗೆ. ಅವಳಗಾಗುವ ಅವಮಾನಗಳು ಹೆಣ್ಣಿಗಾಗುವ ಅವಮಾನಗಳಾಗಿವೆ. ಕಥೆ ಕಥೆಯಾಗಿದೆ. ಆ ಕಥೆ ಬದುಕಿನದಾಗಿದೆ. ಆ ಬದುಕು ಸಾಮಾನ್ಯದ್ದೆನಿಸಿದರೂ ಮೌಲಿಕದ್ದಾಗಿದೆ. ಟೊಳ್ಳು–ಗಟ್ಟಿಯ ಸಂಘರ್ಷವಿದೆ. ಭಾಗೀರಥಿ, ಶಾರದೇ ಹಾಗೂ ಮತ್ಯಾರೂ ಸಾಧಿಸದ ಗೆಲುವನ್ನು ಸಾಧಿಸುತ್ತಾಳೆ. ಅದೂ ಯಾರಿಂದಲೂ ಏನನ್ನೂ ಪಡೆಯದೆ ಬರಿಗೈಲಿ ಹೋಗುವ ಮೂಲಕ. ಅವಳು ದೊಡ್ಡ ಮನುಷ್ಯಳು.




ನಾನು ಓದಿದ ಪುಸ್ತಕ

*ಲೇಖಕರು :* **ದೀಪ್ತಿ ಭದ್ರಾವತಿ**

*ಪುಟ :* ೧೧೬ *ಬೆಲೆ :* ರೂ. ೧೦೦/–

ಪ್ರಕಾಶಕರು

**ಆವರ್ತ ಪಬ್ಲಿಕೇಷನ್ಸ್**

ಎರಡನೆಯ ತಿರುವು ಬಲಭಾಗ, ಶಂಕರಮಠ ರಸ್ತೆ

ಸಿದ್ಧಾರೂಢ ನಗರ, ಭದ್ರಾವತಿ – ೫೭೭ ೩೦೧

# ಕೈ ಬಿತ್ತನೆಯ ಕಥೆಗಳು

ಅದೇ ತಾನೆ ಹೆಗಲಾದ ಎತ್ತುಗಳ ಹೆಗಲಿಗೆ ನೊಗವಿಟ್ಟು ಕಟ್ಟಿ, ಮೇಟಿ ಹಿಡಿದು ಒಂದು ದೋಣಿ ಸಾಲು ಉತ್ತಂತೆ 'ಆ ಬದಿಯ ಹೂವು' ತಂದ ದೀಪ್ತಿ ಭದ್ರಾವತಿ, ಎರಡನೆಯ ದೋಣಿ ಸಾಲಿಗೆ "ಗೀರು" ಹೊಡೆದಿದ್ದಾರೆ. ಇಲ್ಲಿ ಉಳುತ್ತ ಉಳುತ್ತ ಉತ್ತ ಉಳುವನ್ನು ನೋಡಲು ಹಿಂದಿರುಗಿ ನೋಡಿಯೋ, ಮುಂದೆ ನೇಗಿಲು ಹರಿಯುವ ನೆಲದತ್ತ ನೋಡಿಯೋ ಏನೋ 'ಗಡ್ಡೆ' ಬಿಟ್ಟು ಉತ್ತು, ಸಾಲು ಏಕೆ ಸೊಟ್ಟಾಯಿತು ಎಂದು ಕೇಳುವಂತೆ ಗೀರು ಕಥೆಗಳೊಂದಿಗೆ ನಿಂತಿದ್ದಾರೆ. ಮುಂದೆ ಉಳುವಾಗ ಬಿಟ್ಟ ಗಡ್ಡೆಯನ್ನು ಹಿಡಿದು ಉತ್ತು ಸಾಲನ್ನು ನೇರ ಮಾಡಿಕೊಂಡು ಉಳುವುದು ಉಳುಮೆಗಾರನ ಕೆಲಸ, ಕಲಿಕೆ ಎರಡೂ ಆಗಿರುತ್ತದೆ. ದೀಪ್ತಿ ಈಗ ಹೊಲದಲ್ಲಿದ್ದಾರೆ. ಸನ್ನೆ ಅರಿವ ಎತ್ತುಗಳಿವೆ, ಉಳುಮೆಗೆ ಕೈ ಪಳಗುತ್ತಿದೆ. ಬಿತ್ತನೆ ಬೀಜದ ಆಯ್ಕೆಯತ್ತ ಚಿಂತನೆಯೂ ಈ ಸಂಕಲನದಲ್ಲಿದೆ.

ಕತೆಗಾರಳಾಗಿ ದೀಪ್ತಿ ಅವರು ಹೇಳಿದ ಕತೆಗಳು ಇಲ್ಲಿವೆ. ಕಟ್ಟಿದ ಕತೆಗಳೂ ಇವೆ. ಹೇಳಿದ ಕತೆಗಳಿಗಿಂತಲೂ ಕಟ್ಟಿದ ಕತೆಗಳು ಗಟ್ಟಿಯಾಗಿವೆ. ಹೇಳುವ ಕತೆಗಾತಿಯ ಸೋಲನ್ನು ಕಟ್ಟುವ ಕತೆಗಾತಿಯಲ್ಲಿ ಗೆಲ್ಲಲು ಪ್ರಯತ್ನಿಸುತ್ತಾರೆ. ಈ ಪ್ರಯತ್ನದ ಏರಿಳಿತಗಳು ಅವರ ಮುಂದಿನ ಕಥೆಗಳಲ್ಲಿ ನಮಗೆ ಸಿಗಲಿವೆ.

'ಭಾಗೀಚಿಕ್ಕಿ', ಭಾಗೀಚಿಕ್ಕಿಯ ಹೋರಾಟದ ಕಥೆ. ಈ ಹೋರಾಟ ಅವಳಿಗಾಗಿ ಅಲ್ಲ. ಉಪ್ಪುಂಡ ಮನೆಗೂ ಎಂಬುದು ಗಮನಾರ್ಹ. ಹೆಣ್ಣಾಗಿ ಹೆಣ್ಣಿನ ರಕ್ಷಣೆಗಾಗಿ ನಿಲ್ಲುತ್ತಾಳೆ. ಭಾಗೀಚಿಕ್ಕಿಯದು ಗಯ್ಯಾಳಿತನವಲ್ಲ. ಅದು ತನ್ನತನದ್ದು. ಇದಿರ ಒಳಿತಿ ಗಾದದ್ದು. ಸಾಚಾತನದ ಹೆಣ್ಣು ತನ್ನ ಗಟ್ಟಿತನವನ್ನು ವ್ಯಕ್ತಕ್ಕೆ ತರುವುದೇ ಹೀಗೆ. ಅವಳಿಗಾಗುವ ಅವಮಾನಗಳು ಹೆಣ್ಣಿಗಾಗುವ ಅವಮಾನಗಳಾಗಿವೆ. ಕಥೆ ಕಥೆಯಾಗಿದೆ. ಆ ಕಥೆ ಬದುಕಿನದಾಗಿದೆ. ಆ ಬದುಕು ಸಾಮಾನ್ಯದ್ದೆನಿಸಿದರೂ ಮೌಲಿಕದ್ದಾಗಿದೆ. ಟೊಳ್ಳು–ಗಟ್ಟಿಯ ಸಂಘರ್ಷವಿದೆ. ಭಾಗೀರಥಿ, ಶಾರದೇ ಹಾಗೂ ಮತ್ಯಾರೂ ಸಾಧಿಸದ ಗೆಲುವನ್ನು ಸಾಧಿಸುತ್ತಾಳೆ. ಅದೂ ಯಾರಿಂದಲೂ ಏನನ್ನೂ ಪಡೆಯದೆ ಬರಿಗೈಲಿ ಹೋಗುವ ಮೂಲಕ. ಅವಳು ದೊಡ್ಡ ಮನುಷ್ಯಳು. ಭಾಗೀರಥಿಯ ನಿಷ್ಠುರ ಪ್ರಜ್ಞೆಯೇ ಈ ಕಥೆಯ ಜೀವಂತಿಕೆ. ಭಾಗೀರಥಿಯ ಪಾತ್ರದ ಮೂಲಕ ದೀಪ್ತಿ ಕಥನದಲ್ಲಿ ಯಶಸ್ಸು ಪಡೆಯುತ್ತಾರೆ. ಯಾವ ಧಾವಂತವೂ ಇಲ್ಲದೆ ಕಥೆಯನ್ನು ನಿರೂಪಿಸಿದ್ದಾರೆ.

ನಿರ್ಲಿಪ್ತ ತತ್ವಜ್ಞಾನಿ ಚಿತ್ರಕಾರ, ಬಯಕೆ ಚಿಗುರಿಸಿಕೊಳ್ಳುವ ಸೆಬಾಸ್ಟಿನ್‌ನ ತಣ್ಣಗಿನ ಲಂಪಟತನ, ಸುಬ್ರಮಣ್ಯಂ, ರೋಗಪೀಡಿತ ಮಾಥುರ್, ಬಲೆಗೆ ಜಾರಿದ ಅವನ ಹೆಂಡತಿ ಇವರ ನಡುವಿನ ಕಥೆ 'ಕ್ಯಾನ್ವಾಸ್'. ಸುಬ್ರಮಣ್ಯಂ ಚಿತ್ರದಲ್ಲಿನ ಪಾದ, ಅಮಲಿನ ತುಟಿಗಳ ಚಿತ್ರ ನೋಡಿಯೇ ಮಾಥೂರನ ಹೆಂಡತಿಯ ತೃಷೆಯನ್ನು ತಿಳಿದುಬಿಡುತ್ತಾನೆ. ಚಿತ್ರಕಾರನ ಸೌಂದರ್ಯಾರಾಧನೆ ಸುಬ್ರಮಣ್ಯಂನ ಬಲೆ ಬೀಸುವಿಕೆಗೆ ಕಾರಣವಾಗುತ್ತದೆ. ಮಾಥುರನ ಹೆಂಡತಿಯ ಸುಖಾಕಾಂಕ್ಷೆಯೇ ಅವನ ನೋವು, ಅಸಹಾಯಕತೆ, ಸಾವು.

'ಚೌಕಟ್ಟು' ಕಥೆಯಲ್ಲಿ ಸಂದರ್ಭಗಳ ಗಾಂಭೀರ್ಯದಷ್ಟೇ ಕಥನದ ಗಾಂಭೀರ್ಯವಿದೆ. ಸಂಘರ್ಷ ಸೋಲುಗಳ ನೆರಳಿನಾಟ ಕವಿಯುತ್ತ ಕಥೆಯನ್ನು ನಡೆಸುತ್ತದೆ. ಘಟನೆಗಳು ತರ್ಕದೊಂದಿಗೆ ತೆಕ್ಕೆ ಹಾಕಿಕೊಳ್ಳುತ್ತವೆ. ನ್ಯಾಯದ ಬೇಡಿಕೆ, ಒತ್ತಾಯಗಳು ಬಲಗೊಳ್ಳಲು ತರ್ಕ ಹಾಗೂ ತುಲನೆ ಅನಿವಾರ್ಯವೆನ್ನುವಂತೆ ನಿರೂಪಣೆಯ ತಂತ್ರವಿದೆ. ನ್ಯಾಯೋತ್ತಾಯ ಅಪಮಾನದ್ದು ಎಂಬ ವರ್ತಮಾನದ ವರ್ತನೆಯ ವ್ಯವಸ್ಥೆಯನ್ನು ಕಥೆ ಪ್ರಶ್ನಿಸುತ್ತದೆ. ಅತ್ಯಾಚಾರದ ಪ್ರತಿ ಘಟನೆಯಲ್ಲೂ ಹೆಣ್ಣಿನ ಚಾರಿತ್ರ್ಯವಧೆಗೆ ಹುನ್ನಾರಿನಂತೆ ಮಾಧ್ಯಮಗಳು ಕಂಡುಬರುತ್ತಿರುವ ಬಗ್ಗೆ ಗಂಭೀರ ವ್ಯಂಗ್ಯವಿದೆ. ಸಮಾಜ ರೂಢಿಯಲ್ಲಿ ಸ್ಥಗಿತಗೊಳಿಸಿಕೊಂಡ ಮಾತುಗಳಾಚೆ ಚಲಿಸುವುದಿಲ್ಲ. ಅಂದರೆ ಟೊಳ್ಳುಗಳಿಗೆ

**ಸ. ರಘುನಾಥ**

ಸುಣ್ಣಬಣ್ಣವಿಲ್ಲ. ಹೆಣ್ಣಿನ ಹೋರಾಟಗಳನ್ನು ನಿರ್ವೀರ್ಯಗೊಳಿಸುವ ಕ್ರಿಯೆಗಳನ್ನು ಅವುಗಳ ನೋಟದಲ್ಲೇ ಕಾಣಿಸುವುದು ಗಮನಕ್ಕೆ ಬರುತ್ತದೆ. ವೈಚಾರಿಕತೆಗೆ ಒಡ್ಡಿ ತಿರುಚುವ ಬೌದ್ಧಿಕತೆಯಿಲ್ಲ. ಕಥೆಯ ಅಂತ್ಯದಲ್ಲಿ "ಎದ್ದಳು" ಎಂಬ ಕ್ರಿಯಾಪದ ಮಧುವಂತಿಯ ಮನೋನಿಶ್ಚಯದ ಸೂಚಕವಾಗಿದೆ. ಅವಳ ಬಸಿರೇ ಅವಳ ಮುಂದಿನ ಹೋರಾಟಕ್ಕೆ ವೇದಿಕೆಯಾಗುತ್ತದೆ. "ಮದ್ವೆ ಗೊತ್ತಾಗಿದೆಯಷ್ಟೇ ಅಕ್ಕ ಆಗಿಲ್ಲವಲ್ಲ" ಎಂಬ ಮಾತೂ ಇದಕ್ಕೆ ಧ್ವನಿಗೂಡಿಸುತ್ತದೆ.

'ಪಗದ್ಯ ಶೈಲಿ'ಯ 'ಮುಚ್ಚಿದ ಬಾಗಿಲು' ಜೀವಜಲ ಸೆಲೆಯ ಕಥೆ. ಶಬ್ದಗಳು ಕಥೆಯನ್ನು ಬಿಟ್ಟು ಏನನ್ನೂ ಹೇಳುವುದಿಲ್ಲ. ಅಂದರೆ ಶಬ್ದದ ಹಂಗಿಲ್ಲದ ಭಾವವೇ ಹೇಳುವ ಕಥೆ ಇದು. ದೀಪ್ತಿಯ ಕಥನ ಶಕ್ತಿ ಮುಂದೆ ಏನೆಂಬುದನ್ನು ಹೇಳುತ್ತದೆ. ಶಬ್ದದೊಳಗಿನ ಭಾವ ನಿರೂಪಣೆ ಎಂದರೆ ಹೀಗೆಯೇ, ಕಡೆಯ ವಿಷಾದ ಧ್ವನಿಸುವುದೂ ಭಾವದಲ್ಲಿಯೇ.

'ಮೊಹರು' ವಾಸ್ತವದ ಒಳಗೆ ಬಿಚ್ಚಿಕೊಂಡ ಸತ್ಯ ಇಲ್ಲಿನ ವಸ್ತು. ಆದರ್ಶವೆಂಬ ವಿಚಾರದ ಅತ್ತಿತ್ತ ಕೊಂಚ ಸರಿದಿದ್ದರೂ ಕಥೆ ಹದಗೆಡುತ್ತಿತ್ತು. ಸೂಚ್ಯಗಳೇ ಈ ಕಥೆಯ ಉತ್ತರಗಳು. 'ಗಿಳಿ ಪಾಠದ' ಜಾಡು ಹಿಡಿಯುವ ಅಪಾಯ ಹೆಜ್ಜೆ ಹೆಜ್ಜೆಗೂ ಇತ್ತು. ಆದರೆ ಅದು ಕಥನ ವಿವೇಕದ ಕೈಗೆ ಸಿಕ್ಕಿ ಕತೆಗಾರಳ ಕೈ ಹಿಡಿದು ಎತ್ತಿದೆ. ಲೈಂಗಿಕ ವೃತ್ತಿ ನಿರತರು ಗೌರವಕ್ಕೆ ಅಪಾತ್ರರು ಎಂಬ ಸಾಮಾನ್ಯ ಸ್ತರದ ಅರಿವನ್ನು ನಿರಾಕರಿಸುತ್ತ ಅವರ ಕಲ್ಯಾಣ ಚಿಂತನೆಯತ್ತ ಹಾಸ್ಯ ದಾಟುವ ವ್ಯಂಗ್ಯ. ಸಾಮಾಜಿಕ ಆರೋಗ್ಯದ ಕಳಕಳಿಯೂ ಹೌದು. ಲೈಂಗಿಕ ವೃತ್ತಿಯ ನಿರ್ಮೂಲನೆ ಎಂಬುದು ಅವಾಸ್ತವ ಆದರ್ಶ ಎಂಬುದನ್ನು ತಿಳಿದಿರುವುದೇ ಕತೆಗಾರಳ ಸಹಜ ಅರಿವಿನ ಅನುಭವ ಪಾಠ.

'ಗೀರು' ವಿವರಣೆಗಳ ನೆರಳಿನಲ್ಲಿ ವರದಿಯಾಗ ಬಹುದಾದ ಅಪಾಯವನ್ನು ಹೃದಯ ಮಿಡಿತದ ಮೂಲಕ ತಪ್ಪಿಸಿದ್ದರಿಂದ ಕಥೆಯಾಗಿದೆ. ಹೃದಯ ಮಿಡಿತ ಜೀವಿ–ಜೀವಿಯ ಪರವಾದಾಗ ಇಂಥ ಕರುಣಾರ್ದ್ರ ಕಥೆ ಸಾಧ್ಯ. ಅನುಭವದ ವಿಮರ್ಶೆ ಕಥೆಯ ಸಾದ್ಯಂತ ಕಂಡುಬರುತ್ತದೆ. ಕಡೆಯ ವಾಕ್ಯ, ಕಥೆಯಲ್ಲಿನ ಏನೆಲ್ಲ ಅನುಮಾನಗಳಿಗೆ ಉತ್ತರ ಕೊಡುತ್ತದೆ. ಆದರದು ಸಕಾಲ ಸಂದರ್ಭದಲ್ಲಿ ಬೆಳಕೊಡೆಯದ್ದೇ ದುರಂತ, ವಿಷಾದ. ಇದೇ ಬದುಕಿನ ಅನಿರೀಕ್ಷಿತ ದುರಂತ.

'ನ್ಯೂಸ್ ಬೀ' ನಾಯಕಿಯ ವಿರುದ್ಧವಾಗಿ ನಡೆಯುವ ಚಟುವಟಿಕೆಗಳಲ್ಲಿ ಅವಳದೇ ಪಕ್ಷದವರು ಇದ್ದಾಗ 'ರಾಜಕೀಯ' ಅವಿಶ್ವಾಸ ಮಂಡನೆ ಸಾಮಾನ್ಯ. ಇದು ಪ್ರಮುಖಾಸ್ತ್ರವೂ ಹೌದು. ಇದು ಸಂಘರ್ಷ ತರಬೇಕಿತ್ತು. ಲೇಶಪ್ಪನ ಸ್ವಭಾವ ಅಲ್ಲಲ್ಲಿ ಕೃತಕವೆನ್ನಿಸುತ್ತದೆ. ಅವನ ತಂತ್ರ ರಾಜಕೀಯ ಪ್ರಜ್ಞೆಗೆ ಮಂಕು ಹಿಡಿಸಿದೆ. ನ್ಯೂಸ್ ಬೀ 'ಕೇಸು ಹಾಕಿ ಜೈಲಿಗೆ ಕಳಿಸಿ' ಅನ್ನುವ ಮಾತು ಧುತ್ತನೆ ಬಂದ ದೃಢತೆ ಅನ್ನಿಸುವಾಗಲೂ ಅವಳಲ್ಲಿ ನಡೆಯಬೇಕಿದ್ದ ಹೊಯ್ದಾಟಗಳು ಗೈರುಹಾಜರಿಯಾಗಿವೆ. ಅಸಹಾಯ ಕತೆಯನ್ನು ಅವಳಿಗೆ ಆರೋಪಿಸಿದಂತಿದೆ. ಅವಳ ಸುತ್ತಲಿನ ರಾಜಕೀಯ ತಂತ್ರಗಳು ಅವಳನ್ನು ಜಾಗೃತ ಗೊಳಿಸಲಿಲ್ಲವೇಕೆಂಬ ಪ್ರಶ್ನೆ ಉಳಿಯುತ್ತದೆ. ಅವಳದು ವಿವೇಚನೆ ಇಲ್ಲದ ವರ್ತನೆ ಅನ್ನಿಸುತ್ತದೆ. ಮೇಲ್‌ಸ್ತರದ ವಿವರಣೆಗಳಲ್ಲಿಯೇ ನಿಂತುಬಿಡುತ್ತದೆ. ಅಲ್ಲಲ್ಲಿ ವರದಿಯಾಗಿ ಕೇಳಿಸುತ್ತದೆ. ಬೆದಕಬೇಕಿದ್ದ ಆಳಗಳಿಗೆ ಇಳಿಯುವುದಿಲ್ಲವಾದರೂ, ರಾಜಕೀಯ ಆಡಳಿತದಲ್ಲಿ ಮೀಸಲಾತಿ ಹುದ್ದೆಗಳು ಹೇಗೆ ನಿರ್ವೀರ್ಯವಾಗಿ ಪರಿವರ್ತಿತವಾಗುತ್ತವೆ ಎಂಬುದರತ್ತ ಧ್ವನಿ ಇದೆ.

'ನೆರಳಿನಾಚೆ' ಪರಿಸರ–ಹಸುರು–ಕಾಳಜಿ ಓಟ, ಕ್ಯಾಂಡಲ್, ಟೀಷರ್ಟು, ಗೋಡೆ ಚಿತ್ರಗಳಲ್ಲಿ, Tax ಹಾರಿಸುವ ತಂತ್ರಗಳಲ್ಲಿ, ವೇದಿಕೆ ಕಾಳಜಿಯ ಮಾತುಗಳಲ್ಲಿ, ಕೋಟಿ ಗಿಡಗಳ ನೆಡುವಿಕೆಯ ಮಾತು ಗಳಲ್ಲಿ, ವನಮಹೋತ್ಸವದ ಒಣಗು ಕ್ರಿಯೆಗಳಲ್ಲಿ, ಮಸ್ತಕ ಜನ್ಯ ಬೀಜದುಂಡೆಗಳಲ್ಲಿ ಮಾನಭಂಗಕ್ಕೆ ಒಳಗಾಗುತ್ತ, ಕಾರ್ಪೊರೇಟ್‌ಗಳ ಬಣ್ಣದ ಬಲ್ಬು ಗಳಲ್ಲಿ ಒಡೆದುಹೋಗುತ್ತಿರುವುದರ ನಡುವೆಯೂ ಸತ್ಯಮೂರ್ತಿಯಂತಹ ಒಡಲಾಳದ ಹಸಿರು ಧ್ಯಾನದ ಶ್ರಮಿಕ. ಪರಿಸರ ಕನಸುಗಾರರು ಅಲ್ಲಲ್ಲಿಯಾದರೂ ಉಳಿದಿರುವುದೇ ಗಿಡಮರಗಳ ಪುಣ್ಯಶೇಷ.

'ನೆರಳಿನಾಚೆ' ಕಥೆಯ ಜೀವಾಳವೇ ಸತ್ಯಮೂರ್ತಿಯ ಹಸಿರು ಚಟುವಟಿಕೆ. ಅಮ್ಮನ ಮಾತೊಂದು ಅವನನ್ನು 'ಗಿಡಜೀವಿ'ಯಾಗಿ ರೂಪಿಸುತ್ತದೆ. ಅವನಿಗೆ ಅನುಭವ ಬೇರಿಳಿಸುತ್ತಿದ್ದಂತೆ ಕನಸಿನಾಚೆಯ ವಾಸ್ತವಗಳು ತೆರೆದುಕೊಳ್ಳುತ್ತವೆ. ಹಸಿರುದಾಯಿತ್ವವಿಲ್ಲದವರು 'ಅವನ' ಮರಗಳನ್ನು ಕೊಲ್ಲುತ್ತಾರೆ. ಅರಣ್ಯ ಇಲಾಖೆ ರಾಜಕೀಯ ಗುಲಾಮಿ ಇಲಾಖೆಗಳಲ್ಲಿ ಒಂದೆಂಬ ದಿಟವೂ ಅನಾವರಣಗೊಳ್ಳುತ್ತದೆ. ಕಥೆಯಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಕಳ್ಳ ಲಾಭಕೋರರು ಪಡೆಯುವ ಸವಲತ್ತುಗಳಲ್ಲಿ ಒಳದ್ರೋಹಿ ರಾಜಕಾರಣಿಗಳು ಪಾಲುದಾರರಾಗುವಾಗ ಸತ್ಯಮೂರ್ತಿಯಂತಹವರು ದುಃಖಿಗಳಾವುದಷ್ಟೇ ಸಾಧ್ಯ. ವ್ಯಕ್ತಿ ಕಾಳಜಿಯು ಜನ ಕಾಳಜಿಯಾಗಿ ಇನ್ನೂ ರೂಪು ಪಡೆದಿಲ್ಲ. ಅದು ನಿರೀಕ್ಷೆಯಷ್ಟೇ. ದೀಪ್ತಿ ಸತ್ಯಮೂರ್ತಿಯ ಮೂಲಕ ತಮ್ಮ ಗಿಡಪ್ರೀತಿಯನ್ನು ಅನುಭವಿಸಿ ಹೇಳಿದ್ದಾರೆ.

'ಅಲಮೇಲಮ್ಮ ಮತ್ತು ಇಂಗ್ಲಿಷ್' ಮುಗ್ಧ ಮನಸ್ಸಿನ ವಿಹ್ವಲತೆಯ ಕಥೆ. ಸಣ್ಣ ಮಾತೊಂದು ಮನಸ್ಸನ್ನು ಕೆಡಿಸಿ, ತಂದ ಕಷ್ಟಗಳ ಸರಣಿಯಲ್ಲಿ ಅಲಮೇಲಮ್ಮ ನಲುಗುತ್ತಾಳೆ. ಭ್ರಮೆ ಹುಟ್ಟಿಸಲಾಗಿರುವ ಇಂಗ್ಲಿಷ್ ವ್ಯಾಮೋಹ, ಪ್ರತಿಭೆಯ ಚಿವುಟುವಿಕೆ, ಈವೊತ್ತಿನ ವ್ಯಾಪಾರವೆಂಬುದನ್ನು ಅಂಗೈಗಿಟ್ಟು ತೋರಿಸುತ್ತದೆ. ಈ ಕಥೆ 'ನಲಿ–ಕಲಿ'ಗೆ ಬೆಲೆಯಿಲ್ಲದಂತೆ ಮಾಡುತ್ತಿರುವ, ಈ ನೆಲದ ಗುಣಸ್ವಭಾವದ ಶಿಕ್ಷಣವನ್ನು ಕಿತ್ತು ಕೊಳ್ಳುತ್ತಿರುವುದನ್ನು ಧ್ವನಿ ಸಹಿತ ಮನವರಿಕೆ ಮಾಡಿ ಕೊಡುತ್ತದೆ. ಸೂಕ್ಷ್ಮತೆಯ ನಿರೂಪಣೆಯಿದೆ. ಮುಗ್ಧ ಎಳೆಯ ಮನಸ್ಸುಗಳನ್ನು ಅವಮಾನಿಸುವ, ಹಿಂಸಿಸುವ ಶಿಕ್ಷಣ ವ್ಯವಸ್ಥೆಯ ವಿರೋಧಿ ಧ್ವನಿ ನವಿರಾಗಿದೆ.

'ಕುದಿ' ಸಂಪೂರ್ಣ ಹೆಂಗಸರ ನುಡಿಗಟ್ಟಿನ ಕಥೆ. ಎಲ್ಲೂ ಜಾಳು ಇಲ್ಲ. ಕಥೆಯ ಹೆಸರೂ ಸೂಚ್ಯವಾಗಿದೆ. ಪಾತ್ರಗಳ ಎದೆಗಳಲ್ಲಿನ 'ಕುದಿಗಳ' ಕಥೆ ಇದಾಗಿದೆ. ಅಕ್ಕಯ್ಯಮ್ಮ ಕೌಸಲ್ಯಳಿಗಿಂತಲೂ ವಿವೇಕದ ಹೆಣ್ಣು. ಸೀತೆಯದು ಒಮ್ಮೆ ಅಗ್ನಿದಿವ್ಯದ ಪ್ರವೇಶ. ಆದರೆ ಅಕ್ಕಯ್ಯಮ್ಮನದು ನಿತ್ಯ ಅಗ್ನಿದಿವ್ಯ ಪ್ರವೇಶವೇ. ಸೀತಾಕಲ್ಯಾಣದ ವಿಷಯವಾಗಿ ಅವಳಾಡುವ ಮಾತು ಹೆಣ್ಣಿಗೆ ಒಂದು ಸಲದ ಅಗ್ನಿಪ್ರವೇಶ ಸಾಲದೇ ಎಂದು ಕೇಳುವಂತಿದೆ.

'ರೊಕ್ಕದೋಷ', ಮಾತನಾಡಲು ಮಾತುಗಳನ್ನು ದೂರಕ್ಕಿಡಿಸುವ ಕಥೆ. ದೇವೇರಿಯ ಪಾತ್ರ ಬಹು ಎತ್ತರದ್ದು. 'ಹೆಬ್ಬೆಟ್ಟಿನಲ್ಲಿ' ಎಂತಹ ದಯಾರ್ದ್ರ ಹೃದಯ ಎಂಬ ಬೆರಗು ಬೆಡಗಿನಂತೆ ನಿಲ್ಲುತ್ತದೆ. ಒಳಿತುಗಳು ಕಟ್ಟಿಕೊಳ್ಳುವುದೇ ಹೀಗೆ. ಅಪಾತ್ರವೆನ್ನಿಸುವ ಹಣ ಹೇಗೆ ಪಾತ್ರವಾಗಿ ಪವಿತ್ರವಾಗುತ್ತದೆ ಎಂಬುದು ಮುಖ್ಯ. ವ್ಯಾವಹಾರಿಕವಾಗಿ ಅನಕ್ಷರಸ್ಥಳಾದ ದೇವೇರಿಯ ಮಾನಸಿಕ ಶಿಕ್ಷಣ ಉದಾತ್ತವಾದುದು. ಬದುಕಿನ ಸಹ್ಯತೆಗಳ ಧ್ವನಿಸತ್ವದ ರೂಪಕವಾಗಿ ದೇವೇರಿ ಚಿತ್ರಿತಳಾಗಿದ್ದಾಳೆ.

'ಈ–ಟೆಂಡರ್' ಸಂಕಲನದಲ್ಲೇ ಭಿನ್ನವಾದ ಕಥೆ. ವಿಜ್ಞಾನದ ಆವಿಷ್ಕಾರದ ವಿಕೃತ ಬಳಕೆ ಇಲ್ಲಿಯ ಧ್ವನಿ. ಅದು ವಿಡಂಬನೆಯ ಮೂಲಕ ಮಾತನಾಡುತ್ತದೆ. ಗಟ್ಟಿ ಸೃಜನಶೀಲತೆ ಭ್ರಷ್ಟತೆಯಲ್ಲಿ ಕೊಳಚೆಯಾಗುವ ವರ್ತನದ ನಡವಳಿಕೆಯನ್ನು ತೋರಿಸಿಕೊಡುತ್ತದೆ. ಅವರವರ ಬಗ್ಗಡವನ್ನು ಅವರವರ ಬಾಯಿಗಳೇ ಭಗವಂತನೆದುರು ಕಕ್ಕುತ್ತವೆ. ಸೃಷ್ಟಿ ವಿಜ್ಞಾನಿಯ ಅಸಹಾಯಕತೆ ಇಲ್ಲಿನ ವಿಷಾದವೂ ಹೌದು. ವ್ಯಂಗ್ಯ ವಿಡಂಬನೆಯೂ ಹೌದು.

ದೀಪ್ತಿ ಕಥನ ನೆಲದ ಹದ ಹಿಡಿಯುತ್ತಿರುವರು. ಸಲೀಸೆನಿಸುವ ಕೂರಿಗೆ ಬಿತ್ತನೆಗೆ ಬದಲು, ಚೆಲ್ಲು ಬಿತ್ತನೆ ಮಾಡುವುದರತ್ತ ಅವರ ಒಲವು ಎಂಬುದನ್ನು 'ಗೀರು'ವಿನಲ್ಲಿಯ ಕಥೆಗಳು ಹೇಳುತ್ತವೆ. ಇವರು ಇಲ್ಲಿನ ಕಥೆಗಳಲ್ಲಿ ಗಡಿಗೆಯ ತೂತಿಗಿಟ್ಟ ಬಟ್ಟೆಯ ತುಂಡಿನಿಂದ ನೀರು ಜಿನುಗುವಂತೆ ಹೆಂಗಸರ ನೋವಿನ ಕಥೆಗಳನ್ನು ಜಿನುಗಿಸಿದ್ದಾರೆ.


**ಸ. ರಘುನಾಥ**
ಕಂಟ್ರಾಕ್ಟರ್ ರಾಜಣ್ಣನವರ ಮನೆ
ವೇಣು ವಿದ್ಯಾ ಸಂಸ್ಥೆ ಎದುರು
ಶ್ರೀನಿವಾಸಪುರ – ೫೬೩ ೧೩೫, ಕೋಲಾರ ಜಿಲ್ಲೆ
email : raghunathamalitata@gmail.com


## ಸಂತಸ

ಮಳೆ ಹನಿಹನಿಯ
ಪಟ ಪಟ ಸದ್ದಿಗೆ
ಧರೆಯ ಕಣಕಣದಲ್ಲೂ
ಸಂತಸದ ದನಿ – ಅರೆ ಗಳಿಗೆ !!!


**ವ. ಉಮೇಶ್ ಕಾರಂತ**
ಮಂಗಳೂರು – ೫೭೫೦೦೧

# ಭಾರತೀಯ ರಾಷ್ಟ್ರೀಯತೆಯನ್ನು ಗಂಭೀರವಾಗಿ ಪರಿಗಣಿಸುತ್ತಾ...

ಮೊದಲನೆಯದಾಗಿ, ಯಾವುದೇ ದೃಷ್ಟಿಕೋನದಿಂದ ರಾಷ್ಟ್ರದ ಬಗ್ಗೆ ಮಾತಾಡುವುದು ಸಾಧ್ಯವೇ ಇಲ್ಲ ಎಂದಾದಲ್ಲಿ ರಾಷ್ಟ್ರೀಯತೆ ಬಗ್ಗೆ ನಾವು ಯಾಕಾದರೂ ಮಾತಾಡಬೇಕು ? ದೇಶದ ವಿಷಯವನ್ನೇ ಬಿಟ್ಟು ಮಾತಾಡುವುದಾದರೆ ಬಲಪಂಥೀಯ ವಾದದ ಜೊತೆ ಹೇಗೆ ತಾನೇ ಅನುಸಂಧಾನ ನಡೆಸುವುದು ?
ಎರಡನೆಯದಾಗಿ, ರಾಷ್ಟ್ರೀಯತೆಯ ಬಗ್ಗೆ ಮಾತಾಡಲು ನಿರ್ಧರಿಸಿದರೂ, ನಾವು ಯಾವ ಭಾಷೆಯಲ್ಲಿ ಮಾತಾಡಬೇಕು ?
ಮೂರನೆಯದಾಗಿ, ರಾಷ್ಟ್ರವನ್ನು ನೈತಿಕ / ಸೈದ್ಧಾಂತಿಕ ಪ್ರಶ್ನೆಯಿಂದ ಪ್ರತ್ಯೇಕಗೊಳಿಸಿ ಆ ಚರ್ಚೆಗಳನ್ನೆಲ್ಲಾ ಬರ್ಖಾಸ್ತು ಮಾಡಿ ದೇಶಾಂತರ ಕಳಿಸಿದರೆ, ಅಂಚಿಗೆ ಸರಿದ ಸಮುದಾಯಗಳಿಗೆ ಅಂಥ ರಾಷ್ಟ್ರೀಯತೆಯಿಂದ ಏನು ಪ್ರಯೋಜನ ?

**ಈ** ಲೇಖನವನ್ನು ಒಂದು ಜನಜನಿತವಾದ ರೈತ ಮತ್ತು ಕೆಂಡದ ಹೋಲಿಕೆಯೊಂದಿಗೆ ಪ್ರಾರಂಭಿಸುತ್ತೇನೆ. ಒಬ್ಬ ರೈತ ಚಳಿಗಾಲದಲ್ಲಿ ಬೂದಿಗುಡ್ಡೆಯ ಒಳಗೆ ಕೆಂಡಗಳನ್ನು ಆರದಂತೆ ಮುಚ್ಚಿಟ್ಟಿರುತ್ತಾನೆ; ಬೇಕೆನಿಸಿದಾಗ ಉರುಬಿ ಆಚೆ ತೆಗೆದು ತಂಬಾಕು ಚಿಲುಮೆಯನ್ನು ಹೊತ್ತಿಸಿಕೊಳ್ಳಲು.

ಆಳವಾದ ಬಲಪಂಥೀಯ ಚಿಂತನಾ ಕ್ರಮದ ಸಾಮಾಜಿಕ – ರಾಜಕೀಯ ಶಕ್ತಿಗಳನ್ನು ನೋಡಿದಾಗ ರಾಷ್ಟ್ರೀಯತೆಯೂ ಹಾಗೆ ಬೂದಿ ಮುಚ್ಚಿದ ಕೆಂಡದ ತರಹ ಕಾಣಿಸುತ್ತದೆ. ಈ ಸಾಮಾಜಿಕ – ರಾಜಕೀಯ ಶಕ್ತಿಗಳು ರಾಷ್ಟ್ರೀಯತೆಯ ಈ ಹಸಿ ಮಾನಸಿಕ ಸ್ಥಿತಿಯನ್ನು ಬಳಸಿಕೊಂಡು ತೀವ್ರ ಸ್ವರೂಪದ ಕೋಮುವಾದದ ರೂಪದಲ್ಲಿ ಅದನ್ನು ಹೊರಹೊಮ್ಮಿಸುತ್ತವೆ. ಇಂಥ ರಾಷ್ಟ್ರೀಯತೆಯ ಅಭಿವ್ಯಕ್ತಿಯು ಬಹುತೇಕವಾಗಿ ಜನರ ಮಧ್ಯೆ ಅನುಮಾನ ಮತ್ತು ಶತ್ರುತ್ವಗಳ ಗೋಡೆಯನ್ನೆಬ್ಬಿಸುವ ಹೀನ, ವಿಕೃತ ಉದ್ದೇಶವನ್ನು ಹೊಂದಿರುತ್ತದೆ.

ಈ ದೃಷ್ಟಿಯಿಂದ ನೋಡಿದರೆ ರಾಷ್ಟ್ರೀಯತೆಯ ಪರಿಕಲ್ಪನೆಯೇ ಕೆಂಡದಂಥ ಒಂದು ಉಪಯೋಗಿ ಉದ್ದೇಶದ ವಸ್ತು, ಅಷ್ಟೆ. ಈ ಅರ್ಥದಲ್ಲಿ ರಾಷ್ಟ್ರೀಯತೆಯು ವಿನಾಶದ ಬೆಂಕಿಯ ಮೂಲದ್ರವ್ಯ ಹೊಂದಿದೆ ಎನ್ನಬಹುದು. ವ್ಯಂಗ್ಯವೆಂದರೆ ರಾಷ್ಟ್ರೀಯತೆಯ ಪ್ರತ್ಯಕ್ಷ ಪಾತ್ರಗಳಾದ ಹಸಿದ ಜನರ ಒಡಲ ಬೆಂಕಿಯನ್ನು ಆರಿಸಲು ಈ ರಾಷ್ಟ್ರೀಯತೆ ವಿಫಲವಾಗಿದೆ.

ಈ ಸಮಕಾಲೀನ ಸಂದರ್ಭದಲ್ಲಿ ಬಲಪಂಥೀಯ ರಾಜಕೀಯ ಶಕ್ತಿಗಳು ಜನರ ಭಾವನೆಯನ್ನು ಕೆರಳಿಸುವುದರ ಮೂಲಕ ತಮ್ಮ ನಿರ್ದಿಷ್ಟ ವಿಚಾರಧಾರೆಯನ್ನು ಹರಡಲು ರಾಷ್ಟ್ರೀಯತೆಯನ್ನು ಬಳಸುತ್ತಿವೆ. ತಮ್ಮ ಹಿತಾಸಕ್ತಿಗಳನ್ನು ಮುಚ್ಚಿಡಲು ರಾಷ್ಟ್ರೀಯತೆಯ ಅರ್ಥವನ್ನು “ಪವಿತ್ರ” ಎಂಬ ಮಟ್ಟಕ್ಕೆ ಏರಿಸುವ ಪ್ರಯತ್ನ ಮಾಡುತ್ತಿದ್ದಾರೆ.

“ಪವಿತ್ರ” ಎಂಬ ಪರಿಭಾಷೆಯಲ್ಲಿ ವಿವರಣೆ ಶುರು ಮಾಡಿದ ಕೂಡಲೇ ವೈಚಾರಿಕ ಧ್ವನಿಗಳನ್ನು ರಾಷ್ಟ್ರವೆಂಬ ವಿಷಯದೊಂದಿಗೆ ಅನುಸಂಧಾನ

ಮೂಲ : **ಗೋಪಾಲ್ ಗುರು**
ಕನ್ನಡಕ್ಕೆ : **ಡಾ॥ ಸುಮಾ ಎಂಬಾರ್**



ಮಾಡದಂತೆ ದೂರವಿಡುವುದು ಈ ರಾಜಕೀಯ ಶಕ್ತಿಗಳಿಗೆ ಸುಲಭ.

ಜೆಎನ್‌ಯು ಸುತ್ತ ಹರಡಿದ ವಿವಾದಗಳನ್ನು ಗಮನಿಸಿದರೆ, 'ನೈತಿಕ ಕರ್ತವ್ಯದ' ಬಗೆಗಿನ ವಿಕೃತ ವ್ಯಾಖ್ಯಾನಗಳ ಬಲದಿಂದಲೇ ಬಲಪಂಥೀಯ ಶಕ್ತಿಗಳು 'ರಾಷ್ಟ್ರೀಯತೆ'ಯ ಮೇಲೆ ಸ್ವಯಮೇವ ಅಧಿಕಾರ ಮತ್ತು ಹಕ್ಕನ್ನು ಸ್ಥಾಪಿಸಲು ಪ್ರಯತ್ನಿಸುತ್ತಿರುವುದು ಸ್ಪಷ್ಟ. ಪ್ರಚಲಿತ 'ದೇಶ ನಿನಗೇನು ಮಾಡಿದೆ ಎಂದು ಯೋಚನೆ ಮಾಡಬೇಡಿ; ನೀವು ದೇಶಕ್ಕೆ ಏನು ಮಾಡಬಹುದು ಎಂದು ಯೋಚಿಸಿ' ಎಂಬ ನುಡಿಗಟ್ಟಿನ ಮೂಲಕ ಈ ವಿಕೃತ / ಅಸಹಜ ನೈತಿಕ ಪ್ರಜ್ಞೆಯನ್ನು ಉದಾಹರಿಸಬಹುದು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, 'ದೇಶದ ಮಾನ ಮರ್ಯಾದೆಯನ್ನು ಕಾಪಾಡುವ ಕರ್ತವ್ಯ ನಿಮ್ಮ ಮೇಲಿದೆ'. ಆದರೆ ಈ ರಾಜಕೀಯ ಪಕ್ಷಗಳು, "ದೇಶವು ಶೋಷಿತ ವರ್ಗದ ಜನರಿಗಾಗಿ ಏನು ಮಾಡಬೇಕು" ಎಂಬ ಪ್ರಶ್ನೆಯನ್ನು ಎತ್ತುವುದೇ ಇಲ್ಲ. ರಾಷ್ಟ್ರವು ನಿಮಗೇನು ಮಾಡಲು ಸಾಧ್ಯ ಎಂಬ ಪ್ರಶ್ನೆಯನ್ನು ಇವರು ಎತ್ತುವುದೇ ಇಲ್ಲ. ಅವರ ಪ್ರಕಾರ ರಾಷ್ಟ್ರಕ್ಕೋಸ್ಕರ ಮಾಡಬೇಕಾದ ನಮ್ಮ ಮುಖ್ಯ ನೈತಿಕ ಕರ್ತವ್ಯದ ಮುಂದೆ ಉಳಿದೆಲ್ಲಾ ನೈತಿಕ ಕರ್ತವ್ಯಗಳೂ ಗೌಣ.

ರಾಷ್ಟ್ರೀಯತೆಯ ಹೆಸರಿನಲ್ಲಿ ಜೆಎನ್‌ಯುನಲ್ಲಿ ಶುರುವಾದ ವಾಗ್ವಾದಗಳು ಹೀಗೆ ರಾಷ್ಟ್ರೀಯತೆಯ ಅಸಹಜ ಮೌಲ್ಯಕ್ಕಿಂತ ಉಳಿದ ನೈತಿಕ ಪ್ರಶ್ನೆಗಳು ಅಧಮ ಎಂಬಂತೆ ಬಿಂಬಿಸಲು ನೋಡಿದವು. ಜೆಎನ್‌ಯುಅನ್ನು 'ದೇಶದ್ರೋಹಿಗಳ' ಆಶ್ರಯ ತಾಣವೆಂಬಂತೆ ಬಿಂಬಿಸಿದವು.

ಮತ್ತೆ ರೈತನ ಉಪಮೆಗೆ ಬರುವುದಾದರೆ, ಕೆಂಡವನ್ನು ಉರಿಸಲು ಆತ ಊದುಗೊಳವೆಯೊಂದನ್ನು ಬಳಸುತ್ತಾನೆ. ಗಾಳಿಸುದ್ದಿ, ಡಬ್ಬಾ ಘೋಷಣೆಗಳು, ಸಣ್ಣ ಪುಟ್ಟ ವಾಗ್ವಾದಗಳನ್ನೇ ಊದುಗೊಳವೆ ತರಹ ಬಳಸಿಕೊಂಡು ಬಲಪಂಥೀಯ ಪಕ್ಷಗಳು ರಾಷ್ಟ್ರೀಯತೆಯ ಬಗ್ಗೆ ಜನರ ಭಾವನೆಗಳನ್ನು ಕೆರಳಿಸುತ್ತವೆ.

ಇಂಥ ಪಕ್ಷಗಳು ರಾಷ್ಟ್ರೀಯತೆ ಕುರಿತ ತಮ್ಮ ತಿಳುವಳಿಕೆಯ ಬಗ್ಗೆ ಚರ್ಚೆ ಆರಂಭಿಸುವ ಧೈರ್ಯವನ್ನಂತೂ ಖಂಡಿತವಾಗಿ ಮಾಡುವುದಿಲ್ಲ. ಒಂದು ವೇಳೆ ಚರ್ಚೆ ಶುರು ಮಾಡಿದರೂ ಅದು ತಿರುಗುಬಾಣವಾಗುವ ಸಾಧ್ಯತೆಯೇ ಹೆಚ್ಚು. ಒಳ್ಳೆಯ ಮೌಲಿಕ ಚರ್ಚೆ ನಡೆಸಲು ಅವರಲ್ಲಿರುವ ಗಂಭೀರ ಚಿಂತನಾ ಕ್ರಮದ ಬೌದ್ಧಿಕತೆಯ ಕೊರತೆಯೂ ಒಂದು ಸಮಸ್ಯೆ. ಆದ್ದರಿಂದ ತೀವ್ರ ಪೂರ್ವಗ್ರಹದ, ಭಾವೋದ್ರೇಕದ ರಾಷ್ಟ್ರೀಯತೆಯನ್ನು ಮುಂದೊತ್ತುವುದೊಂದೇ ಅವರು ಮಾಡಬಹುದಾದ ಕೆಲಸ.



ರಾಷ್ಟ್ರೀಯತೆ ಕುರಿತಾದ ನಿಜ ವ್ಯಾಖ್ಯಾನಗಳು ತಮಗಷ್ಟೇ ಸೇರಿದ್ದು ಎಂಬಂತೆ ಬಲಪಂಥೀಯ ಚಿಂತನೆಯ ಪಕ್ಷಗಳು ಹಕ್ಕು ಮಂಡಿಸುತ್ತವೆ. ಅವರ ದೃಷ್ಟಿಯಲ್ಲಿ ಶತ್ರುಗಳೆಂದರೆ ಗಡಿಯಾಚೆ ಇರುವವರು/ ಹೊರಗಿನವರು. ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಅವರು ಹೀಗೆ ತಮ್ಮ ಮೂಗಿನ ನೇರಕ್ಕೆ ಸೃಷ್ಟಿಸಿಕೊಂಡಿದ್ದಾರೆ. ಇಂಥ ಸತ್ಯದ ಬಂಡಿಗೆ ನೇತುಕೊಂಡ ಮೇಲೆ 'ಅನ್ಯ'ರನ್ನು ಕುರಿತು ಒಂದು ಕ್ರಮಬದ್ಧವಾದ, ವ್ಯವಸ್ಥಿತವಾದ ಸತತ ಕಲ್ಪನೆಯನ್ನು ಹುಟ್ಟಿಸಿ ಬೆಳೆಸುತ್ತಾರೆ. ಭಾವನೆಗಳನ್ನು ಕೆರಳಿಸುವ ಅಜೆಂಡಾಕ್ಕೆ ಅವರು ಬೆಳೆಸುವ 'ಅನ್ಯರ' ಪರಿಕಲ್ಪನೆ ತುಂಬಾ ಉಪಯುಕ್ತ. ಇಂಥ ತೀವ್ರ ರಾಷ್ಟ್ರೀಯತೆಯನ್ನು ಜೆಎನ್‌ಯು ಸಮೀಪದ 'ಮುನೀರ್ಕ' ಬಡಾವಣೆಯ ಭೂಮಾಲೀಕರಲ್ಲಿ ನೋಡಬಹುದು. ದೂರದ ಸ್ಥಳಗಳಲ್ಲೂ ನೋಡಬಹುದು!

ರಾಷ್ಟ್ರೀಯತೆಯ ಈ ಅಂಶ ಬಲಪಂಥೀಯರಿಗೆ ಒಂದು ಸಿದ್ಧ ಪರಿಕಲ್ಪನೆ. ಅದು ಸಿದ್ಧ ಪರಿಕಲ್ಪನೆಯಾದ್ದರಿಂದ ಅದರಲ್ಲಿ ಹೊಸ ಸಂಶೋಧನೆಯನ್ನೇನೂ ಮಾಡಲಿಕ್ಕಿರುವುದಿಲ್ಲ. ಅದು ಇದಮಿತ್ಥಂ. ಮೊದಲೇ ಗೊತ್ತಿರುವ ರಾಷ್ಟ್ರೀಯತೆಯ ಬಗ್ಗೆ ಚರ್ಚೆ / ಸಂವಾದದ ಮೂಲಕ ಪಡೆದುಕೊಳ್ಳಬಹುದಾದ ಹೆಚ್ಚಿನ ಜ್ಞಾನವೇನೂ ಇರುವುದಿಲ್ಲ. ಇಂಥ ಸ್ವಯಂಘೋಷಿತ ಅಧಿಕಾರದ ಮೂಲಕ ರಾಷ್ಟ್ರೀಯತೆಯ ಬಗ್ಗೆ ತಮ್ಮ ಹಕ್ಕೆಂಬಂತೆ ಆಡುವ ಮಾತುಗಳು ಜೆಎನ್‌ಯು ಬಗ್ಗೆ ಅಧಿಕಪ್ರಸಂಗದ ತೀರ್ಪುಗಳನ್ನು ನೀಡುವಂತೆ ಮಾಡುತ್ತವೆ.

ಜೆಎನ್‌ಯುವಿನಲ್ಲಿ ಉಂಟಾದ ಪ್ರಕ್ಷುಬ್ಧ ಸ್ಥಿತಿಯ ಸಮಯದಲ್ಲಿ ಇಂಥ ಸ್ವಯಂಘೋಷಿತ ರಾಷ್ಟ್ರೀಯವಾದಿಗಳು ಜೆಎನ್‌ಯುವಿನ ಮುಖ್ಯದ್ವಾರದ ಬಳಿ ಜಮಾಯಿಸಿ ಜೆಎನ್‌ಯು ವಿದ್ಯಾರ್ಥಿಗಳನ್ನು ರಾಷ್ಟ್ರವಿರೋಧಿಗಳೆಂದು ಹೀಯಾಳಿಸಿ ಕೂಗು ಹಾಕುತ್ತಿದ್ದುದನ್ನು ನೆನಪಿಸಿಕೊಳ್ಳಿ. ಜೆಎನ್‌ಯು ಘಟನೆಗಳ ಸುತ್ತ ಜರುಗಿರುವ ಬೆಳವಣಿಗೆಗಳನ್ನು ನೋಡಿದ ಬಳಿಕ ದೇಶದ ಹಿತಾಸಕ್ತಿಯ ದೃಷ್ಟಿಯಿಂದ ನಾವೆಲ್ಲಾ ಈ ಕೆಳಗಿನ ಕೆಲವು ಪ್ರಶ್ನೆಗಳನ್ನು ಎತ್ತಲೇಬೇಕಾಗಿದೆ:

ಮೊದಲನೆಯದಾಗಿ, ಯಾವುದೇ ದೃಷ್ಟಿಕೋನದಿಂದ ರಾಷ್ಟ್ರದ ಬಗ್ಗೆ ಮಾತಾಡುವುದು ಸಾಧ್ಯವೇ ಇಲ್ಲ ಎಂದಾದಲ್ಲಿ ರಾಷ್ಟ್ರೀಯತೆ ಬಗ್ಗೆ ನಾವು ಯಾಕಾದರೂ ಮಾತಾಡಬೇಕು? ದೇಶದ ವಿಷಯವನ್ನೇ ಬಿಟ್ಟು ಮಾತಾಡುವುದಾದರೆ ಬಲಪಂಥೀಯ ವಾದದ ಜೊತೆ ಹೇಗೆ ತಾನೇ ಅನುಸಂಧಾನ ನಡೆಸುವುದು?

ಎರಡನೆಯದಾಗಿ, ರಾಷ್ಟ್ರೀಯತೆಯ ಬಗ್ಗೆ ಮಾತಾಡಲು ನಿರ್ಧರಿಸಿದರೂ, ನಾವು ಯಾವ ಭಾಷೆಯಲ್ಲಿ ಮಾತಾಡಬೇಕು?

ಮೂರನೆಯದಾಗಿ, ರಾಷ್ಟ್ರವನ್ನು ನೈತಿಕ/ಸೈದ್ಧಾಂತಿಕ ಪ್ರಶ್ನೆಯಿಂದ ಪ್ರತ್ಯೇಕಗೊಳಿಸಿ ಆ ಚರ್ಚೆಗಳನ್ನೆಲ್ಲಾ ಬರ್ಖಾಸ್ತು ಮಾಡಿ ದೇಶಾಂತರ ಕಳಿಸಿದರೆ, ಅಂಚಿಗೆ ಸರಿದ ಸಮುದಾಯಗಳಿಗೆ ಅಂಥ ರಾಷ್ಟ್ರೀಯತೆಯಿಂದ ಏನು ಪ್ರಯೋಜನ?

**ರಾಷ್ಟ್ರೀಯತೆಯನ್ನು ಸಾಮಾಜಿಕ ಅವಶ್ಯಕತೆಯೆಂದು ಪರಿಭಾವಿಸುತ್ತಾ...**

ರಾಷ್ಟ್ರೀಯತೆಯ ವಿಷಯವನ್ನು ಯಾವ ಪರಿಕರಗಳ ಮೂಲಕ ವಸ್ತುನಿಷ್ಠವಾಗಿ ಚರ್ಚಿಸಬೇಕಿತ್ತೋ ಅವನ್ನೇ ಬಲಪಂಥೀಯ ಶಕ್ತಿಗಳು ಕೈವಶ ಮಾಡಿಕೊಂಡಿರುವ ಕಾರಣ ರಾಷ್ಟ್ರೀಯತೆಯ ಕುರಿತ ಚರ್ಚೆ ಈಗಾಗಲೇ ಕುರುಕ್ಷೇತ್ರವಾಗಿಬಿಟ್ಟಿದೆ. ರಾಷ್ಟ್ರೀಯತೆ ಅಂದರೆ ಏನೆಂದು ವ್ಯಾಖ್ಯಾನಿಸುವ ನೈತಿಕ ಅಧಿಕಾರ ತಮಗೆ ಮಾತ್ರ ಇದೆ ಎಂದು ಅವರು ನಂಬಿದ್ದಾರೆ. ಅಷ್ಟೇ ಅಲ್ಲ, ತಾವು ನಂಬಿರುವ ರಾಷ್ಟ್ರೀಯತೆಯ ಸ್ವಯಂಪಾಕದ ವ್ಯಾಖ್ಯಾನವನ್ನು ಜನರೂ ಒಪ್ಪಿಕೊಳ್ಳಬೇಕೆಂದು ಒತ್ತಡ ಹೇರುತ್ತಿದ್ದಾರೆ. ಇಂಥ ಸ್ವೇಚ್ಛಾ ಒತ್ತಾಯಗಳನ್ನು ನಾವು ವಿರೋಧಿಸಬೇಕಿದೆ. ರಾಷ್ಟ್ರೀಯತೆ ಕುರಿತಾದ ಆಳವಾದ, ಶ್ರೀಮಂತವಾದ ಚರ್ಚೆಗಳನ್ನು ಅರ್ಥಪೂರ್ಣವಾಗಿ ಆರಂಭಿಸಬೇಕಿದೆ.

ಆದ್ದರಿಂದ ನಮ್ಮ ಸಾಮಾಜಿಕ ಕರ್ತವ್ಯವೆಂದರೆ ಒಂದು ನಿರ್ದಿಷ್ಟ ಪಕ್ಷದವರು ರಾಷ್ಟ್ರೀಯತೆಯನ್ನು ಕುರಿತ ತಮ್ಮ ವ್ಯಾಖ್ಯಾನವೇ ಅಂತಿಮ ಹಾಗೂ ಅದು ಇಡೀ ದೇಶದ ಜನರ ಒಳಿತಿಗಾಗಿಯೇ ಇದೆ ಎಂದು ಘೋಷಿಸುವ ನಡವಳಿಕೆಯನ್ನು ಪ್ರಶ್ನಿಸುವುದು.

ಕೆಲವು ಸಮುದಾಯಗಳನ್ನು ಅಂಚಿಗೊತ್ತರಿಸುವ ಕ್ಷುದ್ರ ಅಜೆಂಡಾ ತಮ್ಮ ಘೋಷಣೆಗಳಲ್ಲಿರುವುದನ್ನು ಮತ್ತು ತಮ್ಮ ಘೋಷಣೆಗಳು ಎಲ್ಲರ ಒಳಿತಿಗಾಗಿ ಇರುವುದೆಂದು ಅವರು ಹೇಗೆ ಸಮರ್ಥಿಸಿ ಕೊಳ್ಳುತ್ತಾರೆ ? ರಾಷ್ಟ್ರದ ಬಗ್ಗೆ ನಾವು ಮಾತಾಡ ಬೇಕಿರುವುದು ಕೇವಲ ಈ ಸ್ವಯಂಘೋಷಿತ ಬಲಪಂಥೀಯ ಪಕ್ಷಗಳಿಂದ ರಾಷ್ಟ್ರ, ರಾಷ್ಟ್ರೀಯತೆ, ರಾಷ್ಟ್ರಪ್ರಭುತ್ವಗಳನ್ನು ಕಿತ್ತು ನಮ್ಮ ಅಧೀನಪಡಿಸಿ ಕೊಳ್ಳುವುದಕ್ಕಷ್ಟೇ ಅಲ್ಲ, ತಳಸಮುದಾಯಗಳ ಸ್ವಯಂ ಅಸ್ಮಿತೆಗೆ ಈ ರಾಷ್ಟ್ರೀಯತೆ ಒಂದು ಚೌಕಟ್ಟನ್ನು ಒದಗಿಸುತ್ತದೆ ಎಂಬ ಕಾರಣಕ್ಕೆ.

ಎರಡನೆಯದಾಗಿ, ಜನರ ಒಳಿತಿನೊಂದಿಗೆ 'ರಾಷ್ಟ್ರೀಯತೆಯ ಪರಿಕಲ್ಪನೆ'ಗಿರುವ ಸಂಬಂಧ ಕುರಿತು ಸಕಾರಣ ಗುಮಾನಿ ಇರುವ ಜನರೂ, ರಾಷ್ಟ್ರೀಯತೆಯ ಒಮ್ಮುಖ ವ್ಯಾಖ್ಯಾನವನ್ನು ಒಪ್ಪಲೇ ಬೇಕೆಂದು ಹಠ ಹಿಡಿಯುತ್ತದೆ ಎಂಬ ಕಾರಣಕ್ಕೆ ಈ ಪಕ್ಷ / ಗುಂಪುಗಳೊಂದಿಗೆ ಅನುಸಂಧಾನ ಮಾಡುವುದಿಲ್ಲ ಎನ್ನುವುದು ತಪ್ಪಾಗುತ್ತದೆ.

ಕೊನೆಯದಾಗಿ, 'ರಾಷ್ಟ್ರಪ್ರಭುತ್ವ'ದ ಕಾರ್ಯ ನಿರ್ವಹಣೆ ಬಗ್ಗೆ ಮೌಲ್ಯಮಾಪನ ಮಾಡಲು ರಾಷ್ಟ್ರವು ಒಂದು ಚೌಕಟ್ಟನ್ನು ಒದಗಿಸುತ್ತದೆ. ರಾಷ್ಟ್ರವೆಂಬುದು ಅಭೌತಿಕ, ಮಾಂತ್ರಿಕ ವಸ್ತುವಲ್ಲ; ಅತಿಮಾನುಷ ವಸ್ತುವೂ ಅಲ್ಲ. ಅದು ಪ್ರಭುತ್ವದ ನೈತಿಕ, ಭೌತಿಕ ದೃಷ್ಟಿಕೋನವನ್ನು ಅಳೆಯುವ ಒಂದು ಮಾಪಕ ಅಷ್ಟೆ. ಅಂದರೆ ರಾಷ್ಟ್ರವು ನಮಗೆ ಪ್ರಭುತ್ವದ ನೈತಿಕ ಧಾರಣ ಶಕ್ತಿಯನ್ನು ಅಳೆಯುವ ವಿಶ್ಲೇಷಣೆಯ ಅವಕಾಶವನ್ನು ನೀಡುತ್ತದೆ. ಸಮಾನತೆ, ನ್ಯಾಯ, ಸ್ವಾತಂತ್ರ್ಯ ಹಾಗೂ ಘನತೆಯ ವಿಷಯಗಳಲ್ಲಿ ಪ್ರಭುತ್ವವು ಎಷ್ಟರಮಟ್ಟಿಗೆ ಮಾಪನದ ದೃಢತೆ ಹೊಂದಿದೆ ಎಂಬುದನ್ನು ನಿರ್ಧರಿಸುವ ಅವಕಾಶವನ್ನೂ ನೀಡುತ್ತದೆ. ವ್ಯಕ್ತಿಯ ಘನತೆಯ ವ್ಯಾಖ್ಯಾನವನ್ನು ವಿಸ್ತರಿಸಿದರೆ ಅದೇ ರಾಷ್ಟ್ರದ ಘನತೆ. ಈ ಅರ್ಥದಲ್ಲಿ ರಾಷ್ಟ್ರಪ್ರಭುತ್ವ ಎಂಬುದು ರಾಷ್ಟ್ರದ ಭೌತಿಕ ಅಭಿವ್ಯಕ್ತಿಯಾಗಿದೆ.

ರಾಷ್ಟ್ರವು ಶ್ರೀಸಾಮಾನ್ಯನ ಬದುಕಿನಲ್ಲಿ ಪ್ರಭುತ್ವ ಯಾವ ರೀತಿಯ ಪರಿಣಾಮ ಬೀರಿದೆ ಎಂದು ತಿಳಿಸುವ ಮಾನದಂಡವಷ್ಟೇ ಅಲ್ಲ, ಅವಕಾಶ ಮತ್ತು ಸಂಪನ್ಮೂಲಗಳು ಹೇಗೆ ಹಂಚಿಕೆಯಾಗಬೇಕು ಎನ್ನುವ ಅಂಶವನ್ನೂ ಒಳಗೊಂಡಿದೆ.

ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸಮಾನತೆ, ನ್ಯಾಯ, ಸ್ವಾತಂತ್ರ್ಯ ಮತ್ತು ಘನತೆಗಳ ಗುರಿಗಳನ್ನು ಸಾಧಿಸಲು ಬೇಕಾದ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಹಾಗೂ ಹಂಚಿಕೆ ಮಾಡಲು ನಮ್ಮ ಈ 'ರಾಷ್ಟ್ರ'ದ ಪರಿಕಲ್ಪನೆ ಅವಶ್ಯವಾಗಿದೆ. ಹೀಗೆ ಪ್ರಭುತ್ವದ ಸಕ್ರಿಯ, ಪ್ರಜಾಪರ ಯೋಜನೆಗಳ ಮಧ್ಯಪ್ರವೇಶದ ಮೂಲಕ ರಾಷ್ಟ್ರಕ್ಕೆ ಒಂದು ಸೌಮ್ಯ ಸ್ವರೂಪ ದಕ್ಕುತ್ತದೆ. ರಾಷ್ಟ್ರದ ಜನತೆಯ ಭೌತಿಕ ಬದುಕಿನಲ್ಲಿ ಒಂದು ಪರಿವರ್ತನಾ ಸ್ವರೂಪಿ ಪಾತ್ರವನ್ನು ಪ್ರಭುತ್ವವು ನಿರ್ವಹಿಸುತ್ತದೆ. ಪ್ರಭುತ್ವವು ರಾಷ್ಟ್ರದ ಭೌತಿಕ ಅಭಿವ್ಯಕ್ತಿಯಾಗಿದ್ದರೂ, 'ಭೌತಿಕ ಅಭಿವ್ಯಕ್ತಿ' ಎನ್ನುವುದರೊಳಗೆ ಅಡಕವಾಗಿರುವ ಸಂಕೀರ್ಣ ಆಯಾಮವನ್ನು ನಿರ್ಲಕ್ಷಿಸುವುದರ ಮೂಲಕ 'ರಾಷ್ಟ್ರ'ದ ದುರುಪಯೋಗ ಆಗದಂತೆ ಎಚ್ಚರ ವಹಿಸಬೇಕು.

ರಾಷ್ಟ್ರೀಯತೆಯ ಪರಿಕಲ್ಪನೆಯ ಮಿತಿಗಳು: ಇದರ ಕುರಿತು ನೈತಿಕ ಹಾಗೂ ಸೈದ್ಧಾಂತಿಕವಾಗಿ ಒಂದು ತರ್ಕವನ್ನು ನಾವೀಗ ಮುಂದಿಡಬೇಕಿದೆ. 'ಗಡಿ ರೇಖೆ ನಿಯಂತ್ರಣ'ದಿಂದ ಹಿಡಿದು ಬಾಹ್ಯರೂಪದ ವ್ಯಾಖ್ಯಾನವನ್ನು ಹೊಂದಿರುವ ರಾಷ್ಟ್ರೀಯತೆಯ ಆಂತರಿಕ ನ್ಯೂನತೆಗಳನ್ನು ಗುರುತಿಸುವ ಸಲುವಾಗಿ ನಾವು ಈಗ ನೈತಿಕ ತರ್ಕವೊಂದನ್ನು ಬಳಸಬೇಕಾಗಿದೆ. 'ರಾಷ್ಟ್ರ'ವನ್ನು ವ್ಯಾಖ್ಯಾನಿಸಲು ಬಲಪಂಥೀಯರು ದೃಗ್ಗೋಚರ ಮಾನದಂಡವನ್ನು ಬಳಸುವಾಗ ಅದರ ಮಿತಿ / ಕೊರತೆಗಳನ್ನು ಗಮನಿಸುವುದಿಲ್ಲ.

ಈ ಮಿತಿಗಳನ್ನು ನಾವು ಎರಡು ಹಂತ ಗಳಲ್ಲಿ ಗುರುತಿಸಬಹುದು. ಬಲಪಂಥೀಯರು 'ಒಬ್ಬನು ರಾಷ್ಟ್ರವಾದಿ ಹೌದೇ' ಎಂದು ವ್ಯಾಖ್ಯಾನಿಸಲು, ಅವನು ತೋರುವ ಗಡಿಯಾಚೆಗಿನ ನಿಷ್ಠೆಯನ್ನು ನೇತ್ಯಾತ್ಮಕವಾಗಿ ಬಳಸುತ್ತಾರೆ. ಆದ್ದರಿಂದ "ಭೂಮಿ" ಅಥವಾ "ತಾಯಿನಾಡು" ಜೊತೆಗಿನ ಸಂಪರ್ಕವು ರಾಷ್ಟ್ರವನ್ನು ವ್ಯಾಖ್ಯಾನಿಸುವ ಆತ್ಯಂತಿಕ ಮಾನದಂಡವಾಗುತ್ತದೆ.

ಆದರೆ ಇದೇ ತರ್ಕ ಬಳಸಿ ನಮ್ಮ ದೇಶದ ದಲಿತರು ಸಾವಿರಾರು ವರ್ಷಗಳಿಂದ ಈ ದೇಶದ ಮೂಲ ನಿವಾಸಿಗಳು ಎಂಬ ಪ್ರಮಾಣವನ್ನು ಒಪ್ಪಲು ಅವರು ಸಿದ್ಧರಿಲ್ಲ. ಈ ಪುಣ್ಯಭೂಮಿ ಭರತಖಂಡ ದೊಳಗೆ "ಬಹಿಷ್ಕೃತ ಭಾರತ"ವೊಂದು (ಅಂಬೇಡ್ಕರ್ ಮಾತಿನಂತೆ) ಅಸ್ತಿತ್ವದಲ್ಲಿದೆ.

ರಾಷ್ಟ್ರವನ್ನು ವ್ಯಾಖ್ಯಾನಿಸಲು ಪ್ರಾದೇಶಿಕತೆಯೇ ಮುಖ್ಯ ಮಾನದಂಡವಾಗಿರುವ ಬಲಪಂಥೀಯರ ಈ ಸ್ವಯಂ ನಿರ್ಧಾರಿತ ಘೋಷಣೆಗಳ ನಿಲುವು ವಿಪರ್ಯಾಸಕರವಾದದ್ದು. ಯಾಕೆಂದರೆ ಅದಕ್ಕೆ "ಬಹಿಷ್ಕೃತ ಭಾರತ" ಅಥವಾ ಮೂಲೆಗೊತ್ತರಿಸಲ್ಪಟ್ಟ ಭಾರತದ ಸ್ಥಿತಿಯ ಬಗ್ಗೆ ಗಂಭೀರವಾಗಿ ಯೋಚಿಸಲು ಬೇಕಾದ ನೈತಿಕ ಬಲವೇ ಇಲ್ಲ. ಗಡಿರೇಖೆ ವಿಷಯದಲ್ಲಿ ತೀವ್ರ ಭಾವನಾತ್ಮಕವಾಗಿ ಸ್ಪಂದಿಸುವ ಬಲಪಂಥಕ್ಕೆ ನಮ್ಮ ಸಮಾಜದ ಒಳಗಿನ ಮಿತಿ/ಬಿರುಕುಗಳನ್ನು ನಿವಾರಿಸುವ ಕುರಿತು ತೀವ್ರವಾದ ಸ್ಪಂದನೆಯೇ ಇಲ್ಲ. ದೇಶದೊಂದಿಗಿನ ನಮ್ಮ ಸಂಬಂಧವು ಮೂಲತತ್ವವಾದಿ ಅಲ್ಲ, ಯಾಕೆಂದರೆ ಅದು ಭೌಗೋಳಿಕ ಪರಿಕಲ್ಪನೆಯ ಮೇಲೆ ಅನವಶ್ಯಕವಾಗಿ ಅತಿಯಾಗಿ ಅವಲಂಬಿತವಾಗಿದೆ. ಅಂದರೆ ಒಳಗಿನವರು – ಹೊರಗಿನವರು; ಭೌಗೋಳಿಕ ವ್ಯಾಪ್ತಿ – ಅದರಾಚೆಗಿನ ಪ್ರದೇಶ ಎಂಬಂಥ ದ್ವೈತ ಪರಿಕಲ್ಪನೆಗಳಿಗೆ ಇಂಥಾ ಕಲ್ಪಿತ ವ್ಯಾಖ್ಯಾನಗಳು ಸಿಂಧುತ್ವ ಮತ್ತು ಪ್ರಾಮುಖ್ಯತೆಯನ್ನು ತಂದುಕೊಡುತ್ತಾ ಭಾರತವನ್ನು

## ವಿಪರ್ಯಾಸ

ಸುದ್ದಿ ಮಾಡುವವ
ತಾನೇ ಸುದ್ದಿಯಾಗಿ
ಮುಖಪುಟದಲಿ
ಫೋಟೋ ಸಮೇತ
"ಇನ್ನಿಲ್ಲ"ವೆಂದು ಸುದ್ದಿಯಾಗಿ ಬಿಟ್ಟ!!
ನಿನ್ನೆಯಷ್ಟೇ
ವಂಚಕರ, ಜಾಲ
ಜಾಲಾಡಿಸಿ, ಎಳೆ – ಎಳೆಯಾಗಿ
ಅವರ ಕರ್ಮಕಾಂಡ ತೆರೆದಿಟ್ಟಿದ್ದ !!!

ಎಚ್. ಕೆ. ಕೊಟ್ರಪ್ಪ
ಹರಿಹರ



ರಾಷ್ಟ್ರವೆಂದು ಕರೆಯುತ್ತವೆ. ನಿಜ ಹೇಳಬೇಕೆಂದರೆ ಇಂಥಾ ಸಂಕಥನಗಳ ತರ್ಕ, ನರಿ ತನ್ನ ಬಾಲವನ್ನು ತಾನೇ ಕುಯ್ದುಕೊಂಡಂತೆ. ಭಾರತವನ್ನು ರಾಷ್ಟ್ರವೆಂದು ಕರೆದುಕೊಳ್ಳಲು ಇರುವ ಭೌತಿಕ ನಿಷ್ಕರ್ಷೆಯ ತಾತ್ವಿಕ ಆಧಾರವನ್ನು ಉಪಯೋಗಿಸಿಕೊಳ್ಳುವವರ ವಿರುದ್ಧವೇ ಅದು ತಿರುಗಿಬೀಳುತ್ತದೆ. ಭಾರತದ 'ಮೂಲನಿವಾಸಿಗಳು' ಎಂಬ ತರ್ಕದ ಮಾನದಂಡವನ್ನು ಕೆಲವು ಪಕ್ಷಗಳು 'ಆರ್ಯರು' (ದ್ವಿಜ ಸಮಾಜದ ಮೇಲ್ತುದಿಯಲ್ಲಿರುವವರು) 'ಭಾರತಕ್ಕೆ ಹೊರಗಿಂದ ಬಂದವರು' ಎಂದು ವಾದಿಸಲು ಉಪಯೋಗಿಸಿಕೊಳ್ಳುತ್ತಿದ್ದಾರೆ.

'ರಾಷ್ಟ್ರ'ವನ್ನು 'ಮೂಲತತ್ವ' ಸಿದ್ಧಾಂತದಿಂದ ಬಿಡುಗಡೆಗೊಳಿಸಿ ಚರ್ಚೆಯನ್ನು ಮುಂದೊಯ್ಯುವ ನೈತಿಕ ಹೊಣೆ ನಮ್ಮ ಮೇಲಿದೆ. 'ರಾಷ್ಟ್ರೀಯತೆಯ' ವ್ಯಾಖ್ಯಾನವನ್ನು ನಾವು ನಿರುದ್ವೇಗ ಧ್ವನಿಯಲ್ಲಿ ಹೇಳದೇ ಇದ್ದರೆ, ಮೂಲತತ್ವ (ಬೇರುಮೂಲ) ಸಿದ್ಧಾಂತವನ್ನು ಉಪಯೋಗಿಸಿಕೊಂಡು ಅಲ್ಪಸಂಖ್ಯಾತ ಸಮುದಾಯದ ಪ್ರಜೆಗಳನ್ನು 'ದೇಶಕ್ಕೆ ಅಪಾಯಕಾರಿ' ಎಂಬಂತೆ ಚಿತ್ರಿಸುವ ಸಂಕಥನಕ್ಕೆ ಕಡಿವಾಣ ಹಾಕಲಾಗುವುದಿಲ್ಲ. ರಾಷ್ಟ್ರೀಯತೆಯ ಈ ಸಂಕಥನ, ಭಾರತದಲ್ಲಿ ಬದುಕುತ್ತಿರುವವರ ಅಸ್ತಿತ್ವವನ್ನು ಪ್ರಶ್ನೆ ಮಾಡುವ ದಬ್ಬಾಳಿಕೆಯ ಶಕ್ತಿಯನ್ನು ಪಡೆದುಕೊಳ್ಳುತ್ತದೆ. 'ರಾಷ್ಟ್ರ'ಕ್ಕೆ ನಿಷ್ಠೆ ವ್ಯಕ್ತಪಡಿಸದ ಜನರನ್ನು ದೇಶ ಬಿಟ್ಟುಹೋಗುವಂತೆ ಒತ್ತಾಯ ಮಾಡುತ್ತದೆ. ಕೆಲವರನ್ನು ಗುರಿಮಾಡಿ ಹೀಳುಗಳೆಯುವ ಪರಿಪಾಠ ಬೆಳೆಯುತ್ತದೆ. ಹಾಗಾಗಿ, ಎಲ್ಲರನ್ನೂ ಒಳಗೊಳ್ಳುವ ರಾಷ್ಟ್ರವು ತನ್ನ ಮೂಲತತ್ವದ ಆಧಾರದ ಮೇಲೆಯೇ ಛಿದ್ರಗೊಳ್ಳುತ್ತದೆ. ಆದ್ದರಿಂದಲೇ ಬಲಪಂಥೀಯ ರಾಷ್ಟ್ರೀಯವಾದದ ಒಳಗಿರುವ ವೈರುಧ್ಯಗಳನ್ನು ಅರಿತುಕೊಳ್ಳುವ ನೈತಿಕ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. 'ರಾಷ್ಟ್ರೀಯತೆಯ' ಮೇಲೆ 'ಮೂಲದ ತತ್ವ'ದ ಪ್ರೀಮಿಯಂ ಹಾಕುವ ಪ್ರಯತ್ನದ ಸೀಮಿತತೆ ಗೊತ್ತಿಲ್ಲದಿರುವವರ ಬಳಿ ಚರ್ಚಿಸಲು ಈ ವಿಧಾನ ಬೆಳೆಸಬೇಕು.

**ಪ್ರಭುತ್ವ ಏನು ಮಾಡಬೇಕು?**

ಪ್ರಭುತ್ವವು ರಾಷ್ಟ್ರಕ್ಕಿಂತ ಹೆಚ್ಚಿನ ಪ್ರಾಮುಖ್ಯತೆ ಪಡೆಯಬಾರದು. ಪ್ರಭುತ್ವ/ಸರ್ಕಾರವು ತನ್ನ ಸಂಕುಚಿತ ಹಿತಾಸಕ್ತಿಗಳಿಂದಾಗಿ ರಾಷ್ಟ್ರದ ಪರಿಕಲ್ಪನೆಗೆ ಧಕ್ಕೆ ಬರದಂತೆ ಎಚ್ಚರ ವಹಿಸಬೇಕು. ಜೆಎನ್‌ಯು ಸಂದರ್ಭದಲ್ಲಿ ರಾಷ್ಟ್ರದ ಮೂಲತತ್ವವನ್ನೇ ಮೀರಿ ಪ್ರಭುತ್ವ ಸವಾರಿ ನಡೆಸುತ್ತಿದೆ. ಅದು ಹೇಗೆಂದು ಒಂದೆರಡು ಉದಾಹರಣೆಗಳ ಮೂಲಕ ನೋಡೋಣ:

ರಾಷ್ಟ್ರ ಹಾಗೂ ಪ್ರಭುತ್ವದ ಮಧ್ಯೆ ಮತಭೇದ ಇರುವ ಹಾಗೂ ರಾಷ್ಟ್ರಕ್ಕಿಂತ ಪ್ರಭುತ್ವವೇ ಹೆಚ್ಚು ಶಕ್ತಿಶಾಲಿಯಾಗುವಂತೆ ಯತ್ನ ನಡೆಸುತ್ತಿರುವ ಕೆಲವು ಕ್ಷೇತ್ರಗಳನ್ನು ಗುರುತಿಸಲು ಒಳನೋಟ ಬೇಕು. ೧೯೯೧ರ ಮೊದಲಿದ್ದ ಕಲ್ಯಾಣ ರಾಜ್ಯದ ಕೋಡುಗಳನ್ನು ನವ ಉದಾರವಾದದ ಒತ್ತಡವು ಮುರಿದಿದೆಯೆಂದು ಕೊಂಡರೂ ಪ್ರಭುತ್ವದ ಮೇಲುಗೈಯೇ ನಡೆಯುತ್ತಿದೆ. ಜನರು ರಾಷ್ಟ್ರವನ್ನು ವ್ಯಾಖ್ಯಾನಿಸುವ ಬದಲು ಪ್ರಭುತ್ವವೇ ರಾಷ್ಟ್ರವನ್ನು ವ್ಯಾಖ್ಯಾನ ಮಾಡುತ್ತಿದೆ. ಈ ನಿರ್ದಿಷ್ಟ ವ್ಯಾಖ್ಯಾನವನ್ನು ಜನರು ಒಪ್ಪುವಂತೆ ಮಾಡಲು ಜನರ ವಿರುದ್ಧ ದೇಶದ್ರೋಹದ ಆಪಾದನೆಯನ್ನು ಮಾಡುತ್ತಿದೆ. ಆದ್ದರಿಂದಲೇ 'ರಾಷ್ಟ್ರದ' ವ್ಯಾಖ್ಯಾನವನ್ನು ಪ್ರಭುತ್ವದ ಕಪಿಮುಷ್ಟಿಯಿಂದ ಬಿಡಿಸಬೇಕಾಗಿದೆ.

ಹೀಗೆ ಪುನರ್‌ವ್ಯಾಖ್ಯಾನಿಸಬೇಕಾದಲ್ಲಿ ಜಾತಿ ಹಾಗೂ ಲಿಂಗ ತಾರತಮ್ಯದ ಎಲ್ಲಾ ಮುಖಗಳ ವಿರುದ್ಧವೂ ಹೋರಾಡಬೇಕಾಗುತ್ತದೆ. ಸಂವಿಧಾನವನ್ನು ಅನುಸರಿಸಿ ಪ್ರಭುತ್ವವು ತಾನೇ ಮುಂದೆ ಹೆಜ್ಜೆ ಇಟ್ಟು ಅಂಥ ಅಸಮಾನತೆ, ಅನ್ಯಾಯಗಳನ್ನು ತೊಡೆದುಹಾಕಬೇಕಾಗುತ್ತದೆ. ಆದರೆ ರಾಷ್ಟ್ರದ ಸಾಂಸ್ಥಿಕ ಬದುಕಿನಲ್ಲಿ ಹಾಸುಹೊಕ್ಕಿರುವ ಈ ತಾರತಮ್ಯ/ಅನ್ಯಾಯಗಳನ್ನು ತೊಡೆದುಹಾಕುವುದೇ ಪ್ರಭುತ್ವಕ್ಕಿರುವ ದೊಡ್ಡ ಸವಾಲು.

ಆಧುನಿಕ ಅಧಿಕಾರಶಾಹಿ ಹಾಗೂ ಜಾತ್ಯಾಧಾರಿತ ನಾಗರಿಕ ಸಮಾಜಗಳ ಗಡಿರೇಖೆಗಳು ಒಂದಕ್ಕೊಂದು ಹೆಣೆದುಕೊಂಡಿರುವುದನ್ನು ಕಾಣಬಹುದು. ಇವೆರಡರ ಮಿಶ್ರಣವು ರಾಷ್ಟ್ರದ ಸುಧಾರಣಾ ದೃಷ್ಟಿಕೋನದ ನ್ಯಾಯತತ್ವವನ್ನು ಸೋಲಿಸಿಬಿಡುವ ಭಯ ಇದೆ. ರೋಹಿತ್ ವೇಮುಲನ ಪ್ರಕರಣದಲ್ಲಿ ಈ ನ್ಯಾಯತತ್ವವನ್ನು ಸೋಲಿಸಲು ರಾಷ್ಟ್ರೀಯತೆಯ ವಾದವನ್ನು ಬಳಸಿದ್ದು ಎಲ್ಲರಿಗೂ ಗೊತ್ತಿದೆ. ರೋಹಿತನಿಗೆ ದಕ್ಕಬೇಕಾದ್ದನ್ನು ತಲುಪಿಸಲಾಗದ ಅದಕ್ಷತೆಯು ನ್ಯಾಯವನ್ನು ನಿರ್ಲಕ್ಷಿಸಿದ್ದಷ್ಟೇ ಅಲ್ಲ, ಮುಖ್ಯವಾಗಿ 'ತಾನೂ ಏನೂ ಅಲ್ಲ' ಎಂಬ ಭಾವವನ್ನು ಅವನಲ್ಲಿ ಹುಟ್ಟುಹಾಕಿತ್ತು. ರೋಹಿತನ ಪದ್ಯ ಇನ್ನೂ ನೆನಪಿದೆ. ಅದರ ಕೊನೆಯ ಎರಡು–ಮೂರು ಸಾಲುಗಳು ತುಂಬ ಆಳವಾದ ಅರಿವನ್ನು ನಮಗೆ ನೀಡುತ್ತವೆ. ಒಬ್ಬ ಸಾಮಾನ್ಯ ದಲಿತನ ಬದುಕಿನಲ್ಲಿರುವ ಶೂನ್ಯವನ್ನು ತುಂಬುವಲ್ಲಿ ರಾಷ್ಟ್ರದ ಸೋಲನ್ನು ಅದು ಎತ್ತಿ ತೋರಿಸುತ್ತದೆ. ಮುಖ್ಯವಾಗಿ ಅದು ರಾಷ್ಟ್ರವನ್ನು ಪ್ರಭುತ್ವ ಸೋಲಿಸುತ್ತಿರುವ ಸಂಕೇತ. ನ್ಯಾಯ, ಸಮಾನತೆ, ಘನತೆಗಳನ್ನು ಎತ್ತಿ ಹಿಡಿಯುವ ಸಾರ್ವಕಾಲಿಕ ತತ್ವಗಳನ್ನು ಆಚರಣೆಗೆ ತರಬೇಕೆಂಬ ಸಾಮಾನ್ಯೀಕೃತ ಮೌಲ್ಯಗಳ ಮಾದರಿಯನ್ನು ರಾಷ್ಟ್ರವು ಪ್ರಭುತ್ವಕ್ಕೆ ಕೊಡಬೇಕೇ ಹೊರತು ಪ್ರಭುತ್ವವು ರಾಷ್ಟ್ರಕ್ಕೆ ಕೊಡುವಂತಾಗಬಾರದು.

ಆದ್ದರಿಂದಲೇ ಪ್ರಭುತ್ವ ಮತ್ತು ಅದರ ಅಧಿಕಾರಶಾಹಿಯು ದಲಿತರ ಆಶಯಗಳಿಗೆ, ಆ ಮೂಲಕ ರಾಷ್ಟ್ರದ ಆಶಯಗಳಿಗೆ ಸ್ಪಂದಿಸಬೇಕಿದೆ. ಈ ಸಂದರ್ಭದಲ್ಲೇ ನಾವು ರಾಷ್ಟ್ರ ಮತ್ತು ಪ್ರಭುತ್ವದ ನಡುವಿನ ಸಂಘರ್ಷವನ್ನು ಗುರುತಿಸಬೇಕಿದೆ. ರಾಷ್ಟ್ರದ ನಿಲುವಿನ ವಿಪರ್ಯಾಸವನ್ನು ಅದು ಬಗೆಹರಿಸುತ್ತದೇನೋ ಎಂದುಕೊಳ್ಳಬಹುದು. ಆದರೆ ರಾಷ್ಟ್ರ ನೀಡುವ ಭರವಸೆ, ಕೊಡುವ ವಾಗ್ದಾನಗಳು ಏನೇ ಇರಲಿ, ಅವು ಇವೆಲ್ಲವನ್ನೂ ಈಡೇರಿಸುವಲ್ಲಿ ವಿಫಲವಾದಾಗ ಅನಿವಾಸಿ ಭಾರತೀಯರ ಹಾಗೆ ದೇಶವನ್ನು ತೊರೆದು ಹೋಗಲು ಸಾಧ್ಯವಿಲ್ಲವಲ್ಲ! ಒಳಗಿನ ಬಿರುಕು, ಕೊರೆಗಳನ್ನು ಮುಚ್ಚಿ ರಾಷ್ಟ್ರವು ಏಕತ್ರವಾಗಿರುವಂತೆ ನೋಡಿಕೊಳ್ಳುವುದು ಪ್ರಭುತ್ವದ ಕೆಲಸವಾಗಬೇಕು.

ಇಂಗ್ಲಿಷ್ ಮೂಲ : **ಗೋಪಾಲ್ ಗುರು** ಕನ್ನಡಕ್ಕೆ : **ಡಾ॥ ಸುಮಾ ಎಂಬಾರ್**
ನಂ. ೩, "ರಾಮಪ್ರಿಯ", ೧೩ನೇ ಬ್ಲಾಕ್, ಎಸ್.ಬಿ.ಎಂ. ಕಾಲೋನಿ, ಶ್ರೀರಾಮಪುರ
೨ನೇ ಹಂತ, ಮೈಸೂರು – ೫೭೦ ೦೨೩
email : embarsuma0@gmail.com

## ಕಾಲದ ಗತಿ

ಕಾಲದಽ ಗತಿಯಲ್ಲಿ ಏನೆಲ್ಲಾಽ ಕಥೆಯೋ
ಅದುವೆ ನಮ್ಮೀ ನಡಿಗೆಯ ಗತಿಯೋ ॥ಪ॥

ನಡೆವ ಕಾಲಾಗಽ ಏರಿಳಿತವಿದೆಯೋ
ಇದ್ದಽ ಕಸುವೆಲ್ಲಾ ಕಳೆಯುತಲಿದೆಯೋ ॥೧॥

ಸುಡುವಽ ಬಿಸಲಿದು ಕೇಡಗಾಲವೇನೋ
ಬಂದರೂ ಆಗೀಗಽ ಅಷ್ಟೇ ಅಲ್ಲೇನೋ ॥೨॥

ಕೊರೆವಽ ಚಳಿಯಿದು ಅಳಗಾಲವೇನೋ
ಮೈ–ಮನ ಸೊರಗಿ ಕೊರಗುವದಲ್ಲೇನೋ ॥೩॥

ಬರುವ ಮಳೆಯಿದು ಉಳಗಾಲವೇನೋ
ಬಂದದ್ದು ಹಸಿರಾಗಿ ಬೆಳೆಬೇಕಲ್ಲೇನೋ ॥೪॥

ಅಳಗಾಲಽ ಉಳಗಾಲಽ ಏನಿದೇ ಏನೋ
ಕಂಡುಂಡಽ ಹಾಗೆಲ್ಲಽ ನಡೆಬೇಕಲ್ಲೇನೋ ॥೫॥

**ಡಿ. ಬಿ. ಢಂಗ**
ಫ್ಲಾಟ್ ನಂ. ೧೯೨, ಎಲಿಗಾರ ಫ್ಲಾಟ್ಸ್, ಅತ್ತಿಕೊಳ್ಳ, ಧಾರವಾಡ – ೦೭






**ನಮ್ಮ ಭೂಮಿ ನಮ್ಮ ಹೋರಾಟ**

ಅನು : ಸ. ರಘುನಾಥ

**ಪುಟ : ೭೦**
**ಬೆಲೆ : ರೂ. ೬೦/-**

**ಚಾಗನೂರು, ಸಿರಿವಾರ ನೀರಾವರಿ ಭೂ ರಕ್ಷಣಾ ಹೋರಾಟ ಸಮಿತಿ**
ಅನಂತಪುರ ರೋಡ್
ಬಳ್ಳಾರಿ – ೫೮೩೧೧೧

*ಸಿರಿವಾರ ಹಾಗೂ ಚಾಗನೂರು ಗ್ರಾಮಗಳ ರೈತರು ತಮ್ಮ ನೆಲ – ಜಲವನ್ನು ರಕ್ಷಿಸಿಕೊಳ್ಳಲು ಮಾಡುತ್ತಿರುವ ಹೋರಾಟದ ಸಮಗ್ರ ಚಿತ್ರಣ. ಎರಡು ವಿಮಾನ ನಿಲ್ದಾಣಗಳಿದ್ದರೂ ಮೂರನೇ ವಿಮಾನ ನಿಲ್ದಾಣವನ್ನು ಅಲ್ಲಿನ ಕೃಷಿ ಭೂಮಿಯಲ್ಲಿ ಸ್ಥಾಪಿಸಲು ಹವಣಿಸಿದ್ದುದರ ವಿರುದ್ಧ ಈ ಹೋರಾಟ. ರೈತ ದೇಶದ ಬೆನ್ನೆಲುಬೆಂದು ಹಾಡಿಹೊಗಳುತ್ತಲೇ ರೈತರ ಜಮೀನು ಕಸಿದು ಅಭಿವೃದ್ಧಿಯ ಹೆಸರಿನಲ್ಲಿ ಕೃಷಿಯೇತರ ಕಾರಣಕ್ಕಾಗಿ ಸಮೃದ್ಧ ಬೆಳೆ ಬರುವ ನೆಲವನ್ನು ಕಬಳಿಸುವ ಹುನ್ನಾರದ ವಿರುದ್ಧ ಈ ಹೋರಾಟ. ಜನರಿಂದಲೇ ಮತ ಗಳಿಸಿ ಗೆದ್ದು ಶಾಸಕರಾಗಿ, ಸಚಿವರಾಗಿ ಜನರಿಗೆ – ರೈತರಿಗೆ ಮೋಸ ಮಾಡುವ ಇಂದಿನ ರಾಜಕೀಯ ಪುಢಾರಿಗಳ ವಿರುದ್ಧದ ಪ್ರತಿಭಟನೆ ಮತ್ತು ಹೋರಾಟ. ಅಲ್ಲಿನ ರೈತರು ಭೂಮಿ ಎಂದರೆ ಆಸ್ತಿ ಮಾತ್ರವಲ್ಲ, ಆತ್ಮ ಗೌರವ ಕೂಡಾ ಎಂದು ಈ ಗ್ರಾಮಗಳ ರೈತರು ತೋರಿಸಿಕೊಟ್ಟ ಒಂದು ಕಥಾನಕ ಇದು. ರೈತನನ್ನು ಕೆಣಕಿದರೆ, ಅವಮಾನಿಸಿದರೆ ಆತನ ಸಿಟ್ಟು ಬೆಂಕಿಯ ಜ್ವಾಲೆಗಳಂತೆ ಹರಡಿ ಎಂಥ ಸರಕಾರಗಳನ್ನೂ ಸಹ ಉರುಳಿಸಬಲ್ಲುದು ಎಂಬುದಕ್ಕೆ ಈ ಹೋರಾಟವೊಂದು ಉದಾಹರಣೆ. ದುಷ್ಟ ರಾಜಕಾರಣಿಗಳಿಂದ ತಮ್ಮದೇ ಜಮೀನನ್ನು ಉಳಿಸಿಕೊಳ್ಳಲು ರೈತ ಪಡಬೇಕಾದ ಕಷ್ಟದ ಅರಿವು ಹಾಗೂ ಕೆಚ್ಚು ಈ ಕೃತಿಯಲ್ಲಿ ಅನಾವರಣಗೊಂಡಿದೆ.*

**ಮರೀಚಿಕೆ – ಆರಿಫ್ ಲವ್ಸ್ ಸುಮಿತ್ರಾ** ಮೂಲ : ಅಬ್ದುಲ್ಲಾಹ್ ಖಾನ್
ಅನು : ಪ್ರೊ॥ ಎಂ. ಅಬ್ದುಲ್ ರೆಹಮಾನ್ ಪಾಷ

**ಪುಟ : ೨೦೮** **ಬೆಲೆ : ರೂ. ೨೦೦/-**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ತುಂಬಿದ ಕುಟುಂಬಗಳಲ್ಲಿನ ಅಂತರ್ ಧರ್ಮೀಯ ಯುವ ಪ್ರೇಮಿಗಳಿಬ್ಬರು ಎಂದಿಗೂ ನನಸಾಗದ ತಮ್ಮ ದಾರಿಯಲ್ಲಿದ್ದಾರೆ. ನಾವೇ ಕಂಡುಕೊಂಡ ಕಟ್ಟುಪಾಡುಗಳ ಸಾಮಾಜಿಕ ವ್ಯವಸ್ಥೆಯ ಹಿಡಿತದಲ್ಲಿ ಬಂಧಿಯಾಗಿದ್ದಾರೆ. ಬಿಡಲೂ ಆಗದ ನುಂಗಲೂ ಆಗದ ಆಕರ್ಷಣೆಯ ಬಿಸಿ ತುಪ್ಪವಾಗಿದೆ ಈ ಪ್ರೇಮ ಪ್ರಕರಣ. ಯುವಕ ಸ್ವನಿಯಂತ್ರಣ ಸಾಧಿಸಲಾಗದೆ ಸುಳಿಯಲ್ಲಿ ಸಿಕ್ಕಿದರೆ ವಿವಾಹಿತ ಮಹಿಳೆಗೆ ತನ್ನ ಸಂಸಾರದಿಂದ ಹೊರ ಬರಲಾಗದ ಕಟ್ಟುಪಾಡುಗಳಿವೆ. ಇಬ್ಬರೂ ಸಮಾನಾಂತರವಾಗಿ ಕ್ರಮಿಸುತ್ತಿದ್ದಾರೆ– ಎಂದಿಗೂ ಒಂದುಗೂಡಲಾರದಂತೆ! ಸಂಬಂಧಗಳು ಒಮ್ಮೊಮ್ಮೆ ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡಿಬಿಡುತ್ತವೆ. ಕೆಲವೊಮ್ಮೆ ಸಂಬಂಧಗಳ ಸ್ಥಾನಪಲ್ಲಟವಾಗುವುದೂ ಇದೆ. ಪರ – ವಿರೋಧ ನೆಲೆಗಳನ್ನು ಬದಲಾಯಿಸಿಕೊಂಡು ಗೊಂದಲವೆಬ್ಬಿಸುವುದೂ ಇದೆ! ಆಮಿಷಗಳಿಗೆ ಬಲಿಯಾದ ಮನುಷ್ಯನೊಬ್ಬ ಮಾನಸಿಕ ಸಮತೋಲನ ಕಳೆದುಕೊಂಡವನಂತೆ ತನ್ನ ಭವಿಷ್ಯದ ದಾರಿಯಿಂದ ಹೊರಳಿ ದೂರ ಸಾಗಿ ತನ್ನ ತಪ್ಪೇನೂ ಇಲ್ಲದಂತೆ ನುಣುಚಿಕೊಳ್ಳುವಂಥ ಒಂದು ಕಥನ.*



**ಕಾಳಿ ಗಂಗಾ** ಕೊಂಕಣಿ ಮೂಲ : ಮಹಾಬಳೇಶ್ವರ ಸೈಲ್
ಕನ್ನಡಕ್ಕೆ : ಗೀತಾ ಶೆಣೈ

**ಪುಟ : ೨೮೦** **ಬೆಲೆ : ರೂ. ೨೭೫/-**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಒಂದು ಗ್ರಾಮ ಜೀವನ ವಿಧಾನದ ಪರಿಚಯ. ಇಲ್ಲಿ ಶಿಸ್ತು, ಪ್ರಾಮಾಣಿಕತೆ, ವಿಶ್ವಾಸ, ಕಾಳಜಿ, ಸಹಕಾರ ಇದ್ದಂತೆಯೇ ಮೂಢನಂಬಿಕೆ, ಸಂಪ್ರದಾಯಶೀಲತೆ, ಸ್ವಾರ್ಥ, ಜಗಳ, ಆಸ್ತಿಸಂಬಂಧ ದಾಯಾದಿ ಮತ್ಸರ, ಹಿರಿತನದ ಗತ್ತು, ಪರಂಪರಾಗತ ನಡವಳಿಕೆ ಇವು ಕೂಡ ಹಾಸುಹೊಕ್ಕಾಗಿವೆ. ಕುಲ – ಮನೆತನದ ವಿಷಯಕ್ಕೆ ಇನ್ನಿಲ್ಲದ ಪ್ರಾಶಸ್ತ್ಯವಿದೆ. ಆಧುನಿಕತೆಯ ಹಲವು ವಿಚಾರಗಳು ಬದುಕಿನಲ್ಲಿ ಇಣುಕು ಹಾಕಿದಾಗ ಆಘಾತ – ಗೊಂದಲಗಳೇರ್ಪಡುತ್ತವೆ. ಜಗತ್ತು ಬದಲಾಗುತ್ತಿದ್ದರೂ ಆಚರಣೆಯಲ್ಲಿ ಅದನ್ನೊಪ್ಪಿಕೊಳ್ಳುವ ಉದಾರತೆಯಂತೂ ಇಲ್ಲವೇ ಇಲ್ಲ. ಇಲ್ಲಿನ ಜನ ಕಷ್ಟಜೀವಿಗಳು. ಕಾಳಿ ನದಿಯ ಆಸುಪಾಸಿನ ಗ್ರಾಮಗಳ ಜನ ಜೀವನದ ನೈಜ ಚಿತ್ರಣ. ಮನುಷ್ಯ ನಿರ್ಮಿತವೆಂದೇ ಹೇಳಬಹುದಾದ ದುರಂತಗಳು ಸಾಲುಸಾಲಾಗಿ ಬರುತ್ತವೆ. ಬದಲಾವಣೆಗೆ ಯಾರೂ ಒಪ್ಪಲಾರರು. ಕಾಳಿನದಿಯ ಹರಿವಿಗೆ ಹಲವು ಹೊರಳುಗಳಿರುವಂತೆಯೇ ಇಲ್ಲಿನ ಜನರ ಬದುಕಿನಲ್ಲೂ ಹತ್ತು ಹಲವು ತಿರುವುಗಳಿವೆ. ಹೆಚ್ಚಿನವು ದುರಂತದಲ್ಲಿ ಕೊನೆಗೊಳ್ಳುತ್ತವೆ. ಬಂಡಾಯವೊಂದು ಚಿಗುರುತ್ತಿದ್ದಂತೆ ಅದರ ಸಮಾಧಿ ಆಗಿಬಿಟ್ಟಿರುತ್ತದೆ.*

– **ಇಂದಿರಾ ಕುಮಾರಿ,** *ಬೆಂಗಳೂರು*

**ಅರ್ಜಿ ಹಾಕಿ ಹುಟ್ಟಿದವರ ನಡುವೆ** (ಕವಿತೆಗಳು) ನ. ಗುರುಮೂರ್ತಿ ಜಯಮಂಗಲ

**ಪುಟ : ೧೧೬** **ಬೆಲೆ : ರೂ. ೧೨೦/-**

**ಗೂಡು ಸಾಹಿತ್ಯ ಸಂಸ್ಥೆ,** ಮಾಲೂರು, ಕೋಲಾರ ಜಿಲ್ಲೆ



*'ಹೆಬ್ಬೆರಳ ಬೆವರು' ಇವರ ಮೊದಲನೇ ಕವನ ಸಂಕಲನವಾದರೆ 'ಅರ್ಜಿ ಹಾಕಿ ಹುಟ್ಟಿದವರ ನಡುವೆ' ಈಗ ಹೊರಬಂದಿರುವ ಎರಡನೇ ಸಂಕಲನ. ಈಗಾಗಲೇ ಮಧ್ಯ ವಯಸ್ಸು ತಲುಪಿರುವ ಕವಿ ಕಾವ್ಯವನ್ನು ಈಗ ಬಹಳ ಗಂಭೀರವಾಗಿ ಪರಿಗಣಿಸಿದಂತೆ ಕಾಣಿಸುತ್ತದೆ. ಇಲ್ಲಿ ಒಟ್ಟು ೬೪ ಕವಿತೆಗಳಿದ್ದು ವಯಸ್ಸಿಗೆ ತಕ್ಕ ಹಾಗೆ ಕವಿತೆಗಳು ಸಾಕಷ್ಟು ಮಾಗಿದಂತೆ ತೋರುತ್ತವೆ. ಕಾವ್ಯವು ಇತಿಹಾಸ–ಸಾಮಾಜಿಕ ಇತ್ಯಾದಿ ವಿಷಯಗಳ ಮೇಲೆ ವಿಭಿನ್ನವಾಗಿ ಅನಾವರಣಗೊಂಡಿವೆ. ಗುರುಮೂರ್ತಿ ಅವರಿಗೆ ಕಾವ್ಯಕಟ್ಟುವ ಶ್ರದ್ಧೆ ಹುಟ್ಟಿಕೊಳ್ಳುವುದಕ್ಕೆ ಕಾರಣ ಅವರು ಬೆಳೆದುಬಂದ ದಾರಿ ಅಥವಾ ಕಳೆದ ಮೂರು ದಶಕಗಳಲ್ಲಿ ತನ್ನನ್ನ ತಾನು ಜನಪದರ ಮಧ್ಯೆ ತೀವ್ರವಾಗಿ ತೊಡಗಿಸಿಕೊಂಡಿದ್ದೆಯಾಗಿದೆ. ಮೂರು ದಶಕಗಳಿಂದಲೂ ಕಾವ್ಯಕಟ್ಟುತ್ತಾ, ಹೃನ್ಮನಗಳನ್ನು ತಣಿಸುವಂತೆ ಹಾಡುತ್ತ, ಮಕ್ಕಳಿಗೆ ಮೇಷ್ಟ್ರಾಗಿ, ಕಲಾವಿದನಾಗಿ ನೂರಾರು ಸಾಹಿತ್ಯಚಿಂತನೆಗಳಲ್ಲಿ ತೊಡಗಿಕೊಂಡಿದ್ದು ಅವರ ಆಲೋಚನೆಯನ್ನು ಎತ್ತರಿಸಿದೆ. ಇದೆಲ್ಲದರ ಮೇಲೆ ಕೋಲಾರ ಬೆಟ್ಟದ ಮೇಲೆ ಕೆ. ರಾಮಯ್ಯ ಸ್ಥಾಪಿಸಿದ ನೆಲಮೂಲ ಸಾಂಸ್ಕೃತಿಕ ಸಂಸ್ಥೆ 'ಆದಿಮ' ಮತ್ತು ಮಾಲೂರಿನಲ್ಲಿ ಜಾಮುಚಂದ್ರು ಅವರು ಹುಟ್ಟಾಕಿದ 'ಕಲಾಚೈತನ್ಯ' ಅವರನ್ನ ಸಾಹಿತ್ಯ ಮತ್ತು ಸಾಂಸ್ಕೃತಿಕ ವಲಯದಲ್ಲಿ ಗಟ್ಟಿಯಾಗಿಸಿದೆ. ಇವರು ಇನ್ನಷ್ಟು ಗಂಭೀರವಾಗಿ ಕಾವ್ಯಕಟ್ಟುವಲ್ಲಿ ತೊಡಗಿಕೊಂಡರೆ ನೆನಪಿಟ್ಟುಕೊಳ್ಳುವಂತಹ ಕಾವ್ಯ ರಚಿಸುವ ಶಕ್ತಿ ಮತ್ತು ಸಾಮರ್ಥ್ಯ ಇರುವ ಕವಿಯಾಗುವಲ್ಲಿ ಯಾವ ಸಂಶಯವೂ ಇಲ್ಲ.*

– **ಡಾ॥ ಎಂ. ವೆಂಕಟಸ್ವಾಮಿ,** *ಬೆಂಗಳೂರು*

# ಕಾಶ್ಮೀರ : ಮಧ್ಯಸ್ಥಿಕೆಗೆ ಅಮೆರಿಕದ ಕಾತುರ



ಕಾಶ್ಮೀರಕ್ಕೆ ವಿಶೇಷ ಸ್ಥಾನಮಾನ ನೀಡಿರುವ ಸಂವಿಧಾನದ ೩೭೦ನೆ ವಿಧಿ ಬಗ್ಗೆ ಭಾರತೀಯ ಜನತಾ ಪಕ್ಷದ ನಿಲುವು ಸಮಸ್ಯೆಯಷ್ಟೇ ಹಳೆಯದು. ಎರಡನೇ ಬಾರಿಗೆ ಅಧಿಕಾರ ವಹಿಸಿಕೊಂಡ ಕೆಲವೇ ತಿಂಗಳಲ್ಲಿ ಮೋದಿ ಸರಕಾರ ಆತುರಾತುರವಾಗಿ ಅದನ್ನು ರದ್ದುಗೊಳಿಸಿದ್ದೇಕೆ ಎನ್ನುವ ಪ್ರಶ್ನೆ ಇನ್ನೂ ನಿಗೂಢ. ಈಚೆಗೆ ಅಮೆರಿಕದ ಅಧ್ಯಕ್ಷ ಡೋನಾಲ್ಡ್ ಟ್ರಂಪ್‌ರನ್ನು ಭೇಟಿಯಾಗಿದ್ದರು ಪ್ರಧಾನಿ ಮೋದಿ. ಆಗ ಕಾಶ್ಮೀರ ವಿಚಾರದಲ್ಲಿ ಮಧ್ಯಸ್ಥಿಕೆ ವಹಿಸಬೇಕೆಂದು ಅಮೆರಿಕವನ್ನು ಕೋರಿದ್ದರೆಂಬುದು ಅಧ್ಯಕ್ಷ ಟ್ರಂಪ್ ಅಂಬೋಣ. ಹಾರಿಕೆಯ ಮಾತು ಆಡುವುದರಲ್ಲಿ ಮೋದಿ ನಿಸ್ಸೀಮ. ಪ್ರಯತ್ನಿಸಿ ಎಂದು ಹೇಳಿದ್ದರೂ ಹೇಳಿರಬಹುದು. ಇದನ್ನು ಪಾಕ್ ಪ್ರಧಾನಿ ಇಮ್ರಾನ್‌ಖಾನ್ ಜೊತೆ ಮಾತುಕತೆಯ ನಂತರ ವಾಷಿಂಗ್ಟನ್ ಪತ್ರಿಕಾಗೋಷ್ಠಿಯಲ್ಲಿ ಪ್ರಸ್ತಾಪ ಮಾಡಿ ಅಮೆರಿಕ ಮಧ್ಯಸ್ಥಿಕೆ ವಹಿಸಲು ಸಿದ್ಧ ಎಂದು ಹೇಳಿದ್ದರು. ಇದನ್ನು ಭಾರತ ಸರಕಾರ ನಿರಾಕರಿಸಿದ್ದೂ ಆಯಿತು. ಆದರೆ ದಿಢೀರ್ ಎಂದು ೩೭೦ನೇ ವಿಧಿಯನ್ನು ರದ್ದುಗೊಳಿಸಿದ್ದೇಕೆ?

ಅಮೆರಿಕ ಕಾಶ್ಮೀರ ವಿಚಾರದಲ್ಲಿ ಮೂಗು ತೂರಿಸಲು ಮೊದಲಿನಿಂದ ಆಸಕ್ತವಾಗಿದೆ. ೧೯೪೭ರಲ್ಲಿ ಪಾಕಿಸ್ತಾನ ಕಾಶ್ಮೀರದ ಒಂದು ಭಾಗವನ್ನು ಆಕ್ರಮಿಸಿಕೊಂಡಾಗಿನಿಂದಲೂ ಇದೆ. ಆಗ ಕಾಶ್ಮೀರ ಅಂದಿನ ಸೋವಿಯತ್ ಒಕ್ಕೂಟದ ಮೇಲೆ ನಿಗಾ ಇರಿಸುವುದಕ್ಕೆ, ಹೊಸದಾಗಿ ಸ್ವತಂತ್ರಗೊಂಡ ಭಾರತ ಪಾಕಿಸ್ತಾನಗಳನ್ನು ನಿಯಂತ್ರಿಸುವುದಕ್ಕೆ ಅಗತ್ಯವಾಗಿತ್ತು, ಈಗಲೂ ಇದೆ. ೧೯೫೩ರಲ್ಲಿ ಅಮೆರಿಕದ ಮುತ್ಸದ್ದಿ ಫ್ರಾಂಕ್‌ಗ್ರಹಾಮ್ ಮಧ್ಯಸ್ತಿಕೆಗೆ ನಡೆಸಿದ ಪ್ರಯತ್ನ ವಿಫಲಗೊಂಡಿತು. ೧೯೫೦–೧೯೬೦ರ ನಡುವೆ ವಿಶ್ವಸಂಸ್ಥೆ, ವರ್ಲ್ಡ್‌ಬ್ಯಾಂಕ್, ಅಮೆರಿಕ, ಬ್ರಿಟನ್, ರಷ್ಯಾಗಳು ವಿವಾದವನ್ನು ಬಗೆಹರಿಸಲು ನಡೆಸಿದ ಪ್ರಯತ್ನಗಳೂ ವಿಫಲಗೊಂಡವು. ಹಾಗಾಗಿ ಕಾಶ್ಮೀರದ ವಿಚಾರದಲ್ಲಿ ಈವರೆಗೆ ನಡೆಸಿರುವ ಪ್ರಯತ್ನಗಳಾವುವೂ ಫಲಕಾರಿಯಾಗಿಲ್ಲ. ಅಮೆರಿಕ ಮಾತ್ರ ಮಧ್ಯಸ್ಥಿಕೆ ವಹಿಸಲು ಸಿದ್ಧತೆಯನ್ನು ಯಾವತ್ತೂ ಉಳಿಸಿಕೊಂಡಿದೆ.



ಕಾಶ್ಮೀರದ ಪ್ರಶ್ನೆಯ ಬಗ್ಗೆ ಭಾರತದ ಪ್ರಧಾನಿಗಳೆಲ್ಲರೂ ಎಡವಿದ್ದಾರೆ. ಮೋದಿ ಸರಕಾರ ವಿಶೇಷ ಸ್ಥಾನಮಾನ ರದ್ದುಗೊಳಿಸಿ ಎಷ್ಟರ ಮಟ್ಟಿಗೆ ಯಶಸ್ವಿಯಾಗುವದು ಎಂಬುದನ್ನು ಮುಂದಿನ ದಿನಗಳು ಸ್ಪಷ್ಟಗೊಳಿಸಲಿವೆ. ೧೯೭೨ರಲ್ಲಿ ಇಂದಿರಾಗಾಂಧಿ ಪ್ರಧಾನಿಯಾಗಿದ್ದಾಗ, ಪಾಕಿಸ್ತಾನ ಒಡೆದು ಇಬ್ಭಾಗವಾಗಿ ಬಂಗ್ಲಾದೇಶ ಹುಟ್ಟಿಕೊಂಡಾಗ ಸಿಮ್ಲಾದಲ್ಲಿ ನಡೆದ ಶೃಂಗ ಸಮಾವೇಶದಲ್ಲಿ ಭಾರತ – ಪಾಕಿಸ್ತಾನಗಳ ನಡುವಣ ಎಲ್ಲ ಸಮಸ್ಯೆಗಳನ್ನು (ಕಾಶ್ಮೀರವನ್ನು ಒಳಗೊಂಡಂತೆ) ದ್ವಿಪಕ್ಷೀಯ ಮಾತುಕತೆಗಳಿಂದಲೇ ಬಗೆಹರಿಸಿಕೊಳ್ಳಬೇಕು ಎಂಬ ತೀರ್ಮಾನಕ್ಕೆ ಬರಲಾಯಿತು. ಅಂದರೆ ಮೂರನೆಯವರ ಮಧ್ಯಸ್ಥಿಕೆಗೆ ಅವಕಾಶವಿಲ್ಲ ಎಂದಾಯಿತು. ಭಾರತ ಇಂದಿಗೂ ಅದಕ್ಕೆ ಬದ್ಧವಾಗಿದೆ. ೧೯೯೯ರಲ್ಲಿ ಕಾರ್ಗಿಲ್ ಯುದ್ಧದ ನಂತರ ಲಾಹೋರಿನಲ್ಲಿ ನಡೆದ ಶೃಂಗಸಭೆಯಲ್ಲೂ ಕೂಡ ಅದೇ ತೀರ್ಮಾನಕ್ಕೆ ಬರಲಾಯಿತು. ಆಗ ಪ್ರಧಾನಿಯಾಗಿದ್ದವರು ಭಾಜಪದ ನಾಯಕ ಅಟಲ್ ಬಿಹಾರಿ ವಾಜಪೇಯಿ.

ಕೆಲ ತಿಂಗಳ ಹಿಂದೆಯಷ್ಟೆ ಪಿಡಿಪಿ – ಭಾಜಪ ಸಮ್ಮಿಶ್ರ ಸರಕಾರ ಅಧಿಕಾರದಲ್ಲಿತ್ತು. ಆಗಲೇ ಉಗ್ರರ ಉಪಟಳ ಅಧಿಕಗೊಂಡಿದ್ದು ಮತ್ತು ಪುಲ್ವಾಮಾದಲ್ಲಿ ಭದ್ರತಾ ಪಡೆಯ ಮೇಲೆ ದಾಳಿ ನಡೆದದ್ದು. ರಾಷ್ಟ್ರಪತಿ ಆಳ್ವಿಕೆಯನ್ನು ಕಾಶ್ಮೀರದ ಮೇಲೆ ಹೇರಿದ್ದು ಈಚೆಗೆ ಭಾಜಪ ಸಮ್ಮಿಶ್ರ ಸರಕಾರಕ್ಕೆ ಬೆಂಬಲ ಹಿಂತೆಗೆದುಕೊಂಡಾಗ. ಕಾಶ್ಮೀರದಲ್ಲಿ ಉಗ್ರರಿಗೆ ತರಬೇತಿ ನೀಡಿ, ಪ್ರಚೋದನೆ ಕೊಡುತ್ತಿರುವುದು ಪಾಕಿಸ್ತಾನ ಎಂಬುದು ನಿರ್ವಿವಾದ ಸಂಗತಿ. ಸಮಸ್ಯೆಯನ್ನು ಜೀವಂತವಾಗಿರಿಸಿರುವುದೂ ಪಾಕಿಸ್ತಾನವೆ. ಮಧ್ಯಸ್ಥಿಕೆಗಾಗಿ, ಅದರಲ್ಲೂ ಅಮೆರಿಕದ ಮಧ್ಯಸ್ಥಿಕೆಗಾಗಿ ಹಾತೊರೆಯುತ್ತಿರುವುದೂ ಪಾಕಿಸ್ತಾನವೆ.

ಇತ್ತೀಚೆಗೆ ಕಾಶ್ಮೀರದ ಪ್ರಶ್ನೆ ಮತ್ತೆ ವಿಶ್ವಸಂಸ್ಥೆಯ ಮೆಟ್ಟಿಲು ಏರಿದೆ. ಪಾಕಿಸ್ತಾನ ಸಲ್ಲಿಸಿರುವ ದೂರಿಗೆ ಚೀನಾ ಕುಮ್ಮಕ್ಕು ನೀಡಿದೆ. ಭಾರತ ಕಾಶ್ಮೀರದ ವಿಶೇಷ ಸ್ಥಾನಮಾನ ರದ್ದತಿ ಆಂತರಿಕ ವಿಷಯ ಎಂದು ಸ್ಪಷ್ಟಪಡಿಸಿದೆ. ಕಾಶ್ಮೀರ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಭಾರತ – ಪಾಕಿಸ್ತಾನಗಳ ಮಧ್ಯೆ ಮತ್ತೊಂದು ಯುದ್ಧಕ್ಕೆ ಎಡೆಯಾಗುವುದೇ ಎನ್ನುವ ಪ್ರಶ್ನೆಯಿದೆ. ಆದರೆ ಅದರಿಂದ ಯಾವ ಪ್ರಯೋಜನವೂ ಆಗದು. ಹಿಂದಿನ ಯುದ್ಧಗಳ ಅನುಭವ ಯಾವ ಪ್ರಶ್ನೆಯೂ ಇತ್ಯರ್ಥವಾಗದು ಎಂಬುದನ್ನು ಸ್ಪಷ್ಟವಾಗಿಸಿದೆ. ಎರಡೂ ದೇಶಗಳು ನ್ಯೂಕ್ಲಿಯರ್ ಅಸ್ತ್ರ ಹೊಂದಿರುವುದರಿಂದ ಯಾರೇ ಉಪಯೋಗಿಸಿದರೂ ಸರ್ವನಾಶ ಖಚಿತ. ವಿವಾದಗಳನ್ನು ಇತ್ಯರ್ಥಗೊಳಿಸಲು ದ್ವಿಪಕ್ಷೀಯ ಮಾತುಕತೆಗಳೇ ಸೂಕ್ತ. ಮೂರನೆಯವರ ಪ್ರವೇಶ ಮಾತ್ರ ಎಂದಿಗೂ ಸಲ್ಲದು. ಅಮೆರಿಕಾಗೆ ಇದು ಮನದಟ್ಟಾಗಬೇಕು.



ಪುಲ್ವಾಮಾದಲ್ಲಿ ಭದ್ರತಾ ಪಡೆಯ ಮೇಲೆ ನಡೆದ ದಾಳಿ



ಬಿಕೋ ಎನ್ನುತ್ತಿರುವ ಕಾಶ್ಮೀರದ ಬೀದಿ

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩
೩ನೇ ಅಡ್ಡರಸ್ತೆ, ಗಿರಿನಗರ ೪ನೇ ಫೇಸ್
ಬೆಂಗಳೂರು – ೫೬೦ ೦೮೫



# ಟಿಪ್ಪು ಯುಗದ ಆಡಳಿತ, ಕೃಷಿ ಮತ್ತು ಉದ್ಯಮ

## – ಒಂದು ಅವಲೋಕನ

**ಹ**ದಿನೆಂಟನೆಯ ಶತಮಾನದಲ್ಲಿ ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮೈಸೂರು ಸಂಸ್ಥಾನವನ್ನು ದಶ ದಿಕ್ಕುಗಳಿಗೂ ವಿಸ್ತರಿಸಿದ ಟಿಪ್ಪು ಸುಲ್ತಾನ್ ಭಾರತದ ಚರಿತ್ರೆಯಲ್ಲಿ ತನ್ನ ಧೈರ್ಯ ಮತ್ತು ಸಾಹಸ ಪ್ರವೃತ್ತಿಗಳಿಂದಾಗಿ 'ಮೈಸೂರು ಹುಲಿ' ಎಂಬ ಗೌರವದೊಂದಿಗೆ ಮಹತ್ವದ ಸ್ಥಾನ ಪಡೆದಿದ್ದಾನೆ. ತನ್ನ ಬದುಕಿನುದ್ದಕ್ಕೂ ಬ್ರಿಟಿಷರ ಪಾಲಿಗೆ ಸಿಂಹಸ್ವಪ್ನವಾಗಿದ್ದುಕೊಂಡು ೧೭೯೯ರ ಮೇ ತಿಂಗಳಿನಲ್ಲಿ ಶ್ರೀರಂಗಪಟ್ಟಣದಲ್ಲಿ ನಡೆದ ನಾಲ್ಕನೇ ಮೈಸೂರು ಯುದ್ಧದಲ್ಲಿ ಹೋರಾಡುತ್ತಲೇ ರಣರಂಗದ ನಡುವೆ ಅಸುನೀಗಿದ ಟಿಪ್ಪು ಸುಲ್ತಾನ್ ಇತ್ತೀಚೆಗಿನ ದಿನಗಳಲ್ಲಿ ಹಲವು ಕಾರಣಗಳಿಗಾಗಿ ಚರ್ಚೆಗೆ ಒಳಪಡುತ್ತಿದ್ದಾನೆ. ಅಪ್ರತಿಮ ಕನಸುಗಾರ ಮತ್ತು ಅಭಿವೃದ್ಧಿಯ ಹರಿಕಾರನಾಗಿದ್ದ ಟಿಪ್ಪುಸುಲ್ತಾನನ ಇತಿಹಾಸವನ್ನು ಧರ್ಮದ ಹಿನ್ನೆಲೆಯಲ್ಲಿ ಚರ್ಚೆಗೆ ಒಳಪಡಿಸುವುದರ ಮೂಲಕ ಇತಿಹಾಸಕ್ಕೆ ಮಸಿ ಬಳಿಯುವ ಕಾರ್ಯ ವ್ಯವಸ್ಥಿತವಾಗಿ ನಿರಂತರ ನಡೆಯುತ್ತಲೇ ಬಂದಿದೆ. ದೇಶಭಕ್ತಿಯ ನೆಪದಲ್ಲಿ ಸಂಘ ಪರಿವಾರದ ಭಕ್ತರಿಗೆ ಟಿಪ್ಪುವನ್ನು ಟೀಕಿಸುವುದು ಮನೋವ್ಯಾಧಿಯಾಗಿ ಪರಿವರ್ತನೆಯಾಗಿದೆ.

ಟಿಪ್ಪುಸುಲ್ತಾನ್ ದೇಶಭಕ್ತನಲ್ಲ, ಆತ ದೇಶದ್ರೋಹಿ ಮತ್ತು ಹಿಂದೂ ಧರ್ಮದ ಕಡು ವಿರೋಧಿ... ಹೀಗೆ ಹತ್ತಾರು ಹುಸಿ ಆರೋಪಗಳನ್ನು ಹೊರಿಸುವುದರ ಮೂಲಕ ಮಾನಸಿಕವಾಗಿ ಮತ್ತು ಭೌತಿಕವಾಗಿ ಬೆತ್ತಲಾಗುತ್ತಿರುವ ರಾಜಕೀಯ ಪಕ್ಷಗಳು ಮತ್ತು ಕೆಲವು ಧಾರ್ಮಿಕ ಸಂಘಟನೆಗಳು ಇತಿಹಾಸವನ್ನು ಅರಿಯದ ಇಂದಿನ ಯುವತಲೆಮಾರಿನ ಎದೆಯಲ್ಲಿ ವಿಷ ಬೀಜವನ್ನು ಬಿತ್ತುತ್ತಿವೆ. ಒಂದು ಇತಿಹಾಸವನ್ನು ನಿರ್ವಿಕಾರವಾಗಿ ಯಾವುದೇ ಪೂರ್ವಗ್ರಹವಿಲ್ಲದೆ ವಸ್ತುನಿಷ್ಠ ನೆಲೆಯಲ್ಲಿ ನೋಡಲಾಗದ ಅವಿವೇಕಿಗಳು ಮಾತ್ರ ಇಂತಹ ಕ್ರಿಯೆಯಲ್ಲಿ ತೊಡಗಬಲ್ಲರು.

ಲೇಖಕ ಮಿತ್ರ ಉಡುಪಿಯ ಕೆ. ಫಣಿರಾಜ್ ಭಾರತದಲ್ಲಿ ಇತಿಹಾಸ ಸೃಷ್ಟಿಯಾಗುವ ಎರಡು ಬಗೆಯ ಮಾರ್ಗಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ, ಒಂದು ಜನಪದೀಯ ಮಾರ್ಗ. ತಾವು ಬದುಕಿದ್ದ ಕಾಲಘಟ್ಟದಲ್ಲಿ ಜನಸಾಮಾನ್ಯರ ಮತ್ತು ದಮನಿತರ ಪರವಾಗಿ ಹೋರಾಡಿದ ದೊರೆ ಅಥವಾ ಸಾಮ್ರಾಟನನ್ನು ನಮ್ಮ ಜನಪದರು ತಮ್ಮ ಅಲಿಖಿತ ಕಾವ್ಯಗಳ ಮೂಲಕ ಅಂದರೆ ಮೌಖಿಕ ಕಾವ್ಯದ ಮತ್ತು ಲಾವಣಿಗಳ ಮೂಲಕ ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಂಡಿರುವ ಇತಿಹಾಸ. ಇಂತಹ ನೈಜ ಇತಿಹಾಸಗಳಲ್ಲಿ ದ್ವೇಷ, ಅಸೂಯೆಗಳಿಲ್ಲದೆ ನಿಷ್ಕಲ್ಮಷ ಪ್ರೀತಿಯನ್ನು ಮಾತ್ರ ನಮ್ಮ ಪ್ರಾಚೀನ ಜಗತ್ತಿನ ಅನಕ್ಷರಸ್ಥರು ಮೌಖಿಕ ಕಾವ್ಯದ ಮೂಲಕ ಕಟ್ಟಿಕೊಟ್ಟಿದ್ದಾರೆ. ಇದಕ್ಕೆ ಪ್ರತಿಯಾಗಿ ಇರುವ ಇನ್ನೊಂದು ಇತಿಹಾಸವೆಂದರೆ ಪುರಾಣ ಮತ್ತು ಐತಿಹ್ಯಗಳ ಮಾರ್ಗ. ದಮನಿತರು ಮತ್ತು ಜನಸಾಮಾನ್ಯರ ಪರವಾಗಿ ನಿಂತು ಮೇಲ್ವರ್ಗದ ಪಟ್ಟಭದ್ರ ಹಿತಾಸಕ್ತಿಗಳ ಬೇರುಗಳನ್ನು ಅಲುಗಾಡಿಸಿದ ದೊರೆಗಳನ್ನು ಅಕ್ಷರ ಬಲ್ಲ ಈ ಸಮುದಾಯ ತಮ್ಮ ಮೂಗಿನ ನೇರಕ್ಕೆ ಹಾಗೂ ಕಾಲಘಟ್ಟದ ಅಗತ್ಯಕ್ಕೆ ತಕ್ಕಂತೆ ಸೇಡಿನ ವಿದ್ಯಮಾನವಾಗಿ ಬಣ್ಣಿಸುತ್ತಾ ನೈಜ ಇತಿಹಾಸವನ್ನು ತಿರುಚುವ ಪ್ರಯತ್ನವನ್ನು ಮಾಡಿದ್ದಾರೆ. ಇಂತಹ ತಂತ್ರ ಕಾಲದ ಅಗತ್ಯಕ್ಕೆ ತಕ್ಕಂತೆ ಬದಲಾಗುತ್ತಾ ಹೋಗುತ್ತದೆ.

ನಾವೀಗ ಬದುಕುತ್ತಿರುವ ವರ್ತಮಾನದ ಜಗತ್ತಿನಲ್ಲಿ ಈಗ ಎರಡನೇ ಬಗೆಯ ಪೊಳ್ಳು ಇತಿಹಾಸ ಚಾಲ್ತಿಯಲ್ಲಿದೆ. ಆಶ್ಚರ್ಯಕರ ಸಂಗತಿಯೆಂದರೆ, ಟಿಪ್ಪು ಆಳಿದ ನೆಲದಲ್ಲಿ ಹುಟ್ಟಿ ಬೆಳೆದ ನಾನು (ಮಂಡ್ಯ ಜಿಲ್ಲೆ) ಈ ಜಗತ್ತನ್ನು ಗ್ರಹಿಸಲು ಆರಂಭಿಸಿದ ಐವತ್ತು ಮೂರು ವರ್ಷಗಳಲ್ಲಿ (೧೯೬೬ರ ಹತ್ತನೇ ವಯಸ್ಸಿನಿಂದ) ಮೈಸೂರು ಅಥವಾ ಮಂಡ್ಯ ಜಿಲ್ಲೆಯ ಸೀಮೆಯಲ್ಲಿ ಟಿಪ್ಪು ಕುರಿತಂತೆ ಈವರೆಗೆ ಒಂದೇ ಒಂದು ಅಪಸ್ವರವನ್ನು ಕೇಳಿಲ್ಲ. ಟಿಪ್ಪು ಸುಲ್ತಾನ್ ಸೆರೆಹಿಡಿದು ತಂದು ಬಲಾತ್ಕಾರವಾಗಿ ಮತಾಂತರಿಸಿದ ಎಂದು ಹೇಳುವ ಒಂದೇ ಒಂದು ಜೀವ ಅಥವಾ ಸಮುದಾಯ ಈವರೆಗೆ ನನ್ನ ಕಣ್ಣಿಗೆ ಬಿದ್ದಿಲ್ಲ. (ಟಿಪ್ಪು ಸೇನೆಯಲ್ಲಿ 'ಚೇಲಾ ರೆಜಿಮೆಂಟ್' ಎಂದು ಸೈನಿಕರ ಶಾಖೆಯೊಂದು ಅಸ್ತಿತ್ವದಲ್ಲಿತ್ತು. ಇದರಲ್ಲಿ ಟಿಪ್ಪು ವಿರುದ್ಧ ಯುದ್ಧದಲ್ಲಿ ಸೋತು ಶರಣಾದ ಸೈನಿಕರು ಮತ್ತು ದೇವದಾಸಿ ಹಾಗೂ ವೃತ್ತಿನಿರತ ವೇಶ್ಯೆಯರ ಗಂಡುಮಕ್ಕಳು ಸ್ವಇಚ್ಛೆಯಿಂದ ಇಸ್ಲಾಮ್ ಧರ್ಮಕ್ಕೆ ಮತಾಂತರಗೊಂಡ ಸಂದರ್ಭದಲ್ಲಿ ಅಂತಹವರನ್ನು ಸೇನೆಯ ಸಹಾಯಕ್ಕೆ ನಿಯೋಜಿಸಿ ಚೇಲಾ ರೆಜಿಮೆಂಟ್ ಎಂದು ನಾಮಕರಣ ಮಾಡಿದ್ದ ಸಂಗತಿ ಇತಿಹಾಸದಲ್ಲಿ ದಾಖಲಾಗಿದೆ.) ಆದರೆ ಇದಕ್ಕೆ ಪ್ರತಿಯಾಗಿ ಶ್ರೀರಂಗಪಟ್ಟಣವನ್ನು ಆಳುತ್ತಾ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ನನ್ನ ನೆಲಕ್ಕೆ ಪರಿಚಯಿಸಿದ ಭತ್ತದ ತಳಿಗಳು, ಕಬ್ಬಿನ ತಳಿಗಳು, ಬಾಳೆ, ತೆಂಗು, ಮಾವು, ರೇಷ್ಮೆ ಇವೆಲ್ಲವೂ ಇಂದಿಗೂ ಅಸ್ತಿತ್ವದಲ್ಲಿವೆ. ನನ್ನೂರು ಕೊಪ್ಪ ಗ್ರಾಮದಲ್ಲಿ ಕ್ವರೆಯ ಏರಿಯ ಕೆಳಗಿನ ತೆಂಗಿನ ತೋಟದಲ್ಲಿ ನಾನು ಜನಿಸುವ ಒಂದು ವರ್ಷಕ್ಕೆ ಮುನ್ನ, ಅಂದರೆ ೧೯೫೫ರಲ್ಲಿ ನಿಧನ ಹೊಂದಿದ ಮದ್ದನಹಟ್ಟಿ ನಂಜೇಗೌಡ ಎಂಬ ಹೆಸರಿನ ನನ್ನಜ್ಜ ಬೆಳೆಸಿದ ತೆಂಗು, ಮಾವು ಹಾಗೂ ಹುಣಸೆ ಮರಗಳು ಇಂದಿಗೂ ಫಲ ನೀಡುತ್ತಿವೆ. ಹೀಗೆ ನಮ್ಮ ಕಣ್ಣೆದುರಿಗಿನ ಇಂತಹ ಕಟು ವಾಸ್ತವ ಸಂಗತಿಗಳನ್ನು ಇಟ್ಟುಕೊಂಡು ಟಿಪ್ಪು ಕುರಿತು ಅವಹೇಳನಕಾರಿ ಮಾತನಾಡುವುದೆಂದರೆ ಅದು ಆತ್ಮವಂಚನೆಯ ಕೆಲಸವಾಗುತ್ತದೆ.

ಕನ್ನಡದ ಹಿರಿಯ ವಿದ್ವಾಂಸರಾದ ತಿ.ತಾ. ಶರ್ಮಾ, ಕೋ. ಚೆನ್ನಬಸಪ್ಪ,

**ಡಾ॥ ಎನ್. ಜಗದೀಶ್ ಕೊಪ್ಪ**

ಪ್ರೊ॥ ಶೇಖ್‌ಆಲಿ ಹಾಗೂ ಮೈಸೂರು ಮೂಲದ ನಮ್ಮ ಹಿರಿಯ ಮಿತ್ರರಾಗಿದ್ದುಕೊಂಡು, ಪ್ರಖರ ಚಿಂತಕರಾಗಿದ್ದ ದಿವಂಗತ ಸಾಕೇತ್ ರಾಜನ್ ಇಂಗ್ಲಿಷ್ ಭಾಷೆಯಲ್ಲಿ ರಚಿಸಿರುವ "ಮೇಕಿಂಗ್ ಹಿಸ್ಟರಿ" ಎಂಬ ಎರಡು ಸಂಪುಟಗಳಲ್ಲಿರುವ ಮಹತ್ವ ಕೃತಿಗಳು ನಮಗೆ ಟಿಪ್ಪು ಸುಲ್ತಾನ್ ತನ್ನ ಆಳ್ವಿಕೆಯ ಅವಧಿಯಲ್ಲಿ ಜಾರಿಗೆ ತಂದ ಸಾಮಾಜಿಕ ಸುಧಾರಣೆಗಳು ಮಾತ್ರವಲ್ಲದೆ ಕೃಷಿರಂಗ ಮತ್ತು ರೈತರಿಗೆ ನೆರವಾದ ಪ್ರತಿಯೊಂದು ಸಂಗತಿಯೂ ಪುರಾವೆಗಳ ಮೂಲಕ ದಾಖಲಾಗಿವೆ. ಈ ಕೃತಿಗಳಿಗೆ ಪೂರಕವಾಗಿ ಈ ಭಾಗದಲ್ಲಿ ಸಂಚರಿಸಿದ ಅಬುದುಬೆ ಎಂಬ ಫ್ರಾನ್ಸ್ ಮೂಲದ ಕ್ರೈಸ್ತ ಪಾದ್ರಿ ಸಂಪಾದಿಸಿರುವ ಟಿಪ್ಪು ಕುರಿತ ಲಾವಣಿಗಳು ಹಾಗೂ ಫ್ರಾನ್ಸಿಸ್ ಬುಕಾನನ್ ಎಂಬ ಸಸ್ಯ ಶಾಸ್ತ್ರಜ್ಞ ದಕ್ಷಿಣ ಭಾರತವನ್ನು ಎತ್ತಿನ ಗಾಡಿಯಲ್ಲಿ ಪ್ರವಾಸ ಮಾಡುತ್ತಾ ದಾಖಲಿಸಿದ 'ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಆ್ಯಂಡ್ ಮಲಬಾರ್' ಎಂಬ ಅಮೂಲ್ಯವಾದ ಅಧ್ಯಯನ ಕೃತಿಯು ಟಿಪ್ಪು ಆಡಳಿತ ವಿವರಗಳ ಒಳನೋಟಗಳನ್ನು ನೀಡುತ್ತದೆ. ಇವುಗಳ ಜೊತೆಗೆ ಖ್ಯಾತ ಶಾಸನ ತಜ್ಞರಾದ ಬಿ.ಎಲ್. ರೈಸ್‌ರವರು ಸಂಗ್ರಹಿಸಿರುವ ಶಾಸನಗಳಲ್ಲಿ ಟಿಪ್ಪು ಸುಲ್ತಾನ್ ತನ್ನ ಆಳ್ವಿಕೆಯಲ್ಲಿ ಏಳುನೂರ ತೊಂಬತ್ತಕ್ಕೂ ಹೆಚ್ಚು ಹಿಂದೂ ದೇವಾಲಯಗಳನ್ನು ಸಂರಕ್ಷಿಸಿ ಜೀರ್ಣೋದ್ಧಾರ ಮಾಡಿದ ಎಂಬ ವಿವರವಾದ ಪಟ್ಟಿ ದೊರೆಯುತ್ತದೆ. ಕ್ರೈಸ್ತ ಪಾದ್ರಿ ಅಬುದುಬೆಯಾಗಲಿ, ಸಸ್ಯಶಾಸ್ತ್ರಜ್ಞ ಫ್ರಾನ್ಸಿಸ್ ಬುಕಾನನ್ ಆಗಲಿ ಅಥವಾ ಶಾಸನಗಳ ತಜ್ಞ ಬಿ.ಎಲ್. ರೈಸ್ ಇವರುಗಳು ಈ ನೆಲಕ್ಕೆ, ಇಲ್ಲಿನ ಸಂಸ್ಕೃತಿಗೆ ಮತ್ತು ಇಲ್ಲಿನ ಧರ್ಮಗಳಿಗೆ ಸಂಬಂಧಪಟ್ಟವರಲ್ಲ. ಯಾವುದೇ ರಾಗದ್ವೇಷವಿಲ್ಲದೆ ತಮ್ಮ ಕಣ್ಣ ಮುಂದಿನ ವಾಸ್ತವಗಳನ್ನು ದಾಖಲಿಸಿದ್ದಾರೆ. ಇವು ಸಾಲದೆಂಬಂತೆ ಈಸ್ಟ್ ಇಂಡಿಯಾ ಕಂಪನಿಯ ದಾಖಲೆಗಳಲ್ಲಿ ಟಿಪ್ಪು ಸುಲ್ತಾನ್ ಆಳ್ವಿಕೆಯಲ್ಲಿ ಆಡಳಿತ ಮತ್ತು ಸಾಮಾಜಿಕ, ಆರ್ಥಿಕ ಸುಧಾರಣೆಗಳು ಭಾರತದ ಇತರೆ ಸಂಸ್ಥಾನಗಳಿಗಿಂತ ಹೇಗೆ ಭಿನ್ನವಾಗಿದ್ದವು ಮತ್ತು ಮಾದರಿಯಾಗಿದ್ದವು ಎಂಬ ಮಾಹಿತಿ ಇಂದಿಗೂ ನಮಗೆ ಲಭ್ಯವಿದೆ. (ನೋಡಿ– ರಿಪೋರ್ಟ್ ಆಫ್ ಜಾಯಿಂಟ್ ಕಮಿಷನ್ ಫ್ರಂ ಬೆಂಗಾಲ್, ಬಾಂಬೆ ಅಂಡ್ ಮದ್ರಾಸ್ – ಪ್ರಕಟಣೆಯ ವರ್ಷ೧೮೬೨) ಈ ಎಲ್ಲಾ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡು ಟಿಪ್ಪು ಸುಲ್ತಾನನ ಇತಿಹಾಸವನ್ನು ಅವಲೋಕಿಸುತ್ತಾ ಹೋದರೆ, ನಾವು ಈವರೆಗೆ ಕಾಣದ ಟಿಪ್ಪುವಿನ ಹಲವು ಬಗೆಯ ಮಾನವಿಕ ಮುಖಗಳು ಮತ್ತು ಅಭಿವೃದ್ಧಿಯ ಕನಸುಗಳು ಅನಾವರಣಗೊಳ್ಳುತ್ತವೆ. ಇಡೀ ಭಾರತದಲ್ಲಿ ಕೃಷಿಗೆ ಸಂಬಂಧಿಸಿದಂತೆ ೧೨೭ ಕಾನೂನುಗಳನ್ನು ತನ್ನ ಸಂಸ್ಥಾನದಲ್ಲಿ ಜಾರಿಗೆ ತಂದ ಏಕೈಕ ದೊರೆ ಟಿಪ್ಪು ಸುಲ್ತಾನ್ ಎಂಬುದನ್ನು ನಾವ್ಯಾರೂ ಮರೆಯುವಂತಿಲ್ಲ.

ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಈ ತಂದೆ–ಮಗ ಇಬ್ಬರ ಒಟ್ಟು ಆಡಳಿತಾವಧಿ ಕೇವಲ ೩೮ ವರ್ಷಗಳು. ಈ ಅವಧಿಯಲ್ಲಿ ಬ್ರಿಟಿಷರೊಡನೆ ನಾಲ್ಕು ಯುದ್ಧಗಳೂ ಸೇರಿದಂತೆ, ಸ್ಥಳೀಯ ಸಾಮಂತರು, ಪಾಳೆಗಾರರ ಮತ್ತು ಮರಾಠರು, ಪೇಶ್ವೆಗಳು ತಮಿಳುನಾಡಿನ ಸಂಸ್ಥಾನಗಳಾದ ಆರ್ಕಾಟ್, ಪುದುಕೋಟೈ, ತಂಜಾವೂರು ದೊರೆಗಳ ಜೊತೆ ನಿರಂತರ ಕಾದಾಡಿದರು. ಇಂತಹ ಹೋರಾಟಗಳ ನಡುವೆ ಕರ್ನಾಟಕದ ಉತ್ತರದ ಕೃಷ್ಣಾ ನದಿಯಿಂದ ದಕ್ಷಿಣದ ಕೇರಳದ ಮಲಬಾರ್ ಹಾಗೂ ಕೊಚ್ಚಿನ್ ಮತ್ತು ಪೂರ್ವದ ಕಾಂಚಿಪುರಂ, ಪಶ್ಚಿಮದ ಮಂಗಳೂರುವರೆಗಿನ ತಮ್ಮ ಸಾಮ್ರಾಜ್ಯದ (ಒಟ್ಟು ಈಗಿನ ದಕ್ಷಿಣ ಭಾರತದ ನಾಲ್ಕು ರಾಜ್ಯಗಳ ೧೪೪ ಜಿಲ್ಲೆಗಳ ವ್ಯಾಪ್ತಿಯ ಪ್ರದೇಶ) ಕೃಷಿ ಮತ್ತು ಔದ್ಯಮಿಕ ಬೆಳವಣಿಗೆ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಅವರು ಶ್ರಮಿಸಿದ ಪರಿ ಅಚ್ಚರಿ ಮೂಡಿಸುತ್ತದೆ.



## ಗಂಡ

ನೀ ಮೆಚ್ಚಿದುದ ಮುಚ್ಚಿ
ಬಚ್ಚಿಟ್ಟಿದ್ದು ಬಿಚ್ಚಿದಾಗ
ಮೈಯೆಲ್ಲಾ ಮುತ್ತುಗರೆವ
ನಿನ್ನ ಬಗೆಗೆ
ನನಗಾವ ಸೆಂಟಿಮೆಂಟಾಲಿಟಿಯೂ
ಇಲ್ಲ
ನನ್ನ ಹರೆಯದ ಈ ಹಸಿರು ನೆಲಕ್ಕೆ
ಪೋಲಿ ದನ ನುಗ್ಗಿ
ಮೇಯದಿರಲೆಂದು
ನಾ ನಿನ್ನ ತಬ್ಬಿಕೊಂಡೆ, ಸುತ್ತಿಕೊಂಡೆ
ನನಗೆ ನೀನು ಒಂದು ಗಂಡು
ನಿನಗೆ ನಾನು ಒಂದು ಹೆಣ್ಣು
ಅಷ್ಟೆ.

**ಬಿ. ಎಲ್. ಪಂಚಲಿಂಗಯ್ಯ**
ನಂ. ೭, ಎಮ್‌ಐಜಿ–೨, ಗ್ರೂಪ್–೧
ಕೆಎಚ್‌ಬಿ ಕಾಲನಿ, ಹೂಟಗಳ್ಳಿ
ಮೈಸೂರು – ೫೭೦೦೧೮

ತಮ್ಮ ಸಂಸ್ಥಾನದ ಅಭಿವೃದ್ಧಿಗೆ ಮುನ್ನ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಮಾಡಿದ ಮಹತ್ಕಾರ್ಯವೆಂದರೆ, ನಾಡಿನುದ್ದಕ್ಕೂ ತಲೆ ಎತ್ತಿ ರೈತರನ್ನು ಮತ್ತು ವ್ಯಾಪಾರಸ್ಥರನ್ನು ಶೋಷಿಸುತ್ತಿದ್ದ ಇನ್ನೂರಕ್ಕೂ ಹೆಚ್ಚು ಪಾಳೆಗಾರರನ್ನು ಸದೆಬಡಿದರು. ಹತ್ತರಿಂದ ಐವತ್ತು ಹಳ್ಳಿಗಳನ್ನು ತಮ್ಮ ಸುಪರ್ದಿಯಲ್ಲಿಟ್ಟುಕೊಂಡು, ಬೆಟ್ಟ ಮತ್ತು ಗುಡ್ಡಗಳಲ್ಲಿ ಕೋಟೆ ಮತ್ತು ಅರಮನೆ ಕಟ್ಟಿಕೊಂಡು ಶ್ಯಾನುಭೋಗರು ಮತ್ತು ಪಟೇಲರು ಹಾಗೂ ಊರ ಗೌಡ ಅಥವಾ ನಾಡಗೌಡ ಎಂಬ ಜಮೀನ್ದಾರರ ಮೂಲಕ ರೈತರು ಮತ್ತು ಕೃಷಿಕೂಲಿ ಕಾರ್ಮಿಕರನ್ನು ಶೋಷಿಸುತ್ತಿದ್ದ ಪಾಳೆಗಾರರನ್ನು ತಲೆ ಎತ್ತದಂತೆ ನಿರ್ನಾಮ ಮಾಡಿದರಲ್ಲದೆ, ಬಾಡಿಗೆ ಅಥವಾ ಭೂ ಕಂದಾಯದಿಂದ ವಿನಾಯ್ತಿ ಪಡೆದಿದ್ದ ಹಲವು ಬ್ರಾಹ್ಮಣ ಮಠಗಳು, ಅಗ್ರಹಾರಗಳು, ಜೈನ ಬಸದಿಗಳು ಮತ್ತು ಉತ್ತರ ಕರ್ನಾಟಕದ ದೇಶಮುಖ್ ಎಂಬ ಬ್ರಾಹ್ಮಣರ ಅಧೀನದಲ್ಲಿದ್ದ ಸಾವಿರಾರು ಎಕರೆ ಭೂಮಿಯನ್ನು ೧೭೮೭ರಿಂದ ೧೭೯೦ರ ಅವಧಿಯಲ್ಲಿ ಟಿಪ್ಪು ಸುಲ್ತಾನ್ ವಾಪಸ್ ಪಡೆದು ಗೇಣಿದಾರನಿಗೆ ಹಂಚಿದನು. ಹೈದರಾಲಿ ಅನಕ್ಷರಸ್ಥನಾಗಿದ್ದುಕೊಂಡು ಓರ್ವ ಸಾಮಾನ್ಯ ಸಿಪಾಯಿಯಾಗಿ ಸೈನ್ಯಕ್ಕೆ ಸೇರಿ ಓರ್ವ ಸಾಮಂತನಾಗಿ ಬೆಳೆದವನು. ಜೊತೆಗೆ, ತನ್ನ ಪುತ್ರ ಟಿಪ್ಪುವಿಗೆ ಆತನ ಹದಿನೇಳನೆಯ ವಯಸ್ಸಿನಿಂದ ಯುದ್ಧ ತಂತ್ರಗಳ ಜೊತೆಜೊತೆಗೆ ಆಡಳಿತ ಕಲೆಯನ್ನು ಧಾರೆಯೆರೆದವನು. ನಂಜನಗೂಡಿನ ಅಗ್ರಹಾರದಲ್ಲಿ ನಾನೂರು ಬ್ರಾಹ್ಮಣ ಕುಟುಂಬಗಳ ವಶದಲ್ಲಿದ್ದ ಸಾವಿರಾರು ಎಕರೆ ಭೂಮಿಯನ್ನು ಏಳುನೂರು ಹಿಂದುಳಿದ ಕುಟುಂಬಗಳಿಗೆ ಜಾತಿ ಮತ್ತು ಧರ್ಮದ ಹಂಗಿಲ್ಲದೆ ಟಿಪ್ಪು ಸುಲ್ತಾನ್ ಹಂಚಿದನು. ಮೂಡಬಿದ್ರಿಯ ಜೈನ ಬಸದಿ ವಶದಲ್ಲಿದ್ದ ಭೂಮಿಯನ್ನು ಮತ್ತು ಉತ್ತರ ಕರ್ನಾಟಕದ ದೇಶಮುಖರ ಭೂಮಿಯನ್ನು ಅವರ ಜೀವನದ ಅವಶ್ಯಕತೆಗಳಿಗೆ ಬೇಕಾಗುವಷ್ಟು ಮಾತ್ರ ಉಳಿಸಿ, ಉಳಿದ ಭೂಮಿಯನ್ನು ಎಲ್ಲರಿಗೂ ಸಮನಾಗಿ ಹಂಚಿದನು. ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಇದು ಟಿಪ್ಪುವಿನ ಅಚಲ ನಂಬಿಕೆಯಾಗಿತ್ತು. ಇದು ಮಾತ್ರವಲ್ಲದೆ, ಪಾಳು ಬಿದ್ದ ಭೂಮಿ, ಗುಡ್ಡಗಾಡು ಪ್ರದೇಶಗಳನ್ನು ಯಾವುದೇ ಕಂದಾಯ ಅಥವಾ ತೆರಿಗೆ ಇಲ್ಲದೆ ಭೂ ರಹಿತರಿಗೆ ಹಂಚಿದ ಸಂಗತಿಯನ್ನು ನಿಕಲಸ್ ಗುಹಾ ಎಂಬುವರು ದಾಖಲಿಸಿದ್ದಾರೆ. ಸೈನಿಕರೂ ಸೇರಿದಂತೆ ೬೦ ಸಾವಿರ ಕುಟುಂಬಗಳಿಗೆ ಭೂಮಿಯನ್ನು ಹಂಚುವುದರ ಮೂಲಕ ತನ್ನ ಸಾಮ್ರಾಜ್ಯದಲ್ಲಿ ಕೃಷಿಗೆ ಒತ್ತು ನೀಡಿರುವ ಸಂಗತಿಯನ್ನು ದಾಖಲಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಅವಧಿಯಲ್ಲಿ ಬೇಳೆಕಾಳುಗಳು, ಭತ್ತ, ಕಬ್ಬು, ತೆಂಗು, ಅಡಿಕೆ, ಏಲಕ್ಕಿ, ಕಾಳು ಮೆಣಸು, ಗೋಡಂಬಿ, ವೀಳ್ಯದೆಲೆ, ಶ್ರೀಗಂಧದ ಮರ ಇವುಗಳ ಕೃಷಿಗೆ ಹೆಚ್ಚು ಒತ್ತು ನೀಡಲಾಗಿತ್ತು. ೧೮೦೦ರಿಂದ ೧೮೦೨ರ ಅವಧಿಯ ತಮ್ಮ ಪ್ರವಾಸದಲ್ಲಿ ಬುಕಾನನ್ ಪಟ್ಟಿ ಮಾಡಿರುವಂತೆ ಟಿಪ್ಪುವಿನ ಸಂಸ್ಥಾನದಲ್ಲಿ ಪಟ್ಟಣಗಳು ಮತ್ತು ಅಷ್ಟಗ್ರಾಮಗಳು ಎಂಬ ಆಯ್ದ ಪ್ರದೇಶಗಳಲ್ಲಿ ಒಟ್ಟು ೧೫ ಜಾತಿಯ ವಿವಿಧ ಹಣ್ಣಿನ ತಳಿಗಳು, ೩೪ ಬಗೆಯ ವಿವಿಧ ತರಕಾರಿ ಬೆಳೆಗಳು ಅಸ್ತಿತ್ವದಲ್ಲಿದ್ದವು. ಇದರಲ್ಲಿ ಪ್ರಮುಖವಾಗಿ ಬೆಂಗಳೂರು ನಗರದ ಲಾಲ್‌ಬಾಗ್ ಸೇರಿದಂತೆ ನಾಲ್ಕು ತೋಟಗಳಲ್ಲಿ ಔಷಧೀಯ ಸಸ್ಯಗಳು, ಗಿಡಮೂಲಿಕೆಯ ಬೇರುಗಳು ಮತ್ತು ಹಣ್ಣು, ತರಕಾರಿ ಹಾಗೂ ಆಲಂಕಾರಿಕ ಸಸ್ಯಗಳನ್ನು ಪ್ರತ್ಯೇಕವಾಗಿ ಬೆಳೆಯುತ್ತಿದ್ದ ಅಂಶವನ್ನು ಬುಕಾನನ್ ಒತ್ತಿ ಹೇಳಿದ್ದಾನೆ. ಎಲೆಯ ತೋಟ, ಹಣ್ಣಿನ ತೋಟ, ತೆಂಗಿನ ತೋಟ ಮತ್ತು ಹೂವಿನ ತೋಟಗಳೆಂದು ಇವುಗಳನ್ನು ಕರೆಯಲಾಗುತ್ತಿತ್ತು. ಹೈದರ್ ಮತ್ತು ಟಿಪ್ಪುವಿನ ಆಳ್ವಿಕೆಯಲ್ಲಿ ಒಟ್ಟು ೩೯ ಲಕ್ಷ ಎಕರೆ ಪ್ರದೇಶದಲ್ಲಿ ಎಂಟು ಲಕ್ಷ ಎಕರೆ ಭೂಮಿ

ನೀರಾವರಿಗೆ ಒಳಪಟ್ಟಿದ್ದನ್ನು ಮತ್ತು ನಾಡಿನುದ್ದಕ್ಕೂ ಕೆರೆ, ಕಟ್ಟೆಗಳನ್ನು ಕಟ್ಟಿಸಿರುವ ಇತಿಹಾಸವನ್ನು ಬುಕಾನನ್ ತನ್ನ ಕೃತಿಯಲ್ಲಿ ಸವಿವರವಾಗಿ ದಾಖಲಿಸಿದ್ದಾನೆ. ೧೭೯೦ರ ದಶಕದಲ್ಲಿ ಕಾವೇರಿ ನದಿಗೆ ಅಣೆಕಟ್ಟನ್ನು ನಿರ್ಮಿಸುವ ಕನಸು ಕಂಡು, ಈಗಿನ ಕೃಷ್ಣರಾಜ ಸಾಗರ ಜಲಾಶಯ ಇರುವ ಸ್ಥಳದಲ್ಲಿ ಪ್ರಥಮ ಬಾರಿಗೆ ಶಿಲಾನ್ಯಾಸ ನೆರವೇರಿಸಿದವನು ಟಿಪ್ಪು ಸುಲ್ತಾನ್ ಎಂಬುದು ಕಾವೇರಿ ನದಿಯ ಇತಿಹಾಸ ಬಲ್ಲವರಿಗೆ ತಿಳಿದಿರುವ ಸಂಗತಿಯಾಗಿದೆ. ಪಾಂಡವಪುರ ಮತ್ತು ಮೇಲುಕೋಟೆಯ ನಡುವೆ ಬರುವ ಕೆರೆತೊಣ್ಣೂರು ಎಂಬ ಗ್ರಾಮದಲ್ಲಿ ಹೈದರಾಲಿ ನಿರ್ಮಿಸಿರುವ ಬೃಹತ್ತಾದ ಕೆರೆ ತಂದೆ ಮತ್ತು ಮಗನ ದೂರದೃಷ್ಟಿಗೆ ಸಾಕ್ಷಿಯಾಗಿದೆ. ಹುಣಸೂರು ಪಟ್ಟಣದ ಮಗ್ಗುಲಲ್ಲಿ ಹರಿಯುವ ಲಕ್ಷ್ಮಣತೀರ್ಥ ನದಿಯ ನೀರನ್ನು ಒಳಗೊಂಡಂತೆ ಕಾವೇರಿಯ ಉಪನದಿಗಳಾದ ಶಿಂಷಾ, ಲೋಕಪಾವನಿ, ಕಪಿಲಾ, ನದಿಗಳ ನೀರನ್ನು ನಾಲೆಯ ಮೂಲಕ ಬಳಸಿಕೊಂಡು ಕೊಳ್ಳೆಗಾಲ ಸೇರಿದಂತೆ ಮೈಸೂರು ನಗರದ ಸುತ್ತಮುತ್ತ ಕೆರೆಯಾಶ್ರಿತ ಭೂಮಿಯಲ್ಲಿ ಭತ್ತ ಬೆಳೆಯಲಾಗುತ್ತಿತ್ತು. ಇವುಗಳಲ್ಲಿ ಬಂಗಾರ ಸಣ್ಣ ಮತ್ತು ರಾಜಮುಡಿ ಎಂಬ ತಳಿಗಳು ಪ್ರಮುಖವಾಗಿದ್ದವು. ಬೇಸಾಯದ ವಿಷಯದಲ್ಲಿ ಹೈದರಾಲಿ ಮತ್ತು ಟಿಪ್ಪು ಇಬ್ಬರೂ ವಾಣಿಜ್ಯ ಬೆಳೆಗಳಿಗೆ ಮಹತ್ವವನ್ನು ನೀಡಿದ್ದರು. ರೈತರಿಗೆ ಕಬ್ಬು, ತೆಂಗು, ಅಡಿಕೆ, ಗೋಡಂಬಿ, ಮೆಣಸು ಮತ್ತು ಏಲಕ್ಕಿ, ಬಾಳೆ ಹಾಗೂ ವೀಳ್ಯದೆಲೆಗಳನ್ನು ಬೆಳೆಯಲು ಪ್ರೋತ್ಸಾಹಿಸುತ್ತಿದ್ದರು. ಕರಾವಳಿ ಪ್ರದೇಶಗಳಿಗೆ ಅಡಿಕೆ, ತೆಂಗು ಮತ್ತು ಗೋಡಂಬಿ ಬೆಳೆಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿತ್ತು. ತೆಂಗು, ಅಡಿಕೆ ಬೆಳೆಗಾರರಿಗೆ ಮೊದಲ ಏಳು ವರ್ಷಗಳ ಕಾಲ ಭೂ ಕಂದಾಯದಿಂದ ವಿನಾಯಿತಿ ನೀಡುವುದರ ಜೊತೆಗೆ ಮಿಶ್ರ ಬೆಳೆಯ ಪದ್ಧತಿಗೆ ಪ್ರೋತ್ಸಾಹ ನೀಡಲಾಗಿತ್ತು. ರೈತರ ಕೃಷಿ ಉತ್ಪನ್ನಗಳ ಸುಗಮ ಮಾರಾಟಕ್ಕಾಗಿ ಪ್ರತೀ ಹತ್ತರಿಂದ ಹದಿನೈದು ಕಿಲೊಮೀಟರ್ ದೂರಕ್ಕೆ ವಾರದ ಸಂತೆಗಳನ್ನು ಟಿಪ್ಪು ಆಳ್ವಿಕೆಯಲ್ಲಿ ಆರಂಭಿಸಲಾಯಿತು. ರೈತರು ಭೂಮಿಯ ಕಂದಾಯ ಅಥವಾ ತೆರಿಗೆಯನ್ನು 'ಪಣಂ' ಎಂದು ಕರೆಯಲಾಗುತ್ತಿದ್ದ ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳ ಮೂಲಕ ಪಾವತಿಸುತ್ತಿದ್ದರು. ಇಡೀ ಬ್ರಿಟಿಷ್ ಆಳ್ವಿಕೆಯ ಭಾರತದಲ್ಲಿ ಇಂತಹ ವ್ಯವಸ್ಥೆ ಜಾರಿಯಲ್ಲಿದ್ದದ್ದು ಟಿಪ್ಪುವಿನ ಸಂಸ್ಥಾನದಲ್ಲಿ ಮಾತ್ರ ಎಂಬುದು ಗಣನೀಯವಾದ ಅಂಶ. ಉಳಿದ ಸಂಸ್ಥಾನಗಳಲ್ಲಿ ರೈತರು ದವಸ ಧಾನ್ಯಗಳ ಮೂಲಕ ತೆರಿಗೆ ಪಾವತಿ ಮಾಡುತ್ತಿದ್ದರು. ಟಿಪ್ಪು ಸುಲ್ತಾನ್ ತನ್ನ ಸಂಸ್ಥಾನದಲ್ಲಿ ಪಾಳು ಬಿದ್ದಿದ್ದ ಮೂರು ಲಕ್ಷ ಎಕರೆ ಭೂಮಿಯನ್ನು ತನ್ನ ಸೈನಿಕ ಕುಟುಂಬಗಳಿಗೆ ಹಂಚಿರುವುದು ವಿಶೇಷ ಸಂಗತಿ. ಪಟೇಲ ಅಥವಾ ನಾಡಗೌಡನ ಹುದ್ದೆಯಲ್ಲಿರಬೇಕಾದರೆ, ಆ ವ್ಯಕ್ತಿಯು ಕೃಷಿಯಲ್ಲಿ ನಿರತನಾಗಿರಬೇಕು ಎಂಬ ನಿಯಮವನ್ನು ಜಾರಿಗೆ ತಂದನು. ಇದರಿಂದಾಗಿ ಟಿಪ್ಪುವಿನ ಆಳ್ವಿಕೆಯಲ್ಲಿ ಜಾತಿ ಭೇದವಿಲ್ಲದೆ ಬಹುತೇಕ ಸಮುದಾಯಗಳು, ಅದರಲ್ಲೂ ವಿಶೇಷವಾಗಿ ದಲಿತರು ಮತ್ತು ಮುಸ್ಲಿಂ ಸಮುದಾಯದ ಮಂದಿ ಕೃಷಿಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡರು. ಇಂದಿಗೂ ಕೂಡ ಮಳವಳ್ಳಿ, ಬನ್ನೂರು, ಟಿ. ನರಸೀಪುರ ತಾಲ್ಲೂಕು, ಪಾಂಡವಪುರ, ಶ್ರೀರಂಗಪಟ್ಟಣ ಮತ್ತು ಮಂಡ್ಯ ತಾಲ್ಲೂಕುಗಳಲ್ಲಿ ಕೃಷಿಯನ್ನು ವೃತ್ತಿಯಾಗಿಸಿಕೊಂಡ ದಲಿತ ಹಾಗೂ ಮುಸ್ಲಿಂ ಕುಟುಂಬಗಳನ್ನು ಕಾಣಬಹುದು. ಬೆಲ್ಲ ಹಾಗೂ ಖಂಡಸಾರಿ ಸಕ್ಕರೆ ತಯಾರಿಸಲು ಕಬ್ಬಿನ ಬೆಳೆಗೆ ಪ್ರೋತ್ಸಾಹ ನೀಡಿದ್ದ ಟಿಪ್ಪು ಸುಲ್ತಾನ್ ತಮಿಳುನಾಡಿನಿಂದ ಪಟಾವಳಿ ಎಂಬ ವಿಕ್ಕ ಚಿಕ್ಕು ಗೇಣಿನ ದಪ್ಪ ಕಾಂಡದ ಹಾಗೂ ಅಧಿಕ ರಸ ನೀಡುವ ತಮಿಳುನಾಡು ಮೂಲದ ಕಬ್ಬಿನ ತಳಿಯನ್ನು ಮಂಡ್ಯ ಜಿಲ್ಲೆಯ (ಆಗಿನ ಅವಿಭಜಿತ ಮೈಸೂರು ಪ್ರಾಂತ್ಯ) ನೀರಾವರಿ ಪ್ರದೇಶದಲ್ಲಿ ಪರಿಚಯಿಸಿದ್ದನು. ಶ್ರೀರಂಗಪಟ್ಟಣದ ಸಮೀಪದ ಪಾಲಹಳ್ಳಿ ಗ್ರಾಮದಲ್ಲಿ ಖಂಡಸಾರಿ ಸಕ್ಕರೆಯ ಕಾರ್ಖಾನೆಯ ಅವಶೇಷಗಳು ಇಂದಿಗೂ ಇರುವುದು ವಿಶೇಷ ಸಂಗತಿ.

ಬ್ರಿಟಿಷ್ ಲೈಬ್ರರಿಯಲ್ಲಿ ಈಸ್ಟ್ ಇಂಡಿಯಾ ಕಂಪನಿಯು ತನ್ನ ಗೂಢಾಚಾರರ ಮೂಲಕ ಟಿಪ್ಪು ಮತ್ತು ಫ್ರೆಂಚರ ನಡುವೆ ನಡೆದಿರುವ ಪತ್ರ ವ್ಯವಹಾರ, ಟಿಪ್ಪು ಸಂಸ್ಥಾನದ ಉದ್ಯಮಗಳ ಕುರಿತಂತೆ ಕಲೆ ಹಾಕಿದ ಮಾಹಿತಿಗಳು ದೊರೆತಿದ್ದು, ಈ ಮಾಹಿತಿಯ ಪ್ರಕಾರ ಟಿಪ್ಪು ಸುಲ್ತಾನ್ ಫ್ರಾನ್ಸ್ ದೊರೆಗೆ ಮನವಿ ಸಲ್ಲಿಸಿ ಉಕ್ಕು ಮತ್ತು ಕಬ್ಬಿಣದ ತಜ್ಞರು, ಮದ್ದು ಗುಂಡು ತಯಾರಕರು, ಸಕ್ಕರೆ, ಗಾಜು, ಪಿಂಗಾಣಿ ತಯಾರಿಕೆಯ ತಜ್ಞರು ಹೀಗೆ ಹತ್ತು ವಿವಿಧ ಬಗೆಯ ಉದ್ಯಮಗಳಲ್ಲಿ ನುರಿತರಾದವರನ್ನು ಶ್ರೀರಂಗಪಟ್ಟಣಕ್ಕೆ ಕರೆಸಿಕೊಂಡ ಮಾಹಿತಿ ಲಭ್ಯವಾಗಿದೆ. ಚನ್ನಪಟ್ಟಣದಲ್ಲಿ ಕರಕುಶಲ ತಯಾರಿಕೆ, ಕೊಯಮತ್ತೂರಿನಲ್ಲಿ ಕೈಮಗ್ಗ ಮತ್ತು ಕಲ್ಲುಸಕ್ಕರೆ, ಶ್ರೀರಂಗಪಟ್ಟಣದಲ್ಲಿ ಸಕ್ಕರೆ, ಉಕ್ಕು ತಯಾರಿಕೆ, ದೇವರಾಯನ ದುರ್ಗದಲ್ಲಿ ಕಬ್ಬಿಣ ಅದಿರು ಗಣಿಗಾರಿಕೆ ಮತ್ತು ಕಬ್ಬಿಣ ತಯಾರಿಕೆ, ಸತ್ಯಮಂಗಲದಲ್ಲಿ ರೇಷ್ಮೆಯ ಕೈಮಗ್ಗಗಳು, ಕೊಚ್ಚಿನ್‌ನಲ್ಲಿ ಗೋಡಂಬಿ ಸಂಸ್ಕರಣಾ ಘಟಕಗಳು ಕಾರ್ಯನಿರತವಾಗಿದ್ದವು. ಚೀನಾದಿಂದ ರೇಷ್ಮೆ ಕೃಷಿಯ ಮಾಹಿತಿಯನ್ನು ತರಿಸಿಕೊಂಡು ರೇಷ್ಮೆ ಬೆಳೆಗೆ ಹೆಚ್ಚಿನ ಆದ್ಯತೆ ನೀಡಿದ್ದ ಟಿಪ್ಪು ಸುಲ್ತಾನ್ ಪಶ್ಚಿಮ ಬಂಗಾಳದಿಂದ ರೇಷ್ಮೆ ಹುಳುಗಳನ್ನು ಬಹುರುದ್ದೀನ್ ಮತ್ತು ಕಸ್ತೂರಿ ರಂಗ ಎಂಬ ಇಬ್ಬರು ರಾಯಭಾರಿಗಳ ಮೂಲಕ ತರಿಸಿದ ಘಟನೆ ಇತಿಹಾಸದಲ್ಲಿ ದಾಖಲಾಗಿದೆ. ೧೭೮೬ರಲ್ಲಿ ಹೈದರಾಬಾದ್ ನಿಜಾಂನೊಡನೆ ಯುದ್ಧ ಮಾಡುತ್ತಿದ್ದ ಸಂದರ್ಭದಲ್ಲಿ ಸೆಪ್ಟಂಬರ್ ೨೬ರಂದು ಯುದ್ಧಭೂಮಿಯಿಂದ ಶ್ರೀರಂಗಪಟ್ಟಣದ ಕೋಟೆಯ ಸೇನಾಪತಿಗೆ ಪತ್ರ ಬರೆದು ರೇಷ್ಮೆ ಹುಳುಗಳನ್ನು ಜತನದಿಂದ ಕಾಪಾಡಬೇಕೆಂದು ಟಿಪ್ಪು ಸುಲ್ತಾನ್ ಪತ್ರ ಬರೆದಿದ್ದನು. ಇದಲ್ಲದೆ ತನ್ನ ಸಂಸ್ಥಾನದ ಮಳವಳ್ಳಿ, ಚನ್ನಪಟ್ಟಣ, ದೊಡ್ಡಬಳ್ಳಾಪುರ, ಬಾಗಲಕೋಟೆ ಸೇರಿದಂತೆ ಒಟ್ಟು ೨೧ ಪ್ರದೇಶಗಳಲ್ಲಿ ರೇಷ್ಮೆ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಿದ್ದನು. ಶ್ರೀರಂಗಪಟ್ಟಣ, ಮೇಲುಕೋಟೆ ಮತ್ತು ಚಿಕ್ಕಬಳ್ಳಾಪುರದಲ್ಲಿ ಸಕ್ಕರೆ ಘಟಕಗಳನ್ನು ಸ್ಥಾಪಿಸಿದ್ದನು. ಪಿರಿಯಾಪಟ್ಟಣ ಮತ್ತು ಮಹಾರಾಯನ ದುರ್ಗದ ಭೂಮಿಯಲ್ಲಿ ಶ್ರೇಷ್ಠ ಗುಣಮಟ್ಟದ ಶ್ರೀಗಂಧದ ಮರಗಳನ್ನು ಬೆಳೆಯಲಾಗುತ್ತಿತ್ತು. ಇದಲ್ಲದೆ, ರೈತರಿಗೆ ಶ್ರೀಗಂಧ ಹಾಗೂ ಜಾಲಿ (ಗೊಬ್ಬಳಿ) ಮರಗಳನ್ನು ಬೆಳೆಸಲು ಪ್ರೋತ್ಸಾಹ ನೀಡಿ ಮರದ ಬೆಲೆಯನ್ನು ಸಂಪೂರ್ಣವಾಗಿ ಅವರಿಗೆ ಪಾವತಿಸಲಾಗುತ್ತಿತ್ತು. ಶ್ರೀರಂಗಪಟ್ಟಣದ ಗಂಜಾಂನಲ್ಲಿ ಗೊಬ್ಬಳಿ ಅಥವಾ ಜಾಲಿಮರದಿಂದ ಎತ್ತಿನ ಬಂಡಿಗಾಗಿ ಮರದ ಚಕ್ರಗಳು ಮತ್ತು ಫಿರಂಗಿಯನ್ನು ಸಾಗಿಸುವ ಬಂಡಿಗಳನ್ನು ತಯಾರು ಮಾಡಲಾಗುತ್ತಿತ್ತು. ಅತ್ಯಂತ ಗಟ್ಟಿಮುಟ್ಟಾದ ಜಾಲಿಮರದಿಂದ ಚಕ್ರಗಳನ್ನು ತಯಾರಿಸುವ ಕುಶಲಕರ್ಮಿಗಳ ಕುಟುಂಬಗಳು ಗಂಜಾಂನಲ್ಲಿ ಈಗಲೂ ಅದೇ ವೃತ್ತಿಯನ್ನು ಮುಂದುವರಿಸಿದ್ದಾರೆ.

ಒಂದು ಕಾಲದಲ್ಲಿ ಬೆಂಗಳೂರು ಹೊರವಲಯದ ಮಾವಳ್ಳಿ ಎಂಬ ಗ್ರಾಮ ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಕೃಷಿಗೆ ಆಯ್ಕೆ ಮಾಡಿಕೊಂಡ ಅಷ್ಟ ಗ್ರಾಮಗಳಲ್ಲಿ ಒಂದಾಗಿತ್ತು. ತಂದೆ ಮಗ ಇಬ್ಬರೂ ಅಭಿವೃದ್ಧಿಪಡಿಸಿದ ತೆಂಗು ಮತ್ತು ಹಣ್ಣಿನ ತೋಟ ಈಗ ಲಾಲ್ ಬಾಗ್ ಎಂಬ ಹೆಸರಿನಲ್ಲಿ ಜಗತ್ ಪ್ರಸಿದ್ಧ ಸಸ್ಯ ಕಾಶಿಯಾಗಿ ಹೆಸರು ಪಡೆದಿದೆ. ಟಿಪ್ಪು ಕಾಲಾನಂತರ ಬೆಂಗಳೂರು ನಗರಕ್ಕೆ ಬ್ರಿಟಿಷ್ ಅಧಿಕಾರಿಯಾಗಿ ಬಂದ ಮಾರ್ಕ್ ಕಬ್ಬನ್ ಇದರ ರೂವಾರಿಯಲ್ಲಿ ಒಬ್ಬನಾಗಿದ್ದಾನೆ.

ಟಿಪ್ಪುವಿನ ಅಧಿಕಾರದ ಅವಧಿಯಲ್ಲಿ ಸಂಸ್ಥಾನಕ್ಕೆ ಬರುತ್ತಿದ್ದ ದವಸ ಧಾನ್ಯಗಳನ್ನು ಹೇಗೆ ಸಮನಾಗಿ ಎಲ್ಲರಿಗೂ ಹಂಚಲಾಗುತ್ತಿತ್ತು ಎಂಬುದನ್ನು ಬುಕಾನನ್ ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ. ಒಂದು ಖಂಡುಗ ಅಥವಾ ೧೯೨೦ ಸೇರುಗಳು ಎಂಬ ಅಳತೆಯಲ್ಲಿ, ಸರ್ಕಾರಕ್ಕೆ ೧೯೨ ಸೇರು, ಅಮಲ್ದಾರರ ಕಚೇರಿಯ ಎಣ್ಣೆಯ ದೀಪ ಮತ್ತು ಇತರೆ ಖರ್ಚಿಗೆ ೨೪ ಸೇರು, ಬ್ರಾಹ್ಮಣರು, ಭಿಕ್ಷುಕರು ಮತ್ತು ಫಕೀರರು ಮುಂತಾದವರಿಗೆ ೧೨ ಸೇರು, ಕಾವಲುಗಾರನಿಗೆ ೬ ಸೇರು, ಅಳತೆ ಮಾಡುವವನಿಗೆ ೬ ಸೇರು ಮತ್ತು ದೇವಾಲಯದ ಪೂಜಾರಿಗೆ ೨೪ ಸೇರು ದಿನಸಿ ಸಂದಾಯವಾಗುತ್ತಿತ್ತು. ಇವರುಗಳು ಮಾತ್ರವಲ್ಲದೆ, ತಳವಾರನಿಗೆ ೨೪ ಸೇರು, ನೀರುಗಂಟಿಗೆ ೨೪ ಸೇರು, ಕ್ಷೌರಿಕ, ಕಮ್ಮಾರ ಮತ್ತು ಬಡಗಿಗೆ ತಲಾ ಹನ್ನೆರಡು ಸೇರು ಧಾನ್ಯವನ್ನು ವಿತರಿಸುತ್ತಿದ್ದನು. ತನ್ನ ಸಂಸ್ಥಾನದಲ್ಲಿ ಪಾನ ನಿಷೇಧವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿದ್ದ ಟಿಪ್ಪು ಸುಲ್ತಾನ್ ನಂತರದ ದಿನಗಳಲ್ಲಿ ವಾಣಿಜ್ಯ ಬೆಳೆಗಳಾದ ಗಸಗಸೆ ಹಾಗೂ ತಂಬಾಕು ಬೆಳೆಯನ್ನು ನಿಷೇಧಿಸಿದ ದಾಖಲೆಗಳಿವೆ.

ಟಿಪ್ಪು ಸುಲ್ತಾನ್‌ನ ವ್ಯಕ್ತಿತ್ವ ಮತ್ತು ಸಾಧನೆಗಳ ಇತಿಹಾಸದ ದಾಖಲೆಗಳು ಅಂಕಿ ಅಂಶಗಳ ಸಮೇತ ನಮ್ಮ ಕಣ್ಣ ಮುಂದಿರುವಾಗ ಟಿಪ್ಪು ಸುಲ್ತಾನ್ ದೇಶಭಕ್ತನಲ್ಲ, ಆತ ದೇಶದ್ರೋಹಿ, ಮತಾಂಧ ಎಂದು ಕರೆಯುವ ನಕಲಿ ಇತಿಹಾಸಕಾರರು ಒಮ್ಮೆ ತಮ್ಮ ತಲೆಯೊಳಗಿನ ಕಸ ಮತ್ತು ಎದೆಯೊಳಗಿನ ವಿಷ ಎರಡನ್ನೂ ಹೊರಹಾಕಿ ಮುಕ್ತ ಮನಸ್ಸಿನಿಂದ ಇತಿಹಾಸವನ್ನು ಗ್ರಹಿಸುವ ಅಗತ್ಯವಿದೆ.

**ಡಾ|| ಎನ್. ಜಗದೀಶ್ ಕೊಪ್ಪ**
ನಂ.೧೦೩, 'ಅಕ್ಷರ', ಆರೋಗ್ಯ ನಗರ ಬಡಾವಣೆ
ತೇಜಸ್ವಿನಗರ, ಧಾರವಾಡ – ೫೮೦೦೦೨
email : jagadishkoppa@gmail.com

# ಹೆಜ್ಜೆಗಳು ಮೂಡಿಸಿದ ಹಾದಿ

## ೧೮೦೦ – ೧೯೫೦

ಬಿರುಗಾಳಿಯು ಹಾರಿಸಿಕೊಂಡು ಹೋದ
ಚಿತ್ರದ ಚೂರುಗಳನ್ನಾಯ್ದು
ಜೋಡಿಸಲು ಕುಳಿತಿದ್ದೇವೆ ನಾವು
ಬೆವರು ಅರಗಿಹೋದ ನೆಲದಲ್ಲಿ
ಬೆರೆತ ಪರಿಮಳವ ಆಘ್ರಾಣಿಸಲು
ಬಿಡುಗಣ್ಣಿಂದ ಕುಳಿತಿದ್ದೇವೆ ನಾವು
ಅನಾದಿ ಮರದ ಗುರುತುಗಳು ತೋರಿದ
ಹೆಜ್ಜೆಜಾಡನ್ನು ಹಿಂಬಾಲಿಸುತ್ತ

ಮಹಿಳೆಯನ್ನು ನಿರ್ಲಕ್ಷಿಸಿ ಚರಿತ್ರೆ ಕಟ್ಟಿದ್ದರಿಂದ, ಚರಿತ್ರೆಯ ಪುಟಗಳಲ್ಲಿ ಮಹಿಳಾ ಸಂಕಥನವು ಕಾಣೆಯಾಗಿದೆ. ಮಹಿಳೆಗೆ ಸಂಬಂಧಿಸಿದ ಏನೆಲ್ಲವನ್ನೂ ಅಪ್ರಧಾನಗೊಳಿಸಿದ್ದರಿಂದ ಅವುಗಳನ್ನು ಚರಿತ್ರೆಯೆಂದು ಪರಿಗಣಿಸಲಿಲ್ಲ. ಈ ಇಮ್ಮುಖ ದಬಾವಣಿಯಲ್ಲಿ ಮಹಿಳಾ ಚರಿತ್ರೆಯ ನಿಜದ ನೆಲೆಗಳು ಮರೆಯಾದವು. ಅವುಗಳನ್ನು ಮರುಶೋಧಿಸಿಕೊಳ್ಳುವುದು ಇಂದಿನ ಅನಿವಾರ್ಯತೆಯಾಗಿದೆ. ಈ ಅನಿವಾರ್ಯತೆಯು ಪರಂಪರೆಯ ಪುನರ್‌ಸೃಷ್ಟಿಗೆ ಮಾತ್ರ ಸಂಬಂಧಿಸಿದ್ದಲ್ಲ. ವರ್ತಮಾನದ ಪುನರ್‌ಸೃಷ್ಟಿಗೂ ಸಂಬಂಧಿಸಿದ್ದು. ಸಮಕಾಲೀನ ಮಹಿಳಾ ಬದುಕಿನ ಸವಾಲು ಸಾಧ್ಯತೆಗಳನ್ನು ಅರ್ಥಮಾಡಿಕೊಳ್ಳಲು ಮಹಿಳಾ ಚರಿತ್ರೆಯ ತಿಳಿವು ಅಗತ್ಯವಾಗಿದೆ. ಭಾರತೀಯ ಸಮಾಜವನ್ನು ಏಕರೂಪೀ ಚಹರೆಯಾಗಿ ನೋಡುವುದು ಸಾಧ್ಯವಿಲ್ಲ. ಆದರೆ, ಮಹಿಳೆಯ ವಿಷಯಕ್ಕೆ ಬಂದಾಗ ಇವು – ಜಾತಿ, ಧರ್ಮ, ವರ್ಗ, ಭಾಷೆ, ಪ್ರದೇಶಗಳ ವಿವಿಧತೆಯಲ್ಲಿಯೂ ಏಕರೂಪತೆಯನ್ನೇ ಪ್ರಕಟಿಸುತ್ತವೆ. ಹೆಣ್ಣನ್ನು ಹಕ್ಕಿಲ್ಲದವಳಾಗಿ, ಭೋಗದ ವಸ್ತುವಾಗಿ, ಇಟ್ಟಾಂಗ ಇರಬೇಕಾದವಳಾಗಿ ನಿರ್ದೇಶಿಸಿಕೊಂಡು ಬಂದಿದ್ದರಿಂದ ಚರಿತ್ರೆಯುದ್ದಕ್ಕೂ ಹೆಣ್ಣಿನ ಅಸ್ಮಿತೆಯು ದಾಖಲಾಗಿದ್ದೇ ವಿರಳ. ದೊರೆತ ಅವಕಾಶಗಳಲ್ಲಿ ಅವಳು ತನ್ನ ಚಹರೆಯನ್ನು ರೂಪಿಸಿಕೊಂಡಳೇ? ಪಿತೃಪ್ರಾಧಾನ್ಯದ ಬದುಕನ್ನು ನಿಸೂರಾಗಿ ನಿಭಾಯಿಸಿದ ಅವಳ ಅದಮ್ಯ ತ್ರಾಣದ ಮೂಲ ಯಾವುದು? ಮಹಿಳೆಯನ್ನು ಸಹಜೀವಿಯಾಗಿ ಪರಿಗಣನೆಗೆ ತೆಗೆದುಕೊಳ್ಳದೆ ನಡೆದ ನಡಿಗೆಯಲ್ಲಿ ಪಿತೃ ಪ್ರಾಧಾನ್ಯತೆಯು ದಣಿಯಲಿಲ್ಲವೇ? ಒಗ್ಗಾಲಿನ

**ಡಾ॥ ವಿನಯಾ ಒಕ್ಕುಂದ**

ನಡಿಗೆಯನ್ನು ಸರಿಪಡಿಸಿಕೊಂಡು, ಎರಡೂ ಪಾದಗಳನ್ನೂರಿ ಸಶಕ್ತವಾಗಿ ಮುನ್ನಡೆಯಬೇಕೆಂಬ ಅಭೀಪ್ಸೆ ತಲೆದೋರಿದ್ದು ಯಾವಾಗ? ಅಂತಹ ಕ್ವಚಿತ್ ಸಂದರ್ಭಗಳಲ್ಲಿ ಚರಿತ್ರೆ ಪಡೆದುಕೊಂಡ ಲಾಭವೇನು? – ಈ ವಿಶ್ಲೇಷಣೆಯು ಮಹಿಳಾ ಅಸ್ಮಿತೆಯ ಸಂಕಥನವಾಗಿ ಮಾತ್ರ ಮುಖ್ಯವಾಗುವುದಿಲ್ಲ. ಮಾನವ ಚರಿತ್ರೆಯ ಸಶಕ್ತ ಕಥನವಾಗಿಯೂ ಮುಖ್ಯವಾಗುತ್ತದೆ. ಮನುಷ್ಯ ಜ್ಞಾನವು ರೂಪಿಸಿಕೊಂಡ ಎಲ್ಲ ಜ್ಞಾನಶಾಖೆಗಳನ್ನು ಏಕಮುಖಿ ಚಿಂತನೆಯಿಂದ ಬಿಡುಗಡೆಗೊಳಿಸಿ, ಸಹಜ ವಿಕಾಸಕ್ಕೆ ಅನುವು ಮಾಡಿಕೊಡುವ ಹಿನ್ನೆಲೆಯಲ್ಲಿಯೂ ಚರಿತ್ರೆಯ ಬಿಟ್ಟಸ್ಥಳಗಳನ್ನು ತುಂಬಿ ಪೂರ್ಣಗೊಳಿಸಬೇಕಿದೆ. ಚರಿತ್ರೆಯನ್ನು ಒಂದು ನಿಶ್ಚಿತ ಗುರಿಯೆಡೆಗೆ ಸಾಗುವ ರೇಖಾತ್ಮಕ ಚಲನೆಯಾಗಿ ನೋಡುವ ಯುರೋಪಿಯನ್ ಮಾದರಿಯ ಚರಿತ್ರೆಯ ನಿರೂಪಣೆಯಿಂದ ಬಿಡಿಸಿಕೊಳ್ಳ ಬೇಕಿದೆ. ಪ್ರಸ್ತುತ ಅಧ್ಯಯನವು ಈ ಕಾರಣಕ್ಕಾಗಿ, ಬಹುತ್ವದ ನೆಲೆಯಲ್ಲಿ ಚರಿತ್ರೆಯನ್ನು ಸುಪುಷ್ಟಗೊಳಿಸುವ ಮಹತ್ವದ ಕಾರ್ಯವಾಗಿದೆ. ಮಹಿಳಾ ಚರಿತ್ರೆಯನ್ನು ಕುರಿತು ಅಧಿಕೃತವಾಗಿ ಮಾತನಾಡಿದ ಮೊದಲಿಗಳು ಅಮೇರಿಕಾದ ಜರ್ಡಾ ತಾಲರ್ನರ್. ಅವಳು ಮಹಿಳಾ ಚರಿತ್ರೆಯ ಮರುಪೂರಣವು ೩ ಹಂತಗಳಲ್ಲಿ ನಡೆಯಬೇಕೆಂದು ಹೇಳುತ್ತಾಳೆ. – (i) Additive History ಕೂಡಿಸುವ ಚರಿತ್ರೆ (ii) Genderized History ಲಿಂಗವ್ಯವಸ್ಥೆಯ ಪರಿಗಣನೆಯ ಚರಿತ್ರೆ iii) Contributory History – ಈ ಮೂರು ವಿಧಾನಗಳನ್ನು ಸದ್ಯದ ಅಧ್ಯಯನ ಕ್ರಮದಲ್ಲಿಯೂ ಅಳವಡಿಸಿಕೊಳ್ಳಲಾಗಿದೆ.

**ಅಧ್ಯಯನ ವಿಧಾನ**

ಕ್ರಿ. ಶ. ೧೮೦೦ರಿಂದ ೨೦೦೦ವರೆಗಿನ ಕಾಲಾವಧಿಯ, ಮಹಿಳಾ ಕೇಂದ್ರಿತವಾಗಿ ಕರ್ನಾಟಕದ ಸಮಾಜದಲ್ಲಿ ನಡೆದ ಪಲ್ಲಟ ಪ್ರಕ್ರಿಯೆಯ ಅಧ್ಯಯನ ಇದಾಗಿದೆ. ಸಾಮಾಜಿಕ ಸ್ಥಿತ್ಯಂತರವನ್ನು ಸೂಕ್ಷ್ಮವಾಗಿ ಗಮನಿಸಲು ಮತ್ತು ಅಧ್ಯಯನದ ಅನುಕೂಲತೆಗಾಗಿ ಈ ಕಾಲಾವಧಿಯನ್ನು ಕ್ರಿ. ಶ. ೧೮೦೦–೧೯೫೦



ಸಮಕಾಲೀನ ಮಹಿಳಾ ಬದುಕಿನ ಸವಾಲು ಸಾಧ್ಯತೆಗಳನ್ನು ಅರ್ಥಮಾಡಿಕೊಳ್ಳಲು ಮಹಿಳಾ ಚರಿತ್ರೆಯ ತಿಳಿವು ಅಗತ್ಯವಾಗಿದೆ. ಭಾರತೀಯ ಸಮಾಜವನ್ನು ಏಕರೂಪೀ ಚಹರೆಯಾಗಿ ನೋಡುವುದು ಸಾಧ್ಯವಿಲ್ಲ. ಆದರೆ, ಮಹಿಳೆಯ ವಿಷಯಕ್ಕೆ ಬಂದಾಗ ಇವು - ಜಾತಿ, ಧರ್ಮ, ವರ್ಗ, ಭಾಷೆ, ಪ್ರದೇಶಗಳ ವಿವಿಧತೆಯಲ್ಲಿಯೂ ಏಕರೂಪತೆಯನ್ನೇ ಪ್ರಕಟಿಸುತ್ತವೆ. ಹೆಣ್ಣನ್ನು ಹಕ್ಕಿಲ್ಲದವಳಾಗಿ, ಭೋಗದ ವಸ್ತುವಾಗಿ, ಇಟ್ಟಾಂಗ ಇರಬೇಕಾದವಳಾಗಿ ನಿರ್ದೇಶಿಸಿಕೊಂಡು ಬಂದಿದ್ದರಿಂದ ಚರಿತ್ರೆಯುದ್ದಕ್ಕೂ ಹೆಣ್ಣಿನ ಅಸ್ಮಿತೆಯು ದಾಖಲಾಗಿದ್ದೇ ವಿರಳ.

ಮತ್ತು ೧೯೫೦ರಿಂದ ೨೦೦೦ ಎಂದು ವಿಂಗಡಿಸಿ ಕೊಳ್ಳಲಾಗಿದೆ. ಇದು ಸ್ಥೂಲವಾಗಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಾವಧಿಯಾಗಿಯೂ ಪರಿಗಣಿತವಾಗುತ್ತದೆ. ಮಾನವ ಚರಿತ್ರೆಯ ಅಧ್ಯಯನದಲ್ಲಿ ಕಾಲಮಿತಿಯು ಅಧ್ಯಯನದ ಚೌಕಟ್ಟು ಮಾತ್ರ. ಚರಿತ್ರೆಯ ಪಲ್ಲಟಗಳನ್ನು ಕಾಲಾವಧಿಯಲ್ಲಿ ನಿಖರಗೊಳಿಸುವುದು ಸಾಧ್ಯವಿಲ್ಲ. ನಿನ್ನೆಯಿಲ್ಲದೆ ಇಂದನ್ನು, ಇಂದಿನ ಒಳನೋಟಗಳಿಲ್ಲದೆ ನಾಳೆಯನ್ನು ಕಾಣುವುದೇ ಅಸಂಭವ. ಇದನ್ನೇ ಅಲ್ಲಮ "ಹಿಂದಣ ಹೆಜ್ಜೆಯನರಿಯದುದು ಮುಂದಣದನೇನ ಅರಿವುದೊ?" – ಎಂದು ಎಚ್ಚರಿಸುವುದು.

ಸ್ವಾತಂತ್ರ್ಯಪೂರ್ವದ, ರಾಜ್ಯ ರಚನಾ ಪೂರ್ವದ ಇತಿಹಾಸವನ್ನು ಆ ನಂತರದ ಚೌಕಟ್ಟಿಗೆ ಲಗತ್ತಿಸು ವಾಗಲೂ ಸಾಕಷ್ಟು ಸಮಸ್ಯೆಗಳು ಎದುರಾಗುತ್ತವೆ. ಇಂದು ಕನ್ನಡ ಭಾಷೆಯನ್ನು ಮಾತನಾಡುವ ಕರ್ನಾಟಕ ರಾಜ್ಯ ಎಂದು ಗುರುತಿಸಲಾಗುವ ಪ್ರದೇಶವು ಪ್ರಾಚೀನ ಕಾಲದಿಂದಲೂ ಬಹುಭಾಷಿಕ, ಬಹು ಸಾಂಸ್ಕೃತಿಕ ಸಮುದಾಯಗಳ ಜೀವನ ವಿಧಾನವನ್ನು ಒಳಗೊಂಡಿತ್ತು. ಕ್ರಿ. ಶ. ೯ನೇ ಶತಮಾನದ ಮೊದಲ ಉಪಲಬ್ಧ ಕೃತಿ 'ಕವಿರಾಜಮಾರ್ಗ'ದ ಕರ್ತೃ ಶ್ರೀವಿಜಯನು ಕನ್ನಡ ನಾಡನ್ನು 'ವಸುಧಾ ವಲಯ ವಿಲೀನ ವಿಶದ ವಿಷಯ ವಿಶೇಷಂ' (ಭೂಮಿಯಲ್ಲಿ ವ್ಯಾಪಿಸಿ ಹಬ್ಬಿ ವಿಶೇಷತೆಯನ್ನು ಹೊಂದಿರುವಂಥದ್ದು) ಎನ್ನುತ್ತಾನೆ. ಬೆರೆತೂ ಬೇರೆಯಾಗಿಯೂ ಇರುವ ಸಂಕರಗುಣಧರ್ಮವನ್ನಿದು ಸೂಚಿಸುತ್ತದೆ. ಸಾವಿರಾರು ವರ್ಷಗಳಿಂದ ಈ ಭೂವಲಯವನ್ನು ಆಳಿದ ರಾಜರುಗಳ ದೇಶ ನಕಾಶೆಯಲ್ಲಿದು ಸೇರಿಹೋಗಿತ್ತು. ಬ್ರಿಟಿಷ್ ವಸಾಹತುಶಾಹಿಯ ಕಾಲದಲ್ಲಿ ಈ ಪ್ರದೇಶವು ಮೈಸೂರು ಪ್ರಾಂತ, ಮದ್ರಾಸ್ ಪ್ರಾಂತ, ಹೈದರಾಬಾದ್ ಪ್ರಾಂತ, ಮುಂಬಯಿ ಪ್ರಾಂತಗಳಾಗಿ ವಿಂಗಡಣೆಯಾಗಿತ್ತು. ಈ ಭೂ ಪ್ರದೇಶವನ್ನು ಆಳ್ವಿಕೆಯ ಅನುಕೂಲಕ್ಕಾಗಿ ಬ್ರಿಟಿಷರು ಒಡೆದಿಟ್ಟರು. ಒಂದೇ ಭೌಗೋಲಿಕತೆ ಮತ್ತು ಸಾಂಸ್ಕೃತಿಕತೆಯನ್ನು ಹೊಂದಿದ್ದ ಕರಾವಳಿಯನ್ನು ಉತ್ತರ–ದಕ್ಷಿಣವಾಗಿ ವಿಭಜಿಸಿ ಒಂದನ್ನು ಮುಂಬೈ ಪ್ರಾಂತಕ್ಕೂ ಇನ್ನೊಂದನ್ನು ಮದ್ರಾಸ್ ಪ್ರಾಂತಕ್ಕೂ ಸೇರಿಸಿದರು. ಈ ಭೂಭಾಗಗಳು ಸಾಮಾಜಿಕ ರಾಜಕೀಯ ಕೇಂದ್ರವಾಗದೆ, ಅಂಚಿನಲ್ಲಿಯೇ ಉಳಿಯುವಂತಾಗಿದ್ದು ಕೂಡ ಇಲ್ಲಿ ಸಾಮಾಜಿಕ ಪಲ್ಲಟದ ಮುಖ್ಯಧ್ವನಿ ಹೊಮ್ಮದಿರುವ ಕಾರಣಗಳಲ್ಲಿ ಒಂದು ಎಂದು ಭಾವಿಸಬಹುದು. ಈ ಎಲ್ಲ ಅಡಚಣೆಗಳನ್ನು ಅಧ್ಯಯನದ ಸಂದರ್ಭದಲ್ಲಿ ಎದುರಾಗುವ ವಿಶೇಷತೆಗಳು ಎಂದು ಪರಿಗಣಿಸಬೇಕಿದೆ, ಬಿಕ್ಕಟ್ಟುಗಳಾಗಿ ಅಲ್ಲ.

**ಪೂರ್ವಕ್ಕೊಂದು ಹೊರಳುನೋಟ**

ಹತ್ತೊಂಭತ್ತನೆಯ ಶತಮಾನದ ಆರಂಭದ ದಶಕವನ್ನು ಭಾರತೀಯ ಮಹಿಳೆಯ ಬದುಕಿನ ಪಲ್ಲಟದ ಕಾಲವೆಂದೇ ಗುರುತಿಸಲಾಗಿದೆ. ಇಂದಿನ ಕರ್ನಾಟಕದ ಗಡಿರೇಖೆಯನ್ನು ಆ ಕಾಲಕ್ಕೂ ಕಾಲ್ಪನಿಕವಾಗಿ ಅನ್ವಯಿಸಿದರೆ, ಕರ್ನಾಟಕದ ಮಹಿಳಾ ಚರಿತ್ರೆಯನ್ನು ಪೋಷಿಸಿದ ಮುಖ್ಯಧಾರೆಗಳು ಕಾಣುತ್ತವೆ.

**೧) ಭಕ್ತಿ ಚಳುವಳಿಯ ಮಹಿಳಾ ಅಸ್ಮಿತೆಯ ನೆಲೆ**

೧೨ನೆಯ ಶತಮಾನದ ವಚನ ಚಳುವಳಿ ಮಹಿಳಾ ಸಂವೇದನೆಗೆ ನೀಡಿದ ಸಶಕ್ತ ಮೇಲ್‌ಚಲನೆಯನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ಜೇಡರ ದಾಸಿಮಯ್ಯನನ್ನು ಆದ್ಯ ವಚನಕಾರ ಎನ್ನುತ್ತಾರೆ. ಇವನ ಮೂಲಕವೇ ಲಿಂಗಸಮಾನತೆಯ ಚಿಂತನಾಧಾರೆಯು ಪ್ರವಹಿಸುತ್ತದೆ. 'ಒಳಗೆ ಸುಳಿವಾತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ ಕಾಣಾ ರಾಮನಾಥ' ಎಂದ ತಿಳಿವು ಅನನ್ಯವಾಗಿತ್ತು. ದೇಹವನ್ನು ಆತ್ಮದಿಂದ ಅಂದರೆ ವ್ಯಕ್ತಿತ್ವದಿಂದ ಪ್ರತ್ಯೇಕಿಸಿರುವುದು ದಾಸಿಮಯ್ಯನ ಹೆಗ್ಗಳಿಕೆ. ಸಮಾನತೆಯ ಚಳುವಳಿಯ ಮುನ್ನಡೆಯಲ್ಲಿ ಹೆಣ್ಣನ್ನು ವ್ಯವಸ್ಥೆಯ ನಿರ್ದೇಶಿತ ಸೂತ್ರಗಳಲ್ಲಿ ಮಾತ್ರ ಬಂಧಿಸಿಡುವುದನ್ನು ವಿರೋಧಿಸಿದ ಮಹದೇವಿಯಕ್ಕನ ಪ್ರಾಯೋಗಿಕ ಬದುಕಿದೆ. ಭಕ್ತಿಯ ಅಧ್ಯಾತ್ಮದ ಅನುಭಾವದ ಎತ್ತರಕ್ಕೇರುವ ಹಕ್ಕು ಮತ್ತು ಸಾಧ್ಯತೆಗಳು ಹೆಣ್ಣಿಗಿವೆ – ಎಂಬ ತಿಳಿವಿನ ಭಾಷ್ಯ ಬರೆಯುತ್ತಾಳೆ, ಅಕ್ಕ. ರಾಜಶಾಹಿಯನ್ನೂ, ಪುರುಷಶಾಹಿಯನ್ನೂ ಏಕಕಾಲದಲ್ಲಿ ಎದುರಿಸುವ ದಾಖಲೆ ಅಕ್ಕನದು. ಹೆಣ್ಣಿಗೆ



ಅಬ್ಬಕ್ಕ

ನಿಜಕ್ಕೂ ಬೇಕಿರುವುದೇನು? ಎಂಬ ಆತ್ಮಶೋಧನೆಗೆ ತೊಡಗುವ, ಚೆನ್ನಮಲ್ಲಿಕಾರ್ಜುನನೆಂಬ ರೂಹಿಲ್ಲದ ಸಖನನ್ನು ಆತ್ಮಸಂಗಾತಿಯಾಗಿಸಿಕೊಳ್ಳುವ ಬಹುಸ್ತರಗಳು ಅಕ್ಕನ ವಚನಗಳ ಜೀವಾಳವಾಗಿವೆ.

ಅದುವರೆಗಿನ ಸಾಮಾಜಿಕ ಚರಿತ್ರೆಯಲ್ಲಿ, ಗಂಡಾಳಿಕೆಯಲ್ಲಿ ನಗಣ್ಯವಾಗಿ ಕರಗಿಹೋದ ಮಹಿಳಾ ಸಂವೇದನೆಗೆ ಬಿಡುಗಡೆಯ ಅವಕಾಶ ಒದಗಿದ್ದು ಧಾರ್ಮಿಕ ಕ್ರಾಂತಿಯೆನಿಸಿದ ವಚನ ಸಂದರ್ಭದಲ್ಲಿ. ವಚನ ಚಳುವಳಿಯ ಬಹುದೊಡ್ಡ ಸಾಧನೆ ಎಂದರೆ, ದಲಿತ–ಶೂದ್ರ ಮೂಲಗಳಿಂದ ಬಂದ ಸಾಮಾನ್ಯ ಹೆಣ್ಣುಗಳು ಪುರುಷ ಪ್ರಧಾನ ವ್ಯವಸ್ಥೆಯನ್ನು ಹಲವು ಕೋನಗಳಿಂದ ಪ್ರಶ್ನಿಸಿದರು. "ಗಂಡು ಹೆಣ್ಣನ್ನು ಮೋಹಿಸಿದರೆ ಅವಳು ಅವನ ಒಡವೆ. ಹೆಣ್ಣು ಗಂಡನ್ನು ಮೋಹಿಸಿದರೆ ಉತ್ತರ ಯಾವುದು?" ಎಂದು ಮೋಹಿಸುವ ಹಕ್ಕಿಲ್ಲದ ಹೆಣ್ಣು ಬಾಳ್ವೆಯ ಸ್ಥಿತಿಯನ್ನು ಮನವರಿಕೆ ಮಾಡಿದವಳು ಗೊಗ್ಗವ್ವೆ. ದಲಿತ ವಚನಕಾರ್ತಿ ಕಾಳವ್ವೆ, ಮನುಷ್ಯರ ಆಹಾರ ಹಕ್ಕಿನ ಪ್ರಶ್ನೆಯನ್ನು ಕೇಳುತ್ತಾಳೆ, – "ಕುರಿ, ಕೋಳಿ, ಕಿರಿಮೀನುಗಳನ್ನು ತಿನ್ನುವವರು ಕುಲಜರಾದರೆ, ಶಿವಗೆ ಪಂಚಾಮೃತವನ್ನು ಕರೆಯುವ ಪಶುವನ್ನು ತಿನ್ನುವ ಮಾದಿಗ ಕೀಳೆನ್ನಬಹುದೇ?" ಇಷ್ಟು ಸರಳ ತರ್ಕದಿಂದ ಆಹಾರ ರಾಜಕಾರಣದ ಸಾಂಸ್ಕೃತೀಕರಣವನ್ನು ಬಯಲಿಗೆಳೆಯುತ್ತಾಳೆ. ಸಮಸ್ತ ವಚನ ಚಳುವಳಿಯು ಹೆಣ್ಣಿನ ಪ್ರತಿರೋಧದ, ಬದುಕಿನ ಪರಾಮರ್ಶೆಯ ಮರುಚಿಂತನೆಯ ಸಂಕಥನವಾಗಿದೆ. ವಚನ ಚಳುವಳಿಯು ಅಸಮಾನ ಸ್ತರಗಳನ್ನು ವಿರೋಧಿಸುವ, ಸಮಬಾಳುವಿಕೆಯ ಸೈದ್ಧಾಂತಿಕ ಪರಿಶ್ರಮದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರಿಂದ, ಅದರ ಒಂದು ಭಾಗವಾಗಿ ಮಹಿಳಾ ಸಮಾನತೆಯ ಪರಿಕಲ್ಪನೆಯನ್ನು ಉದಾರವಾಗಿ ಮತ್ತು ಕ್ರಿಯಾತ್ಮಕವಾಗಿ ಅನುಸಂಧಾನಿಸಿದ್ದಾರೆ. ಪರಿಣಾಮವಾಗಿ, ಭಕ್ತೆಯ ರೂಪದಲ್ಲಾದರೂ ಜೀವನವನ್ನು ತನ್ನ ಕಣ್ಣಿನಿಂದ ವಿಶ್ಲೇಷಿಸಿ ನೋಡುವುದು ಸಾಧ್ಯವಾಯಿತು. ಇದರಿಂದ ಹೆಣ್ಣೆಂದರೆ ದೇಹ ಮತ್ತು ಲೈಂಗಿಕತೆ ಎಂಬ ಪೂರ್ವಾಗ್ರಹವನ್ನು ನಿರಾಕರಿಸಲಾಯಿತು.

ಭಕ್ತಿ ಚಳುವಳಿಯ ಕಾಲದಲ್ಲಿ ಕಾಣುವ ಹೆಣ್ತನದ ದಿಟ್ಟ ಮಾದರಿಗಳು ಜನಪದ ಮಹಿಳೆಯ ಜೀವತ್ರಾಣದ ಫಲಿತ ರೂಪಗಳಾಗಿದ್ದವು. ಪಿತೃಪ್ರಾಧಾನ್ಯತೆಯು ಮೌಲ್ಯ, ಆದರ್ಶಗಳ ಪರಿಪ್ರೇಕ್ಷ್ಯಗಳಲ್ಲಿ ಹೆಣ್ಣನ್ನು ಉಪಭೋಗದ ಸರಕಾಗಿ ಸಜ್ಜುಗೊಳಿಸಿತ್ತು. ಅಭಿವ್ಯಕ್ತಿ ಹೆಣ್ಣಿಗೆ ನಿಷೇಧಿತವಾಗಿತ್ತು. ಅಪರಾಧವಾಗಿತ್ತು. ಹೆಣ್ಣಿನ ಅಭಿವ್ಯಕ್ತಿಯನ್ನು ಗಂಡುಚಿಂತನೆಯು ನಿಯಂತ್ರಿಸಿತ್ತು. ಮತ್ತು ನಿರ್ದೇಶಿಸಿತ್ತು. ಹಾಗಿದ್ದೂ ಜನಪದ ಮಹಿಳಾ ಸಾಹಿತ್ಯವು ಹೆಣ್ಣಿನ ಅಂತರ್ಗತ ಶಕ್ತಿಯ ಸಂಕೇತವಾಗಿದೆ.

*ಹಾದೀಲಿ ಹೋಗೋರೆ ಹಾಡೆಂದು ಕೇಳ್ಬೇಡಿ*
*ಹಾಡಲ್ಲ ನನ್ನ ಎದೆಯುರಿ । ದ್ಯಾವರೆ*
*ಬೆವರಲ್ಲ ನನ್ನ ಕಣ್ಣೀರು*

ಈ ಮಾದರಿಗಳು ಮಹಿಳಾ ಅಸ್ಮಿತೆಯ ಬೇರುಗಳಾಗಿವೆ. ಜನಪದ ಮಹಾಕಾವ್ಯಗಳಾದ ಮಲೆಮಾದೇಶ್ವರ ಮತ್ತು ಮಂಟೇಸ್ವಾಮಿ ಕಾವ್ಯಗಳು, ಸಿರಿಪಾಡ್ದನ ಮತ್ತು ಜುಂಜಪ್ಪನ ಕಾವ್ಯಗಳು ಪ್ರತಿಪಾದಿಸುವ ಸ್ತ್ರೀ ಮಾದರಿಗಳನ್ನು ವಿಶ್ಲೇಷಿಸಿದರೆ ಆ ಕಾಲಘಟ್ಟದ ಹೆಣ್ತನದ ಚೈತನ್ಯವು ವ್ಯವಸ್ಥೆಯೊಂದಿಗೆ ನಡೆಸಿದ ಸತತ ಪ್ರತಿರೋಧದ ಚರಿತ್ರೆ ಕಾಣುತ್ತದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿಂದ ಪಿತೃಪ್ರಧಾನ ಕುಟುಂಬ ವ್ಯವಸ್ಥೆಗೆ ಸಮಾಜವು ಹೊರಳುತ್ತಿರುವ ಸಂದರ್ಭದ ಸಂಘರ್ಷಕ್ಕೆ ಸಿರಿ ಮಾದರಿಯಾಗುತ್ತಾಳೆ. ಸಿರಿಯ ಪ್ರತಿರೋಧವು ವ್ಯವಸ್ಥೆಯ ತಿರುಗಣಿಯಲ್ಲಿ ಸಿಕ್ಕು ನಿಸ್ಸತ್ವವಾಗುತ್ತದೆ. ಮಾದೇಶ್ವರ ಮತ್ತು ಮಂಟೇಸ್ವಾಮಿ ಕಾವ್ಯಗಳಲ್ಲಿ ಹೆಣ್ಣಿನ ಪ್ರಜನನ ಮತ್ತು ಧಾರಕ ಶಕ್ತಿಗೆ ಬೆಚ್ಚಿ, ಹೆಣ್ಣನ್ನೇ ದೂರೀಕರಿಸುವ ಪ್ರಯತ್ನಗಳಿವೆ. ಈ ನಾಡಿನಲ್ಲಿ ಬೇರೂರಿರುವ ದೇವಿಯರ ಕಥಾನಕಗಳು ಮತ್ತು ಅವುಗಳಿಗೆ ಸಂಬಂಧಿಸಿದ ಆಚರಣೆಗಳನ್ನು ಗಮನಿಸಿದರೆ, ಹೆಣ್ಣಿನ ಸ್ವಾತಂತ್ರ್ಯವನ್ನು

ಹದ್ದುಬಸ್ತಿನಲ್ಲಿಡಲು ಪ್ರಯತ್ನಿಸಿದ ಮತ್ತು ಅದನ್ನೇ ದೈವೀಕರಿಸಲೆತ್ನಿಸಿದ ಪ್ರಯತ್ನಗಳು ಕಾಣುತ್ತವೆ. ಇಂದಿಗೂ ಕನ್ನಡನಾಡಿನ ಪ್ರಸಿದ್ಧ ಶಕ್ತಿ ತಾಣಗಳಾಗಿರುವ ಮೈಸೂರಿನ ಚಾಮುಂಡೇಶ್ವರಿ, ಸವದತ್ತಿಯ ಯಲ್ಲಮ್ಮ, ಸಿರ್ಸಿಯ ಮಾರಮ್ಮ ಮಾತ್ರವಲ್ಲದೇ ನೂರಾರು ಗ್ರಾಮದೇವತೆಗಳ ಕಥಾನಕಗಳು, ಐತಿಹ್ಯಗಳು ಈ ಅಭಿಪ್ರಾಯಕ್ಕೆ ಪೂರಕವಾಗಿವೆ.

**೨) ವಸಾಹತುಶಾಹಿ ವಿರೋಧಿ ನೆಲೆ**

ಕರ್ನಾಟಕದ ಕರಾವಳಿಯನ್ನು ಆಳಿದ ರಾಣಿಯಂದಿರು ವಸಾಹತುಶಾಹಿಯನ್ನು ತೀವ್ರವಾಗಿ ವಿರೋಧಿಸಿದ್ದು, ಬಹುಶಃ ಭಾರತದ ಚರಿತ್ರೆಯಲ್ಲಿಯೇ ಪ್ರಾಚೀನವಾದ ದಾಖಲೆ ಎನಿಸುತ್ತದೆ. ೧೭ ಮತ್ತು ೧೮ನೆಯ ಶತಮಾನದ ಕರಾವಳಿ ಭಾಗದಲ್ಲಿ ಮಾತೃ ಮೂಲೀಯ ಕುಟುಂಬ ಪದ್ಧತಿಯಿತ್ತು. ಸಾಳ್ವ ಮನೆತನದ ರಾಣಿಯಂದಿರು ಈ ಪ್ರದೇಶವನ್ನು ಆಳ್ವಿಕೆ ಮಾಡುತ್ತಿದ್ದರು. ಇದೇ ಕಾಲದಲ್ಲಿ ಯುರೋಪಿನ ರಾಷ್ಟ್ರಗಳಲ್ಲಿ ಮಹಿಳಾ ಸಮಾನತೆಯ ಆಶಯಗಳ ಬೆಳ್ಳಿರೇಖೆಗಳು ಕಾಣಿಸಿಕೊಳ್ಳುತ್ತಿದ್ದವು. ಮಹಿಳೆಯ ಹಕ್ಕುಬಾಧ್ಯತೆಗಳ ಚರ್ಚೆಯು ಮುನ್ನೆಲೆಗೆ ಬರುತ್ತಿತ್ತು. ಅದಕ್ಕಿಂತ ಬೇರೆಯಾಗಿ, ಕರ್ನಾಟಕದ ರಾಣಿಯರು, ಮಹಿಳೆಯು ನಿರ್ವಹಿಸಬೇಕಾದ ಸಾಮಾಜಿಕ ಕಾರ್ಯಭಾರದ ಬಗ್ಗೆ ಪ್ರಜ್ಞಾಪೂರ್ವಕವಾಗಿದ್ದರು. ಈ ಯಾವ ರಾಣಿಯರೂ ವಸಾಹತು ಶಕ್ತಿಯೊಂದಿಗೆ ಹೊಂದಾಣಿಕೆಯನ್ನು ಮಾಡಿಕೊಳ್ಳಲಿಲ್ಲ. ರಾಜಮನೆತನದ ಸುಖೋಪಭೋಗವೇ ಮುಖ್ಯ ಎಂದುಕೊಳ್ಳಲಿಲ್ಲ. ನಾಡಿನ ಜನರ ಹಿತ ಮತ್ತು ಏಳ್ಗೆಗಾಗಿ ಪ್ರಾಣದ ಹಂಗು ತೊರೆದು ಹೋರಾಡಿದರು. 'ಕಾಳುಮೆಣಸಿನ ರಾಣಿ' ಎಂದೇ ಪ್ರಸಿದ್ಧಳಾದ ರಾಣಿ ಚನ್ನಭೈರಾದೇವಿಯು ಪೋರ್ತುಗೀಸರಿಗೆ ಸೊಪ್ಪು ಹಾಕದೆ, ಸತತ ೫೦ ವರ್ಷ ಆಳ್ವಿಕೆಯನ್ನು ನಡೆಯಿಸಿ, ತನ್ನ ನಾಡನ್ನು ಸಮೃದ್ಧ ವಾಣಿಜ್ಯ ಬೆಳೆಗಳ ನೆಲೆಯಾಗಿಸಿದಳು. ಇದೇ ವಂಶದ ವೀರರಾಣಿ ಅಬ್ಬಕ್ಕ, ತನ್ನ ಮಾವ–ಪತಿ ಇಬ್ಬರೂ ಪೋರ್ತುಗೀಸರೊಂದಿಗೆ ಒಳ ಒಪ್ಪಂದ ಮಾಡಿಕೊಂಡು ಕಪ್ಪಕಾಣಿಕೆ ಸಲ್ಲಿಸಲು ಸಿದ್ಧರಾದಾಗ ಅವರನ್ನೇ ಎದುರು ಹಾಕಿಕೊಂಡು, ತನ್ನ ಪ್ರಜೆಗಳ ಆಡಳಿತಗಾರರ ಸಹಾಯದಿಂದ ನಾಡನ್ನು ವಸಾಹತು ಮುಕ್ತವಾಗಿಡಲು ಶ್ರಮಿಸಿದಳು. ಪೋರ್ತುಗೀಸರನ್ನು ಎದುರಿಸಲು ಬಿಜಾಪುರದ ಸುಲ್ತಾನನೊಂದಿಗೆ ಸೈನಿಕ ಒಪ್ಪಂದವನ್ನು ಮಾಡಿಕೊಂಡಳು. ಅರಬ್ ರಾಷ್ಟ್ರಗಳೊಂದಿಗೆ ದೊಡ್ಡ ಪ್ರಮಾಣದ ವಾಣಿಜ್ಯ ವ್ಯವಹಾರವು ನಡೆಯುತ್ತಿತ್ತು. ಹೀಗೆ ಅರಬ್ ರಾಷ್ಟ್ರಗಳಿಗೆ ಉಳ್ಳಾಲದಿಂದ ರಫ್ತಾಗುತ್ತಿದ್ದ ವಾಣಿಜ್ಯ ಪದಾರ್ಥಗಳು ತುಂಬಿದ ಹಡಗನ್ನು ಪೋರ್ತುಗೀಸರು ತಡೆದು ವಶಪಡಿಸಿಕೊಳ್ಳಲು ಯತ್ನಿಸುತ್ತಾರೆ. ಕೆರಳಿದ ರಾಣಿ ಅಬ್ಬಕ್ಕ ತನ್ನ ನಾಡಿನ ಮಾಪಿಳ್ಳೆಗಳ ನಾಡಬಾಂಬ್‌ಗಳ ಸೈನ್ಯದ ಸಹಾಯದೊಂದಿಗೆ ರಾತ್ರಿ ಕಡಲ ಗೆರಿಲ್ಲಾ ಯುದ್ಧ ನಡೆಸುತ್ತಾಳೆ.

ಸುಮಾರು ೨೦೦ ಪೋರ್ತುಗೀಸ ಸೈನಿಕರು ಮೃತರಾದರೆಂದು ಚರಿತ್ರೆ ದಾಖಲಿಸಿದೆ. ಇದರ ಪರಿಣಾಮವಾಗಿ ಅಬ್ಬಕ್ಕ ರಾಣಿಯು ಆ ನಂತರದ ಕಾಲದಲ್ಲಿ ಪೋರ್ತುಗೀಸರಿಂದ ನಿರಂತರ ಆಕ್ರಮಣ, ಹಿಂಸೆಗಳನ್ನೆದುರಿಸಿ ಮರಣ ಹೊಂದಬೇಕಾಗುತ್ತದೆ. ಒಂದೊಮ್ಮೆ ರಾಣಿ ಅಬ್ಬಕ್ಕ ತಡೆಗೋಡೆಯಾಗಿ ನಿಂತಿರದಿದ್ದರೆ, ಕರ್ನಾಟಕದ ಕರಾವಳಿಯು ಪೋರ್ತುಗೀಸರ ವಸಾಹತುವಾಗಿ, ತನ್ನ ವೈವಿಧ್ಯಮಯ ಸಾಂಸ್ಕೃತಿಕ ವೈಭವವನ್ನು ಕಳೆದುಕೊಳ್ಳುತ್ತಿತ್ತು.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಮೊದಲೇ, ಬ್ರಿಟಿಷರ ರಾಜನೀತಿಯನ್ನು ಎದುರಿಸಿ ಹೋರಾಡಿದ ಕಿತ್ತೂರು ಸಂಸ್ಥಾನವನ್ನಾಳಿದ ರಾಣಿ ಚೆನ್ನಮ್ಮ ಮುಖ್ಯಳಾಗುತ್ತಾಳೆ. ಪತಿ ಮಲ್ಲಸರ್ಜದೇಸಾಯಿ ಮತ್ತು ಮಗ ಶಿವಲಿಂಗಸರ್ಜನಿಗೆ ಬೆಂಗಾವಲಾಗಿ ನಿಂತು ಚೆನ್ನಮ್ಮ ರಾಣಿಯು ನಡೆಯಿಸಿದ ಸ್ವಾತಂತ್ರ್ಯ ಹೋರಾಟದ ಕಥನವು ಮಹಿಳಾ ಚರಿತ್ರೆಯನ್ನು ಹೊಳಪುಗೊಳಿಸಿದೆ. ೧೮೨೪ರ ಸೆಪ್ಟೆಂಬರ್ ತಿಂಗಳಿನಿಂದ ಚೆನ್ನಮ್ಮ ಕಿತ್ತೂರಿನ ಸಂಸ್ಥಾನದ ರಾಜಕೀಯದಲ್ಲಿ ಆಡಳಿತದಲ್ಲಿ ತೀರಾ ಮುಖ್ಯಳಾಗುತ್ತಾಳೆ. 'ದತ್ತು ಮಕ್ಕಳಿಗೆ ಹಕ್ಕಿಲ್ಲ' ಎಂಬ ಆಂಗ್ಲರ ಕಾನೂನನ್ನು ವಿರೋಧಿಸುತ್ತಾಳೆ. ಈ ವಿರೋಧ, ಪರಕೀಯ ಶಕ್ತಿಯು ಈ ನೆಲದ ನೀತಿ–ನಿಯಮಗಳನ್ನು ಒತ್ತುವರಿ ಮಾಡುತ್ತಿವೆ ಎಂಬ ಸಂಕಟವಾಗಿದೆ. ಹೆಣ್ಣಿನ ಗರ್ಭಾಶಯದ ಮೇಲೂ ನಿಯಂತ್ರಣ ಸಾಧಿಸಲು ಯತ್ನಿಸುವ ಯಾಜಮಾನ್ಯದ ವಿರುದ್ಧದ ಧ್ವನಿಯಾಗಿದೆ. ಕೊನೆಗೂ ರಾಣಿ ಚೆನ್ನಮ್ಮ ಬ್ರಿಟಿಷರ ಸೆರೆಯಾಗುತ್ತಾಳೆ. ಆಂಗ್ಲರ ನಿರಂತರ ಹಿಂಸೆಯನ್ನು ಸಹಿಸಲಾಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಕಿತ್ತೂರಿನ ಚೆನ್ನಮ್ಮ ಮತ್ತು ಅವಳ ಸೊಸೆ ರುದ್ರಮ್ಮನ ಇತಿಹಾಸವನ್ನು ಜನಪದರು ಕಥನವಾಗಿಸಿದ್ದಾರೆ –

*ಹೊಂಗಲದ ಮಠದಾಗ ಲಿಂಗಪೂಜೆಯ ಮಾಡಿ*
*ಭಂಗಾಗುದೆಂದು ಎದೆಗುಂದಿ ಚೆನ್ನವ್ವ*
*ಉಂಗುರ ವಜ್ಜಿರ ನುಂಗ್ಯಾಳೊ*

ಕನ್ನಡನಾಡಿನ ರಾಣಿಯಂದಿರು ವಸಾಹತುಶಾಹಿಯ ವಿರುದ್ಧ ನಡೆಸಿದ ಹೋರಾಟವೇ ಕನ್ನಡ ನಾಡಿನ ಮಹಿಳಾ ಚರಿತ್ರೆಯ ಪೂರ್ವಪೀಠಿಕೆಯಾಗಿದೆ.

ಇಷ್ಟು ಹಿನ್ನೆಲೆಯಲ್ಲಿ ಆಧುನಿಕ ಕಾಲಘಟ್ಟವನ್ನು ಪ್ರವೇಶಿಸಬಹುದು –

**ಸ್ವಾತಂತ್ರ್ಯದ ನಡಿಗೆ**

ಭಾರತದಲ್ಲಿ ಅದರಂತೆ ಕರ್ನಾಟಕದಲ್ಲಿ ೧೯ನೆಯ ಶತಮಾನದ ಮಹಿಳೆಯ ಚರಿತ್ರೆಯೆಂದರೆ, ದೇಶದ ಸ್ವಾತಂತ್ರ್ಯ ಹೋರಾಟದ ಸಹಯಾನವಾಗಿದೆ. ವಸಾಹತು ಶಕ್ತಿಯನ್ನು ಎದುರಿಸುವ ಕಾರಣವಾಗಿ ವಸಾಹತು ಪರಿಣಾಮವಾದ ಸಾಮಾಜಿಕತೆಯನ್ನು ಅನುಸರಿಸುವ ಜರೂರತ್ತು ಎದುರಾಯಿತು. ಆಧುನಿಕವಾದ ಹೊರಳುವಿಕೆಯು, ಸ್ವಾತಂತ್ರ್ಯ ಚಳುವಳಿಯೊಂದಿಗೆ ಸಮಾಜ ಸುಧಾರಣೆಯ ನೈತಿಕ ಆದ್ಯತೆಯನ್ನು ಬೆಸೆಯಿತು. ಇದರಿಂದಾಗಿ ಮಹಿಳೆಯ ದಮನಿತ ಚರಿತ್ರೆಗೆ ಹಿನ್ನಡೆ ಒದಗುತ್ತ, ಸಾರ್ವತ್ರಿಕ ಶಿಕ್ಷಣ ಮತ್ತು ಉದ್ಯೋಗಾವಕಾಶಗಳ ಬಾಗಿಲು ತೆರೆಯಿತು. 'ಮಹಿಳೆಯರ ಪಾಲುದಾರಿಕೆಯಿಲ್ಲದೆ ದೇಶದ ಸ್ವಾತಂತ್ರ್ಯ ಹೋರಾಟವು ಯಶಸ್ವಿಯಾಗಲಾರದು' ಎನ್ನುವ ಗಾಂಧೀಜಿಯವರ ತಿಳಿವು ಮಹಿಳಾ ಚರಿತ್ರೆಗೆ ಒಂದಿಷ್ಟು ಪ್ರೇರಣೆಯನ್ನು ಒದಗಿಸಿತು. "ಅಹಿಂಸಾತ್ಮಕ ಹೋರಾಟದ ಸೌಂದರ್ಯವೆಲ್ಲಿ ಅಡಗಿದೆಯೆಂದರೆ, ಮಹಿಳೆಯರೂ ಪುರುಷರೊಂದಿಗೆ ಸಮಪಾಲುದಾರರಾಗ ಬಹುದು; ಅಹಿಂಸೆಯ ಚಳುವಳಿಗೆ ಕಷ್ಟಸಹಿಷ್ಣುಗಳು ಬೇಕು. ಮಹಿಳೆಯರಿಗಿಂತ ಹೆಚ್ಚು ಕಷ್ಟ ಸಹಿಷ್ಣುಗಳು ಮತ್ತೆಲ್ಲಿ ದೊರೆಯುತ್ತಾರೆ? ಎಂಬ ಗಾಂಧೀಜಿಯ ಸಂಘಟನಾ ಸಾಮರ್ಥ್ಯದಿಂದ ಮಹಿಳಾ ಪಾಲುದಾರಿಕೆಯ ಪ್ರಮಾಣವು ಹೆಚ್ಚಿತು. ಆದರೆ, ಮಹಿಳೆಯರು ರಾಜಕೀಯ ಹೋರಾಟದಲ್ಲಿ ನೇರವಾಗಿ ಪಾಲುದಾರರಾಗ ಬೇಕಿಲ್ಲ. ಮಹಿಳೆಯರು ನಿರ್ವಹಿಸಬೇಕಾದ ಕ್ರಿಯಾತ್ಮಕವಾದ ಪೂರಕವಾದ ಯೋಜನೆಗಳಿವೆ ಎನ್ನುವುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಈ ನಿಲುವನ್ನು ಕರ್ನಾಟಕದ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಕಟುವಾಗಿ ವಿರೋಧಿಸಿದರು. ಸ್ತ್ರೀ–ಪುರುಷ ಭೇದವೆನ್ನುವುದು ಅಹಿಂಸಾತ್ಮಕ ಹೋರಾಟಕ್ಕೆ ತಕ್ಕದಲ್ಲವೆಂದು ಗಾಂಧೀಜಿಯವರಿಗೆ ಮಾರ್ಗರೆಟ್ ಕಸಿನ್ಸ್ ಪತ್ರ ಬರೆದ ಅದೇ ಕಾಲದಲ್ಲಿ, ದಂಡಿ ಉಪ್ಪಿನ ಸತ್ಯಾಗ್ರಹದಲ್ಲಿ ಹೆಣ್ಣುಮಕ್ಕಳನ್ನು ಸೇರಿಸಿಕೊಳ್ಳುವ ಒತ್ತಡ ತಂದವರು ಕಮಲಾದೇವಿ. "ನನ್ನ ಮಟ್ಟಿಗೆ ಸ್ವಾತಂತ್ರ್ಯ ಚಳುವಳಿಯು ಮಹಿಳೆಯರ ಬಂಧ ವಿಮೋಚನೆಗೊಂದು ಅವಕಾಶ" ಎಂದು ಮನವರಿಕೆ ಮಾಡಿಸಿ ಮಹಿಳೆಯರ ಸಮಪಾಲಿನ ಹಕ್ಕೊತ್ತಾಯವನ್ನು ಮಂಡಿಸಿದರು.

ಮಂಗಳೂರಿನ ಪ್ರತಿಷ್ಠಿತ ಶ್ರೀಮಂತ ಸಾರಸ್ವತ ಕುಟುಂಬದಲ್ಲಿ ಜನಿಸಿದ್ದ ಕಮಲಾದೇವಿಯವರದು ಆಧುನಿಕ ಮನೋಭಾವದ ಕುಟುಂಬವಾಗಿತ್ತು. ಗಾಂಧೀಜಿ ಮತ್ತು ಅನಿ ಬೆಸೆಂಟರು ಮಂಗಳೂರಿಗೆ ಆಗಮಿಸಿದ್ದಾಗ ಕಮಲಾದೇವಿ ಅವರಿಂದ ಪ್ರಭಾವಿತರಾದರು. ದೇಶದ ಸ್ವಾತಂತ್ರ್ಯದ ಬಯಕೆ ಅವರ ರಾಜಕೀಯ ಚಿಂತನೆಗಳನ್ನು ಗರಿಗೆದರಿಸಿತು. ಮಹಿಳಾ ದೌರ್ಜನ್ಯದ ಅರಿವು ಅವರ ಸಮಾಜವಾದಿ ಚಿಂತನೆಯನ್ನು ರೂಪಿಸಿತು. ಮದ್ರಾಸಿನ ಹರೀಂದ್ರನಾಥ ಚಟ್ಟೋಪಾಧ್ಯಾಯ ಅವರನ್ನು ಪ್ರೀತಿಸಿ ಮದುವೆಯಾದರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದ ಸಂಘಟನೆಯಲ್ಲಿ ಕಮಲಾದೇವಿ ಮತ್ತು ಉಮಾಬಾಯಿ ಕುಂದಾಪುರ ಅವರ ಪಾತ್ರ ಶ್ಲಾಘನೀಯವಾಗಿತ್ತು. ಅಲ್ಲಿಂದ ಅವರು ಗಾಂಧೀಜಿಯವರ

### ಕುರ್ಚಿ ಮಹಿಮೆ

ಒಂದು ಸಲ ಕುಳಿತವರು
ನಿನ್ನ ಬಿಟ್ಟಿರಲು
ಒಪ್ಪುವುದೇ ಇಲ್ಲ
ಕುಳಿತಷ್ಟು ಇನ್ನೂ
ಕುಳಿತುಕೊಳ್ಳಬೇಕೆನ್ನುವ ಚಟ!
ಎದ್ದೇಳು ಅಂದರು
ಕೈಹಿಡಿದು ಜಗ್ಗಿದರು
ಜಾಡಿಸಿ ಒದ್ದರೂ
ನಿನ್ನನ್ನು ಬಿಡದಿರುವ ಹಠ!!

**ಎಚ್. ಕೆ. ಕೊಟ್ರಪ್ಪ**
ಹರಿಹರ – ೫೭೭೬೦೧

## ದಿವಂಗತ ಶೇಷನಾರಾಯಣ

ಶ್ರೀ ಶೇಷನಾರಾಯಣ ಅವರ ಹುಟ್ಟೂರು ಕರ್ನಾಟಕ - ತಮಿಳು ನಾಡು ಗಡಿ ಭಾಗದ ಪಾಳ್ಯ. ಹಾಗಾಗಿ ಅವರಿಗೆ ತಮಿಳು ಚೆನ್ನಾಗಿ ಬರುತ್ತಿತ್ತು. ಅನೇಕ ಕತೆಗಳನ್ನು ತಮಿಳಿನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ತಾವೇ ರಚಿಸಿದ ಸುಮಾರು ೫೦ ಕೃತಿಗಳಲ್ಲಿ 'ಕಾವೇರಿ : ಒಂದು ಚಿಮ್ಮು - ಒಂದು ಹೊರಳು' ಒಂದು ಪ್ರಮುಖ ಆಕರ ಗ್ರಂಥ. 'ಚಿತ್ರಗುಪ್ತ' ವಾರ ಪತ್ರಿಕೆಯಲ್ಲಿ ಸಹಸಂಪಾದಕರಾಗಿದ್ದ ಅವರು ನಂತರ ತಮ್ಮದೇ ಮುದ್ರಣಾಲಯವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದ್ದರು. ಅವರು 'ಹೊಸತು' ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ನವಕರ್ನಾಟಕ ಪ್ರಕಾಶನ ಅವರ 'ಮುದ್ರಕನ ಸಾಹಿತ್ಯ ನಂಟು' ಹೊತ್ತಿಗೆಯನ್ನು ಪ್ರಕಟಿಸಿದೆ. ಆಗಸ್ಟ್ ೭ರಂದು ಅಸುನೀಗಿದ ಶೇಷನಾರಾಯಣ ಅವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ನಮನ ಸಲ್ಲಿಸುತ್ತದೆ.

ಸಮೀಪವರ್ತಿಗಳಾದರು. ೧೯೩೦ರಲ್ಲಿ ಮುಂಬೈಯ ಆಜಾದ್ ಮೈದಾನದಲ್ಲಿ ಗೋಳಿಬಾರ್ ನಡೆದಾಗ, ಕೈಯಿಂದ ರಕ್ತ ಸೋರುತ್ತಿದ್ದರೂ ತ್ರಿವರ್ಣ ಧ್ವಜದ ಗೌರವವನ್ನು ಕಾಪಾಡಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ ನಾಲ್ಕು ಬಾರಿ ಜೈಲು ಸೇರಿದ್ದ ಕಮಲಾದೇವಿ, ಬ್ರಿಟಿಷ್ ಪ್ರಭುತ್ವದ ಮೊದಲ ಮಹಿಳಾ ರಾಜಕೀಯ ಖೈದಿ ಎನಿಸಿಕೊಂಡರು. ಮಹಿಳೆಯರೂ ಚಾರಿತ್ರಿಕ ದಾಂಡಿ ಯಾತ್ರೆಯಲ್ಲಿ ಪಾಲುದಾರರಾಗಲು ಕಾರಣರಾದರು.

ಈ ಕಾಲಘಟ್ಟದಲ್ಲಿ ದೇಶದ ಮಹಿಳಾ ಪ್ರಜ್ಞೆಯಲ್ಲಿ ಸಂಭವಿಸಿದ ಚಲನಶೀಲ ವಿಸ್ತರಣೆಯನ್ನು ಅಲಕ್ಷಿಸಿ, ಆ ಎಲ್ಲ ವಾರಸುದಾರಿಕೆಯನ್ನು ಗಾಂಧೀಜಿಯವರಿಗೆ ನೀಡುವುದೂ ಅವಸರದ ತೀರ್ಮಾನವಾಗಿದೆ. ಗಾಂಧೀಜಿಯ ವಿಚಾರಧಾರೆಗೆ ಸಹಮತವನ್ನು ಸಹಸ್ಪಂದನವನ್ನು ಮಹಿಳೆಯರು ತೋರಿದ್ದಾರೆ. ಜನಪದ ಮಹಿಳೆಯರ ವಿವೇಕ ಪ್ರಜ್ಞೆಗೆ ಗಾಂಧೀಜಿ ನೀಲನಕ್ಷೆಯನ್ನು ಒದಗಿಸಿದರು. ರಾಜಕೀಯವಾಗಿ ಕ್ರಿಯಾಶೀಲರಾಗಿರುವ ಮಹಿಳೆಯರು ಕೌಟುಂಬಿಕ ವಲಯದಲ್ಲಿ ತಿರುಗಿಬಿದ್ದು ದಂಗೆಯೇಳುವುದಿಲ್ಲ ಎಂಬ ಆಶ್ವಾಸನೆಯನ್ನು ಗಾಂಧೀಜಿ ಪಿತೃಪ್ರಾಧಾನ್ಯ ವ್ಯವಸ್ಥೆಗೆ ನೀಡಿದರು. ದೂರ ಪರಿಣಾಮದಲ್ಲಿ ಆಧುನಿಕ ಮಹಿಳೆಯರು ಪುರುಷ ಪ್ರಧಾನ ವ್ಯವಸ್ಥೆಗೆ ಕೀಲುಗೊಂಬೆಗಳಾಗಿಯೇ ಇರುವಂತೆ ಮಾಡಿತು. ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿದ್ದ ಮಹಿಳೆಯರು ಆ ನಂತರದಲ್ಲಿ ಮರೆಗೆ ಸಂದಿದ್ದು ಈ ಮಾತಿಗೆ ಪುರಾವೆಯಾಗಿದೆ. "ಪ್ರಪಂಚದ ಯಾವುದೇ ಚಳುವಳಿಯು ಮಹಿಳೆಯರ ಪಾಲುದಾರಿಕೆಯಿಲ್ಲದೆ ಯಶಸ್ವಿಯಾಗಿಲ್ಲ. ಆದರೆ ಆ ಚಳುವಳಿಗಳು ಮಹಿಳೆಯರ ಬದುಕಿಗೆ ಕೊಟ್ಟ ಕೊಡುಗೆಯೇನು?" ಎನ್ನುವುದು ಪ್ರಶ್ನಾರ್ಹವಾಗಿದೆ ಎನ್ನುತ್ತಾರೆ ಬೆಟ್ಟಿ ಫ್ರೀಡನ್. ಕರ್ನಾಟಕದ ಸಂದರ್ಭದಲ್ಲಿಯೂ ಈ ಮಾತು ನಿಜವೇ. ಬ್ರಿಟಿಷರ ವಿರುದ್ಧದ ದಂಗೆಯು ಹಿಂಸಾತ್ಮಕ ಮತ್ತು ಅಹಿಂಸಾತ್ಮಕ ಸ್ವರೂಪವನ್ನು ಪಡೆದುಕೊಂಡಾಗ, ಆ ಎರಡೂ ಹಂತಗಳಲ್ಲಿಯೂ ನೇರ ಮತ್ತು ಪೂರಕ ಹೋರಾಟದಲ್ಲಿ ಮಹಿಳೆಯರು ತೊಡಗಿಸಿಕೊಂಡರು. ಜನಪದ ಹೆಣ್ಣಿನ ಈ ಅತಿಮುಖ್ಯ ಅಧ್ಯಾಯವನ್ನು, ಚರಿತ್ರೆಯ ಏಕಮುಖಿ ಗ್ರಹಿಕೆಗೆ ಒಳಗಾದ ಯುರೋಪಿಯನ್ ಮಾದರಿಯ ಹಿಸ್ಟರಿಯು ದಾಖಲಿಸುವುದಿಲ್ಲ. ಕರ್ನಾಟಕದ ಬಾರ್ಡೋಲಿ ಎಂದು ಖ್ಯಾತವಾದ ಅಂಕೋಲಾ ಸೀಮೆಯಲ್ಲಿ ಊರಿಗೆ ಊರೇ ಬ್ರಿಟಿಷರ ವಿರುದ್ಧ ದಂಗೆಯೇಳುತ್ತದೆ. ಕರನಿರಾಕರಣೆಯ ಹೋರಾಟವನ್ನು ದಮನಿಸಲು ಬ್ರಿಟಿಷರು ಗಂಡಸರನ್ನು ಜೈಲಿಗೆ ತುಂಬುತ್ತಾರೆ. ಮನೆಗಳನ್ನು ಜಪ್ತು ಮಾಡಿ, ಹೆಂಗಸರು–ಮಕ್ಕಳನ್ನು ಹೊರಗಟ್ಟುತ್ತಾರೆ. ಈ ಗಟ್ಟಿಗಿತ್ತಿಯರು ಊರ ದೇವಾಲಯದ ಮುಂದಿನ ಅಂಗಳದಲ್ಲಿ ಸಾಮೂಹಿಕ ಚಪ್ಪರ ಹಾಕಿ, ಒಲೆಹೂಡಿ, ಕಾಡಿನ ಸೊಪ್ಪು ಸದೆ ತಂದು, ಎಳೆ ಮಕ್ಕಳನ್ನು ಸಲುಹಿ, ಬಸಿರು–ಬಾಣಂತನಗಳನ್ನು ಸಂಭಾಳಿಸಿ 'ಗಾಂಧೀ ಮಹಾತ್ಮ ಕೀ ಜೈ' ಎಂಬ ಘೋಷವಾಕ್ಯದ ಮೂಲಕ ವರ್ಷಾನುಗಟ್ಟಲೆ ಕಂಪನಿ ಸರ್ಕಾರಕ್ಕೆ ಸಡ್ಡು ಹೊಡೆದು ಬದುಕಿದರು. ಅವರ ಧೀರತೆಯೆದುರು ಕಂಪನಿಯಾಡಳಿತ ದಂಗು ಬಡಿದು ಹೋಗಿತ್ತು. 'ಕಾಣಿ ಬೊಮ್ಮಕ್ಕ' ಎಂಬ ಅನಕ್ಷರಸ್ಥ ಹೆಣ್ಣುಮಗಳು ಕೈಯಲ್ಲಿ ಕಸಬರಿಗೆ ಹಿಡಿದು 'ಗೋ ಬ್ಯಾಕ್, ಗೋ ಬ್ಯಾಕ್' ಎಂದು ಬ್ರಿಟಿಷರನ್ನು ಬೆನ್ನಟ್ಟಿದ್ದು ಚರಿತ್ರೆ. ಈ ಹೆಂಗಸರ ಚೈತನ್ಯ ಮ್ಯಾಕ್ಸಿಂಗಾರ್ಕಿಯ ಮದರ್ ಕಾದಂಬರಿಯ ತಾಯಿಯ ಪಾತ್ರವನ್ನು ನೆನಪಿಸುವಂತಿತ್ತು. ಹಾವೇರಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಮೈಲಾರ ಮಹಾದೇವ ಮತ್ತವರ ಸಹಚರರು, ಭೂಗತರಾಗಿ ಕಾಡು–ಮೇಡು ಸುತ್ತುವಾಗ, ಹೋರಾಟಗಾರರ ಹೊಟ್ಟೆ–ನೆತ್ತಿ ನೋಡಿಕೊಂಡವರು ಹೆಂಗಸರು. ಕೊಡದಲ್ಲಿ ಸಾರಿಗೆ ರೊಟ್ಟಿಯನ್ನು ಕಳಿಸಿಕೊಂಡು, ನೀರಿಗೆ ಹೋಗುವವರಂತೆ ಬ್ರಿಟಿಷ್ ಸೈನಿಕರನ್ನು ಹಾದಾಡಿಕೊಂಡೇ ಅವರು ನಿಭಾಯಿಸಿದ ಜವಾಬ್ದಾರಿ ಅಸಾಧಾರಣವಾದದ್ದು. ತನ್ನನ್ನು ತಾನು ವೇಶ್ಯೆ ಎಂದು ಸುಳ್ಳು ಹೇಳಿಕೊಂಡು, ತನ್ನ ಮನೆಯಲ್ಲಿ ಸ್ವಾತಂತ್ರ್ಯ ಚಳುವಳಿಯ ಮೀಟಿಂಗ್ ನಡೆಯಗೊಟ್ಟವರನ್ನು, ಮೈಮೇಲಿದ್ದ ಗುಲಗುಂಜಿ ತೂಕದ ಬಂಗಾರವನ್ನು ಹರಿಜನೋದ್ಧಾರಕ್ಕೆ ಹಾಕಿದವರನ್ನು ಇತಿಹಾಸ ತನ್ನೊಳಗೆ ನಮೂದಿಸಿಕೊಂಡಿಲ್ಲ. ಇವರ್‍ಯಾರೂ ಸ್ವಾತಂತ್ರ್ಯ ಹೋರಾಟದ ಶರಾ ಪಡೆಯಲಿಲ್ಲ. ಪಿಂಚಣಿ ಬಯಸಲಿಲ್ಲ. ಊರೂರುಗಳಲ್ಲಿ ಹಿರಿಯರ ಜ್ಞಾಪಕ ಚಿತ್ರಶಾಲೆಯನ್ನು ತೆರೆದರೆ ಈ ಅಮೂಲ್ಯ ಸ್ಮೃತಿಗಳು ದೊರೆಯುತ್ತವೆ. [ಕನ್ನಡದ ಹಿರಿಯ ವಿಮರ್ಶಕರಾದ ಜಿ.ಎಚ್. ನಾಯಕರ 'ಬಾಳು' ಆತ್ಮಕಥನ ಮತ್ತು ಹಿರಿಯ ಸಾಹಿತಿ ವಿಷ್ಣು ನಾಯಕರ 'ಅಂಬಾರ' ಆತ್ಮಕಥನಗಳು ಈ ಕುರಿತ ಅಧಿಕೃತ ದಾಖಲೆಗಳಾಗಿವೆ.]

ಚರಿತ್ರೆಯಿಂದ ಅಲಕ್ಷಿತರಾದವರು ಚರಿತ್ರೆಯನ್ನು ಬರೆದರು. ಜನಪದ ಸಾಹಿತ್ಯದಲ್ಲಿ ಮಹಿಳೆಯರು, ನಾಡಿಗಾಗಿ, ಬಲಿದಾನವಾದವರ ಸ್ಮೃತಿಕೋಶವನ್ನು ಉಳಿಸಿ ತಂದರು. ರಾಣಿ ಚೆನ್ನಮ್ಮ, ಟಿಪ್ಪೂ ಸುಲ್ತಾನ, ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ, ಬೆಳವಡಿ ಮಲ್ಲಮ್ಮ ಇವರೆಲ್ಲರ ಕುರಿತು ಲಾವಣಿ ಕಟ್ಟಿದರು. ಹೀಗೆ ಅದೊಂದು ಅಮೂಲ್ಯ ದಾಖಲೆ.

*ಒಲಿಯ ಮ್ಯಾಲಿನ ಅಕ್ಕಿ ಉಕ್ಕುಕ್ಕಿ ಕುದಿವಾಗ*
*ಅವನಕ್ಕ ಅತ್ತಳ ಭೋರಾಡಿ । ಲಕ್ಷ್ಮಣನ*
*ಹೊಡೆದವರ ವಂಶ ಅಳಿಯಲಿ*

ಇಂತಹ ಅಗಣಿತ ಪದಚರಿತ್ರೆಗಳನ್ನು ಒದಗಿಸಿದರು. ಬ್ರಿಟಿಷರ ವಿರುದ್ಧದ ಹಲಗಲಿಯ ಬೇಡರ ಸಶಸ್ತ್ರ ಹೋರಾಟದಲ್ಲಿ ಹೆಂಗಸರೂ ಇದ್ದರು.

*ರಾಮಿ ಗುಂಡಿಲಿ ಜೋರಮಾಡಿ ಹೊಡೆದಳೊ*
*ಮೂರು ಮಂದಿ ಶಿರಕ*
*ಆರ ಕುದರಿಯ ಕಡದ ಸಿಡಿದಳೊ ಬಾಲನ ಸೂರಾಯಕ*

ಜನದಂಗೆಗಳನ್ನು ಮಹಿಳಾ ಭಾಗೀದಾರಿಕೆಯನ್ನು ಹೊರತುಪಡಿಸಿ ನೋಡುವುದೇ ಸಾಧ್ಯವಿಲ್ಲ.

ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿಯು ನಡೆದ ಪರಿಣಾಮವಾಗಿ ಭಾರತದ ದೇಶೀಯ ಕೈಗಾರಿಕೆಗಳು ದುರ್ಬಲವಾಗಿದ್ದವು. ಇದೇ ಅವಧಿಯು ಸುಧಾರಣಾವಾದದ ಕಾಲವಾಗಿತ್ತು. ವಸಾಹತುಶಾಹಿಯು ಭಾರತದ ಸಾಮಾಜಿಕ ಅಸಮಾನತೆಯನ್ನು ಅಪಮಾನಿಸುತ್ತಿತ್ತು. ಅದಕ್ಕೆ ಉತ್ತರವಾಗಿ ನೈತಿಕ ಸಮರ್ಥನೆಗೆ ತೊಡಗಿಸಿಕೊಂಡು, 'ಆದರ್ಶ ಆರ್ಯ ನಾರೀ' ಕಲ್ಪಿತವನ್ನು ಸ್ಥಾಪಿಸಲಾಯಿತು. ಇದರ ಮುಂದುವರಿಕೆಯ ರೂಪವಾಗಿ 'ಭಾರತೀಯ ಆಧುನಿಕ ಮಹಿಳೆ'ಯ ಚಹರೆಯು ರೂಪ ತಾಳಿತು. ಇದರಿಂದಾಗಿ ಅವಳ ಶಿಕ್ಷಣ–ಉದ್ಯೋಗಗಳು ಕುಟುಂಬ ಪಾತ್ರವನ್ನು ಮುಚ್ಚಟೆಯಾಗಿ ಪೋಷಿಸುವ ಮತ್ತೊಂದು ವಿಸ್ತರಣೆ ಮಾತ್ರವಾಯಿತು. ಈ ಸುಧಾರಣಾವಾದಿ ನಿಲುವು ಪಿತೃವ್ಯವಸ್ಥೆಯ ಒಳಗಿರುವ, ಮಧ್ಯಮವರ್ಗೀಯ ಮಹಿಳೆಯರನ್ನು ಮಾತ್ರ ಪರಿಗಣಿಸಿತು. ದೇಹ, ಶ್ರಮ ಸೇವಾವಲಯಗಳಿಗೆ ಸಂಬಂಧಿಸಿದ್ದ ಬಹುದೊಡ್ಡ ಮಹಿಳಾ ಸಮುದಾಯ ಅಲಕ್ಷಿತವಾಗಿಯೇ ಉಳಿಯಿತು. ಗಾಯತ್ರಿ ಸ್ಪಿವಾಕ್ ಅವರ 'ಕೆನ್ ದಿ ಸಬಾಲ್ಟರ್ನ್ ಸ್ಪೀಕ್?' ಕೃತಿಯು ಈ ಪ್ರಮೇಯವನ್ನೇ ಚರ್ಚಿಸುತ್ತದೆ.

*(ಮುಂದುವರಿಯುವುದು)*

**ಡಾ॥ ವಿನಯಾ ಒಕ್ಕುಂದ**
ನೆಮ್ಮದಿ, ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ
ಶ್ರೀನಗರ, ಧಾರವಾಡ – ೫೮೦೦೦೩
email : vinayaokkunda@gmail.com

## ತೋಟಗಾರ



ಕ್ರಿಶ್ಚಿಯನ್ ಬರ್ನಾರ್ಡ್ ಮತ್ತು ಹ್ಯಾಮಿಲ್ಟನ್ ನಾಕಿ

೧೯೬೭ರ ಕೊನೆಯಲ್ಲಿ ದಕ್ಷಿಣ ಆಫ್ರಿಕಾದ ಒಂದು ಆಸ್ಪತ್ರೆಯಲ್ಲಿ ಕ್ರಿಶ್ಚಿಯನ್ ಬರ್ನಾರ್ಡ್ ಮೊತ್ತ ಮೊದಲ ಹೃದಯದ ಕಸಿ ಮಾಡಿ ಪ್ರಪಂಚದ ಅತ್ಯಂತ ಹೆಸರಾಂತ ವೈದ್ಯನಾದ.

ಪ್ರಪಂಚದ ಮೂಲೆ ಮೂಲೆಗಳಿಗೆ ಕಳುಹಿಸಿದ ಚಿತ್ರಗಳೊಂದರಲ್ಲಿ ಅವನ ಸಹಾಯಕರಲ್ಲೊಬ್ಬನಾದ ಒಬ್ಬ ಕಪ್ಪು ಮನುಷ್ಯ ಕಾಣಿಸಿಕೊಳ್ಳುತ್ತಾನೆ. ಆಸ್ಪತ್ರೆಯ ಮುಖ್ಯಸ್ಥರು ಅವನು ಗುಟ್ಟಾಗಿ ನುಸುಳಿದ್ದಾನೆ ಎಂದು ಸಮಜಾಯಿಷಿ ನೀಡಿದರು.

ಆ ಸಮಯದಲ್ಲಿ ಹ್ಯಾಮಿಲ್ಟನ್ ನಾಕಿ ವಿದ್ಯುಚ್ಛಕ್ತಿ ಇಲ್ಲದ ಮತ್ತು ಹರಿಯುವ ನೀರಿಲ್ಲದ ಒಂದು ಗುಡಿಸಲಿನಲ್ಲಿ ವಾಸಿಸುತ್ತಿದ್ದ. ಅವನಿಗೆ ಯಾವುದೇ ಪ್ರಾವೀಣ್ಯದ ಪದವಿ ಇರಲಿಲ್ಲ. ಆದರೆ ಅವನು ಡಾ॥ ಬರ್ನಾರ್ಡ್‌ರ ಬಲಗೈ ಬಂಟನಾಗಿದ್ದ. ಅವನು ರಹಸ್ಯವಾಗಿ ಅವರ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ. ಕಾನೂನು ಅಥವಾ ರಿವಾಜು ಒಬ್ಬ ಕಪ್ಪು ಮನುಷ್ಯನು ಬಿಳಿಯರ ದೇಹ ಅಥವಾ ರಕ್ತವನ್ನು ಸ್ಪರ್ಶಿಸುವುದನ್ನು ನಿಷೇಧಿಸಿತ್ತು.

"ಪ್ರಾಯಶಃ ನನಗಿಂತ ಹೆಚ್ಚು ತಾಂತ್ರಿಕ ಕುಶಲತೆ ಅವನಲ್ಲಿತ್ತು" ಎಂದು ಸಾಯುವ ಮುನ್ನ ಬರ್ನಾರ್ಡ್ ಒಪ್ಪಿಕೊಂಡ.

ಅಂತಿಮ ವಿಶ್ಲೇಷಣೆಯಲ್ಲಿ, ಹಂದಿಗಳು ಮತ್ತು ನಾಯಿಗಳ ಹೃದಯಗಳ ಕಸಿ ಮಾಡುವುದನ್ನು ಪೂರ್ವಾಭ್ಯಾಸ ಮಾಡಿದ್ದ ವ್ಯಕ್ತಿಯ ಮಾಂತ್ರಿಕ ಕೈಬೆರಳುಗಳಿಲ್ಲದಿದ್ದರೆ ಈ ಸಾಧನೆ ಸಾಧ್ಯವಾಗುತ್ತಿರಲಿಲ್ಲವೆಂದೆನಿಸುತ್ತದೆ.

ಆಸ್ಪತ್ರೆಯ ನೌಕರರ ಪಟ್ಟಿಯಲ್ಲಿ ಹ್ಯಾಮಿಲ್ಟನ್ ನಾಕಿಯನ್ನು ಒಬ್ಬ ತೋಟಗಾರ ಎಂದು ದಾಖಲಿಸಲಾಗಿತ್ತು.

ಅವನು ತೋಟಗಾರನ ನಿವೃತ್ತಿ ವೇತನದೊಂದಿಗೇ ನಿವೃತ್ತನಾದ.

✶ ✶ ✶

## ಸೆರೆಮನೆಯಲ್ಲಿ ಅಪಾಯ

೧೯೯೮ರಲ್ಲಿ ರಾಷ್ಟ್ರೀಯ ಜೈಲು ವ್ಯವಸ್ಥೆಯ ನಿರ್ದೇಶಕ ಬೊಲಿವಿಯೊ ಅವರಿಗೆ ಕೋಚಬಂಬಾ ಕಣಿವೆಯಲ್ಲಿರುವ ಜೈಲಿನ ಎಲ್ಲ ಕೈದಿಗಳು ಸಹಿ ಮಾಡಿದ ಪತ್ರವೊಂದು ಬರುತ್ತದೆ.

ಎದುವಾರ್ದೋ ಗಲಿಯಾನೋನ ಜನನ ೧೯೪೦ನೇ ಸೆಪ್ಟೆಂಬರ್ ೩ರಂದು ಮಾಂಟಿವಿಡಿಯೋ, ಉರುಗ್ವೇನಲ್ಲಿ. ಆತ ಉರುಗ್ವೇಯ ಪತ್ರಿಕೋದ್ಯಮಿ, ಲೇಖಕ ಮತ್ತು ಕಾದಂಬರಿಕಾರ. ಅವನ 'ಓಪನ್ ವೇನ್ಸ್ ಆಫ್ ಲ್ಯಾಟಿನ್ ಅಮೆರಿಕಾ' (೧೯೭೧) ಪ್ರಪಂಚದ ಕಣ್ತೆರೆಸುವಂತಹ ಕೃತಿ. ೧೯೭೩ರಲ್ಲಿ ಒಂದು ಮಿಲಿಟರಿ ಕೂ ಉರುಗ್ವೇಯ ಅಧಿಕಾರವನ್ನು ವಹಿಸಿಕೊಂಡಿತು. ಗಲಿಯಾನೊ ಬಂಧನಕ್ಕೊಳಗಾದ. ಅಲ್ಲಿಂದ ತಪ್ಪಿಸಿಕೊಂಡು ಅರ್ಜೆಂಟೈನಾ ಸೇರಿದ, ಅಲ್ಲಿ 'ಕ್ರೈಸಿಸ್' ನಿಯತಕಾಲಿಕೆಯನ್ನು ಆರಂಭಿಸಿದ. ೧೯೮೫ರ ಪ್ರಾರಂಭದಲ್ಲಿ ಮತ್ತೆ ಮಾಂಟಿವಿಡಿಯೋಕ್ಕೆ ಬಂದ. ಅವನ ಬರಹಗಳಲ್ಲಿ ಸ್ವಾತಂತ್ರ್ಯ ಮತ್ತು ಗುಲಾಮಗಿರಿ, ಪ್ರಜಾಪ್ರಭುತ್ವ ಮತ್ತು ಅಧಿಕಾರಶಾಹಿಗಳ ನಡುವಿನ ಬಾಂಧವ್ಯವನ್ನು ಹೆಚ್ಚಾಗಿ ಕಾಣಬಹುದು. ಏಪ್ರಿಲ್ ೧೩, ೨೦೧೫ರಂದು ತನ್ನ ೭೪ನೇ ವಯಸ್ಸಿನಲ್ಲಿ ಮಾಂಟಿವಿಡಿಯೋದಲ್ಲಿ ತೀರಿಕೊಂಡ. ಅವನ "ಮಿರರ್ಸ್"ನಿಂದ ಆಯ್ದ ತುಣುಕುಗಳು ಇಲ್ಲಿವೆ.

ನೆರೆ ಹೊರೆಯಲ್ಲಿರುವ ಜನರು ಜೈಲಿನ ಗೋಡೆ ಹಾರಿ ತಾವು ಒಣಗಲು ಹಾಕಿದ ಬಟ್ಟೆಗಳನ್ನು ಕದ್ದೊಯ್ಯುತ್ತಿದ್ದಾರೆಂದೂ ಅದಕ್ಕಾಗಿ ಜೈಲಿನ ಗೋಡೆಯ ಎತ್ತರವನ್ನು ಹೆಚ್ಚಿಸಬೇಕೆಂದೂ ವಿನಂತಿಸಿ ಆ ಪತ್ರವನ್ನು ಕಳಿಸಿದ್ದಾರೆ.

ಇದಕ್ಕೆ ಬೇಕಾದ ಆರ್ಥಿಕ ಪೂರೈಕೆಗೆ ಅವಕಾಶವಿಲ್ಲದಿದ್ದರಿಂದ ಆ ಕಡೆಯಿಂದ ಏನೂ ಸ್ಪಂದಿಸಲಿಲ್ಲ. ಆದುದರಿಂದ ಕೈದಿಗಳಿಗೆ ತಾವೇ ಆ ಕೆಲಸವನ್ನು ಕೈಕೊಳ್ಳದೇ ಬೇರೆ ಉಪಾಯವಿರಲಿಲ್ಲ. ಅಲ್ಲಿರುವ ಇಟ್ಟಿಗೆ ಮತ್ತು ಒಣ ಹುಲ್ಲುಗಳನ್ನು ಉಪಯೋಗಿಸಿ ತಮ್ಮನ್ನು ನೆರೆಹೊರೆಯವರ ಕಾಟದಿಂದ ತಪ್ಪಿಸಿಕೊಳ್ಳುವಷ್ಟು ಜೈಲು ಗೋಡೆಯನ್ನು ಕಟ್ಟಿಕೊಳ್ಳಬೇಕಾಯಿತು, ಕಟ್ಟಿಕೊಂಡರು ಕೂಡ.

✶ ✶ ✶

## ಜೋರ್ಡಾನನ ಒಂದು ಕೌಟುಂಬಿಕ ಚಿತ್ರ

**ಯಾ**ಸ್ಮಿನ್ ಅಬ್ದುಲ್ಲಾ ೧೯೯೮ರಲ್ಲಿ ಒಂದು ದಿನ ಕಣ್ಣೀರ್ಗರೆಯುತ್ತ ಮನೆಗೆ ಬರುತ್ತಾಳೆ. ಮತ್ತೆ ಮತ್ತೆ ಅವಳು ಹೇಳುವುದಿಷ್ಟೇ:

"ನಾನು ಇನ್ನು ಹುಡುಗಿಯಾಗಿರಲಾರೆ."

ಅವಳು ತನ್ನ ಹಿರಿಯ ಸಹೋದರಿಯ ಭೇಟಿಗೆ ಹೋಗಿರುತ್ತಾಳೆ. ಅವಳ ಭಾವ ಅವಳ ಮೇಲೆ ಅತ್ಯಾಚಾರ ಎಸಗಿರುತ್ತಾನೆ. ಅವಳ ತಂದೆ ಬಂದು ಬೇಲ್‌ಗೆ ಪ್ರಾರ್ಥಿಸಿ ತಾನು ಅವಳ ಜವಾಬ್ದಾರಿ ತೆಗೆದುಕೊಳ್ಳುತ್ತೇನೆಂದು ಭರವಸೆ ಕೊಡುವವರೆಗೂ ಅವಳು ಜೈದಾ ಸೆರೆಮನೆಯಲ್ಲಿರುತ್ತಾಳೆ.

ಅಷ್ಟೊತ್ತಿಗೆ ಅವಳ ತಾಯಿ, ತಂದೆ, ಚಿಕ್ಕಪ್ಪ, ಚಿಕ್ಕಮ್ಮ ಮತ್ತು ಪೂರ ನೆರೆಹೊರೆಯವರೆಲ್ಲ ಸಭೆ ಸೇರಿ ತಮ್ಮ ಕುಟುಂಬದ ಮಾನವನ್ನು ರಕ್ತದೊಂದಿಗೆ ಕಾಪಾಡಿಕೊಳ್ಳುವ ನಿರ್ಧಾರ ತೆಗೆದುಕೊಳ್ಳುತ್ತಾರೆ.

ಯಾಸ್ಮಿನ್‌ಗೆ ಇನ್ನೂ ಹದಿನಾರು ವರ್ಷ.

ಸರ್ವಾನ್, ಅವಳ ಸಹೋದರ, ನಾಲ್ಕು ಗುಂಡುಗಳನ್ನು ಅವಳ ತಲೆಗೆ ಹೊಡೆಯುತ್ತಾನೆ.

ಸರ್ವಾನ್ ಆರು ತಿಂಗಳು ಸೆರೆಮನೆಯಲ್ಲಿ ಕಳೆಯುತ್ತಾನೆ. ಅವನನ್ನು ಧೀರ ನಾಯಕನಂತೆ ಪರಿಗಣಿಸಲಾಗುತ್ತದೆ. ಇಂಥ ಪ್ರಕರಣಗಳಲ್ಲಿ ತೊಡಗಿಸಿಕೊಂಡ ಇತರ ೨೭ ವ್ಯಕ್ತಿಗಳಿಗೆ ಅದೇ ರೀತಿಯ ಮನ್ನಣೆ. ಜೋರ್ಡಾನಿನಲ್ಲಿ ಸಂಭವಿಸಿದ ನಾಲ್ಕು ಪ್ರಕರಣಗಳಲ್ಲಿ ಒಂದು ಪ್ರಕರಣ, ಮರ್ಯಾದಾ ಹತ್ಯೆಯ ಅಪರಾಧವಾಗಿರುತ್ತದೆ.

ಕನ್ನಡಾನುವಾದ : **ವಿನಾಯಕ ಕುಲಕರ್ಣಿ**
ಬಿಕಾಸಿಪುರ, ಬೆಂಗಳೂರು

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

**HOSATHU** Kannada Monthly / SEPTEMBER 2019 / ₹ 25 (No. of Pages 64) Date of Publication : 26th of every month
**RNI Regd. KARKAN / 1999 / 00614. Karnataka Regd. KRNA/BGE/07/2018-2020**
**Licenced to post without prepayment. WPP No.14.**
**Posted at BENGALURU PSO, MYSORE ROAD, BENGALURU-560 026 on the 28th of every month.**

## ಕ್ರಿಯಾ–ನವಕರ್ನಾಟಕ ಜಂಟಿ ಪ್ರಕಟಣೆಯ

## ಮಾರ್ಕ್ಸ್ ೨೦೦– ಕ್ಯಾಪಿಟಲ್ ೧೫೦

## ಯೋಜನೆಯ ಕೊನೆಯ ಕೃತಿ

# ಬಂಡವಾಳ- ಸಂಪುಟ ೧

**ಬಿಡುಗಡೆ ಸಮಾರಂಭ : ಆಗಸ್ಟ್ 2, 2019**

ಕೊಂಡಜ್ಜಿ ಬಸಪ್ಪ ಸಭಾಂಗಣ, ಬೆಂಗಳೂರು
(ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಆವರಣ)



'ಬಂಡವಾಳ' ಇಂದು ಯಾಕೆ ಓದಬೇಕು? ಕುರಿತು ಗೋಷ್ಠಿಯಲ್ಲಿ ವಸಂತರಾಜ್ ಎನ್. ಕೆ., ಡಾ. ಬಿ. ಎಂ. ಪುಟ್ಟಯ್ಯ, ಪ್ರೊ. ವಿ. ಎನ್. ಲಕ್ಷ್ಮೀನಾರಾಯಣ




'ಬಂಡವಾಳ'ದ 150 ವರ್ಷಗಳು ಮತ್ತು ಎಡಪಂಥರ ಮರು–ಶೋಧನೆ ಕುರಿತು ಪ್ರೊ. ಪ್ರಭಾತ್ ಪಟ್ನಾಯಕ್ ಅವರಿಂದ ದಿಕ್ಸೂಚಿ ಭಾಷಣ. ವೇದಿಕೆಯಲ್ಲಿ ಡಾ. ಕಿರಣ್ ಗಾಜನೂರು, ಡಾ. ನಟರಾಜ ಹುಳಿಯಾರ್, ಜಿ. ವಿ. ಶ್ರೀರಾಮರೆಡ್ಡಿ, ಡಾ. ಎಚ್. ಎಸ್. ಅನುಪಮ, ಕೆ. ಎನ್. ಉಮೇಶ್







ನಾಡೋಜ ಡಾ. ಬರಗೂರು ರಾಮಚಂದ್ರಪ್ಪ ಅವರಿಂದ ಕೃತಿ ಬಿಡುಗಡೆ. ವೇದಿಕೆಯಲ್ಲಿ ವಸಂತರಾಜ್ ಎನ್. ಕೆ. , ಯು. ಬಸವರಾಜ್, ಎಂ. ಎಸ್. ಮೀನಾಕ್ಷಿಸುಂದರಂ. ಡಾ. ಸಿದ್ದನಗೌಡ ಪಾಟೀಲ, ನೀಲಾ ಕೆ., ಡಿ. ಎ. ವಿಜಯಭಾಸ್ಕರ್, ಸಾತಿ ಸುಂದರೇಶ್, ಎ. ರಮೇಶ ಉಡುಪ

**ಕಾರ್ಲ್ ಮಾರ್ಕ್ಸ್‌ರವರ ಮೇರು ಕೃತಿ 'ಬಂಡವಾಳ' ಸಂಪುಟ–1**

**ಕನ್ನಡ ಅನುವಾದಕರು**



ಎನ್. ಕೆ. ವಸಂತರಾಜ್, ಎ. ಎಸ್. ಆಚಾರ್ಯ, ಜಿ. ರಾಜಶೇಖರ್, ಯಡೂರು ಮಹಾಬಲ, ಶೈಲಜಾ ಮತ್ತು ಟಿ. ಎಸ್. ವೇಣುಗೋಪಾಲ, ಬಿ. ಶ್ರೀಪಾದ ಭಟ್, ವಿ. ಎನ್. ಲಕ್ಷ್ಮೀನಾರಾಯಣ, ಎನ್.ಕೆ. ವೇದರಾಜ್, ಎಸ್. ಶಿವಾನಂದ, ಡಾ. ವಿ. ಎಸ್. ಶ್ರೀಧರ್, ಡಾ. ಎಚ್. ಜಿ. ಜಯಲಕ್ಷ್ಮಿ, ಡಾ. ಕೃಷ್ಣಪ್ಪ ಕೊಂಚಾಡಿ, ನಗರಗೆರೆ ರಮೇಶ್, ಡಾ. ಟಿ. ವೆಂಕಟೇಶಮೂರ್ತಿ, ಡಾ. ಬಿ. ಆರ್. ಮಂಜುನಾಥ್, ಎಚ್. ಎಸ್. ಜಯಕುಮಾರ್, ಎಂ. ಸಿ. ಡೋಂಗ್ರೆ, ಎಚ್. ವಿ. ರಾವ್, ಡಾ. ಆರ್. ಶೋಭಾ



ತುಂಬಿದ ಸಭಾಂಗಣ